# ಚದುರಂಗದ ಮನೆ

(ಕಾದಂಬರಿ)

ತ. ರಾ. ಸು.

ಅಶೋಕ ಸಾಹಿತ್ಯ

ಬೆಂಗಳೂರು-2

# ಮೊದಲ ಮಾತು

ಒಮ್ಮೆ, ಕರ್ನಾಟಕದ ಸುಪ್ರಸಿದ್ಧ ನವ್ಯ ಕವಿ ಗೆ. ಗೋಪಾಲಕೃಷ್ಣ ಅಡಿಗರೊಂದಿಗೆ ಕಾದಂಬರಿಗಳ ಬಗ್ಗೆ ಚರ್ಚಿಸುತ್ತಿರುವಾಗ, ಕಾದಂಬರಿಗಳು ಮತ್ತು ಅವುಗಳ ಮುನ್ನುಡಿಗಳತ್ತ ಮಾತು ಹೊರಳಿ, ಅವರು ತಮಗೆ ನಿತ್ಯ ಸಹಜವಾದ ನಿಷ್ಠುರ ರೀತಿಯಲ್ಲಿ ಹೇಳಿದರು—

'ಇಲ್ಲಿ ನೋಡಿ ತ. ರಾ. ಸು., ಯಾವುದೇ ಕಾದಂಬರಿ ಹೇಗೇ ಇರಲಿ. ಒಬ್ಬ ಕಾದಂಬರಿಕಾರ ಬರೆವ ಹಲವಾರು ಕಾದಂಬರಿಗಳಲ್ಲಿ ಎಲ್ಲವೂ ಅತಿ ಶ್ರೇಷ್ಠವಾಗಿರಬೇಕೆಂದು ನಾನು ನಿರೀಕ್ಷಿಸುವುದಿಲ್ಲ. ಅದು ಸಾಧ್ಯವೂ ಅಲ್ಲ. ಅದರಲ್ಲೂ ಕಾದಂಬರಿಕಾರರ ಕಲೆಗೂ ಉದರಕ್ಕೂ ನಂಟಸ್ತಿಕೆ ಬೆಳೆದಾಗ, ಎಷ್ಟೋ ವೇಳೆ ಕಲೆ ಹಿಂದೆ ನಿಲ್ಲುತ್ತದೆ. ಆ ಪರಿಸ್ಥಿತಿಯಲ್ಲಿ, ಅದು ಅಸಹಜವಾದುದೇನೂ ಅಲ್ಲ. ಅದಕ್ಕಾಗಿ ನಾನು ಕಾದಂಬರಿಕಾರನನ್ನು ದೂಷಿಸುವುದಿಲ್ಲ. ಆದರೆ, ನಾನು ಉಳಿದ ಕಲಾವಿದರಂತೆ, ಕಾದಂಬರಿಕಾರರಲ್ಲಿ ನಿರೀಕ್ಷಿಸುವುದು ಪ್ರಾಮಾಣಿಕತೆ, 'ಮಿನಿಮಮ್' (minimum) ಪ್ರಾಮಾಣಿಕತೆ. ಅಂಗಡಿಯ ಬಿಲ್ಲನ್ನೋ, ಪ್ರಕಾಶಕರ ಒಪ್ಪಂದವನ್ನೋ ತೃಪ್ತಿಪಡಿಸಲು ಕಾದಂಬರಿಯನ್ನು ಬರೆದು, ಮಾರಿಗೆಯ ಸರಕಿಗೆ, ದೊಡ್ಡ ದೊಡ್ಡ ತತ್ತ್ವಗಳ ಮಾತುಗಳನ್ನುಳ್ಳ ಮುನ್ನುಡಿಯನ್ನು ಬರೆದು ವಾಚಕರನ್ನು ವಂಚಿಸುವುದು ಮಾತ್ರ ನನಗೆ ಸರಿಬೀಳುವುದಿಲ್ಲ. ಹಾಗೆ ಮಾಡುವ ಬದಲು, ಹೇಗೂ ಕಾದಂಬರಿಯ ಉದ್ದೇಶ ಮನೋರಂಜನೆಯಷ್ಟೆ, ಯಾವ ತತ್ತ್ವದ ತೊಳಲಾಟಕ್ಕೂ ಸಿಗದೆ, ಕೇವಲ ಮನೋರಂಜನೆಯ ದೃಷ್ಟಿಯಿಂದಲೇ ಕಾದಂಬರಿ ಏಕೆ ಬರೆಯಬಾರದು?"

ಅವರು ಹೇಳಿದ ಮಾತು ಸವಾಲಿನಂತಿತ್ತು. ಅವರ ಮಾತನ್ನು ಮೆಲುಕು ಹಾಕುತ್ತಾ ನಾನೂ ಯೋಚಿಸಿದೆ—" ಹಾಗೇಕೆ ಆಗಬಾರದು?"

ಆ ಯೋಚನೆಯ ಫಲ—'**ಚದುರಂಗದ ಮನೆ**'

ಈ ಕಾದಂಬರಿಯ ಉದ್ದೇಶ ಯಾವ ಸತ್ಯಸಾಧನೆಯೂ ಅಲ್ಲ, ಯಾವ ತತ್ತ್ವದ ಅನ್ವೇಷಣೆಯೂ ಅಲ್ಲ—ಕೇವಲ ಮನೋರಂಜನೆ.

ಇದನ್ನು ಓದುವ ವಾಚಕರಿಗೂ ಮನೋರಂಜನೆಯಾಗಿ, ಯಾ
ಸತ್ಯದ ಸಾಕ್ಷಾತ್ಕಾರವಾಗದಿದ್ದರೂ, ಓದಿದಷ್ಟು ಹೊತ್ತು ವೃಥಾ ದಂಡ
ವಾಗಲಿಲ್ಲ ಎನಿಸಿದರೆ ನಾನು ಕೃತಾರ್ಥ.

ಈ ಕಾದಂಬರಿಯನ್ನು ನನ್ನಿಂದ ಬರೆಯಿಸಿ ಪ್ರಕಟಿಸಿದ ಅಶೋಕ
ಸಾಹಿತ್ಯದ ಜಿ. ವಿ. ವೆಂಕಣ್ಣನವರಿಗೂ, ಇದನ್ನು ಮುದ್ರಿಸಿದ ವಾಣೀ
ಮುದ್ರಣಾಲಯದ ಸಿ. ಲಕ್ಷ್ಮೀನಾರಾಯಣರವರಿಗೂ ಸುಂದರವಾಗಿ ಮುಖ
ಚಿತ್ರವನ್ನು ರಚಿಸಿಕೊಟ್ಟ ಕಲಾವಿದ ಸು. ಲ. ನಾರಾಯಣರಿಗೂ ನನ್ನ
ಕೃತಜ್ಞತೆಗಳು.

೧–೭–೧೯೬೦ ತ. ರಾ. ಸು.

**ಗಿರಿಕನ್ಯಕಾ–ಯಾದವಗಿರಿ**

ಮೈಸೂರು

# ಚದುರಂಗದ ಮನೆ

ನಾಗರವಳ್ಳಿ ಅಷ್ಟು ದೊಡ್ಡ ಊರೇನೂ ಅಲ್ಲ.

ಸುಮಾರು ಆರು ಸಾವಿರ ಜನಸಂಖ್ಯೆಯ, ಹಳ್ಳಿಗೆ ಹಳ್ಳಿಯೂ ಅಲ್ಲ, ಪಟ್ಟಣಕ್ಕೆ ಪಟ್ಟಣವೂ ಅಲ್ಲ ಎನ್ನುವಂಥ ಇಬ್ಬಂದಿ ಊರು. ಅಷ್ಟು ಜನ ಸಂಖ್ಯೆಯ ಅಂಥ ಊರು, ಆ ಜಿಲ್ಲೆಯಲ್ಲೇ ಹತ್ತಾರು ಇದ್ದರೂ, ಉಳಿದಾವುದಕ್ಕೂ ನಾಗರವಳ್ಳಿಯಷ್ಟು ವ್ಯಾಪಕವಾದ ಪ್ರಖ್ಯಾತಿ ಇರಲಿಲ್ಲ.

ಆ ಪ್ರಖ್ಯಾತಿ ಕೇವಲ, ಇಂದು, ನಿನ್ನೆಯದಲ್ಲ. ಹತ್ತಾರು ತಲೆಮಾರುಗಳದು.

ಒಂದು ಕಾಲಕ್ಕೆ, ಎಂದರೆ, ಕರ್ನಾಟಕವನ್ನು ಆಳಿದ, ಹತ್ತಾರು ರಾಜ ಮನೆತನಗಳಲ್ಲಿ ಯಾವುದೋ ಒಂದು ಮನೆತನದ ಕಾಲಕ್ಕೆ, ಮಳೆಗಾಲದಲ್ಲಿ ನದಿಯಾಗಿ, ಉಳಿದ ಕಾಲದಲ್ಲಿ ಕಿರುತೊರೆಯಾಗಿ ಹರಿಯುವ 'ನಾಗರ ಹೊಳೆ' ಎಂಬ ನದಿಯ ದಂಡೆಯಮೇಲೆ ಬೆಳೆದ ನಾಗರವಳ್ಳಿ ಸುತ್ತ ಮುತ್ತಲ ಪ್ರಾಂತ್ಯದಲ್ಲೆಲ್ಲಾ ಹೆಸರುವಾಸಿಯಾದ, ನೂರಾರು ಜನ ವಿದ್ಯಾರ್ಥಿಗಳಿಗೆ, ಅಶನಾರ್ಥಿಗಳಿಗೆ ಆವಾಸಸ್ಥಾನವಾದ ಅಗ್ರಹಾರವಾಗಿತ್ತು ಎಂದು, ಇಂದಿಗೂ ಊರಮಧ್ಯದಲ್ಲಿರುವ ಶಂಕರನಾರಾಯಣಸ್ವಾಮಿ ದೇವಸ್ಥಾನದ ಮುಂದಿರುವ ಶಿಲಾಶಾಸನವೊಂದು ಹೇಳುತ್ತಿದೆ. ಆ ಘೋಷಣೆಗೆ ಮೂಕ ಸಾಕ್ಷಿಯಂತಿದೆ, ಊರಿನ ಮತ್ತೊಂದು ಭಾಗದಲ್ಲಿರುವ ಜೈನ ಬಸದಿಯ ಮುಂದಿನ ಬಸದಿಗಿಂತಲೂ ಶಿಥಿಲವಾದ ನಾಗೇಕಲ್ಲಿನಂತೆ ಸವೆದುಹೋದ ಬರಹದ ಕಲ್ಲಿನ ಶಾಸನ. ನಾಗರವಳ್ಳಿಯ ಪ್ರಾಚೀನ ವೈಭವಕ್ಕೆ ಸಾಕ್ಷಿಗಳಾದ ಆ ಶಾಸನಗಳನ್ನು ರಕ್ಷಿಸುವವರು ಇಂದು ಯಾರೂ ಇಲ್ಲವಾದರೂ, ಆ ಶಾಸನಗಳ ಶಿಥಿಲಾವಸ್ಥೆಯ ಆಧಾರದಮೇಲೆ, ಪುರಾತನ ಕಾಲದಲ್ಲಿ ತಮ್ಮ ಮತವರ್ಗದವರಿಗೇ ನಾಗರವಳ್ಳಿ ಮೀಸಲಾಗಿತ್ತು, ಉಳಿದವರು ನಂತರ ಬಂದು, ಗೆದ್ದಲು ಕಟ್ಟಿದ ಗೂಡಿನಲ್ಲಿ ವಾಸಿಸುವ ಹಾವಿನಂಥ ಪರದೇಶಿಗಳು ಎಂದು ವಾದಿಸುವ ಜೈನರು, ಬ್ರಾಹ್ಮಣರು ಮಾತ್ರ. ನಾಗರವಳ್ಳಿಯಲ್ಲಿ ಇಂದೂ ಇದ್ದಾರೆ. ಆ ಎರಡು ವರ್ಗಗಳ ಅಗ್ರಪ್ರತಿನಿಧಿಗಳಾದ ಮಠದ ಗುಂಡಾ ಜೋಯಿಸರು, ಶಾಸ್ತ್ರಿ ಅಂಗಡಿ ಪದ್ಮರಾಜಪ್ಪ ಇವರು,

ಈಗಲೂ ಎಂದಾದರೊಮ್ಮೆ. ಆ ಪ್ರಾಚೀನ ಇತಿಹಾಸವನ್ನು ಕೆಣಕಿ, ತಾವು ಮೇಲು, ತಾವು ಮೇಲು ಎಂದು ವಾದಿಸುವುದನ್ನು ಕೇಳಬಹುದು. ಪುರಾಣಿಕ ಪದ್ಮನಾಭಾಚಾರ್ಯರು, ತೀರ್ಥದ ಪಾರ್ಶ್ವನಾಥಯ್ಯ, ನಾಗರವಳ್ಳಿಯ ಪುರ ಸಭಾಚುನಾವಣೆಗೆ ಪರಸ್ಪರ ಪ್ರತಿಸ್ಪರ್ಧಿಗಳಾಗಿ ನಿಂತಾಗ, ಈ ವಾದ ಊರನ್ನು ಇಬ್ಭಾಗವಾಗಿ ಒಡೆದು, ಬ್ರಾಹ್ಮಣ, ಬ್ರಾಹ್ಮಣೇತರ ಎಂಬ ಪಂಗಡ ಗಳನ್ನು ಸೃಷ್ಟಿಮಾಡಿದುದು, ಇಂದೂ ನಾಗರವಳ್ಳಿಯ ಪ್ರಾಚೀನ ವೈಭವಕ್ಕೆ ಸಮಕಾಲೀನ ಸಾಕ್ಷಿಯಾಗಿದೆ. ನಾಗರವಳ್ಳಿಯಲ್ಲಿ ಮೂಲಭೂತ ಹಕ್ಕು ನಮ್ಮದು ಎಂದು ವಾದಿಸಲು, ಜೈನ, ಬ್ರಾಹ್ಮಣರಿಬ್ಬರೂ ಆ ಶಾಸನಗಳನ್ನು ಸಾಕ್ಷಿಯಾಗಿ ತೋರಿಸಿದರೂ, ಅದನ್ನು ಓದಬಲ್ಲವರು ಮಾತ್ರ ನಾಗರವಳ್ಳಿ ಯಲ್ಲಿ ಇಂದು ಯಾರೂ ಇಲ್ಲ. ಶಾಸನಗಳ, ದೇವಮಂದಿರಗಳ ಶಿಥಿಲಾ ವಸ್ಥೆಯೇ ಅವರ ವಾದಕ್ಕೆ ತಳಹದಿಯಾಗಿದೆ. ತಮ್ಮ ವ್ಯಾಜ್ಯಕ್ಕ ಆಸ್ತಿ ಭಾರವಾದ ಆ ಶಾಸನಗಳನ್ನು ನರಿವಡಿಸಿದರೆ, ಎಲ್ಲಿ ತಮ್ಮ ಹಕ್ಕಿಗೆ ಲೋಪ ಬರುವುದೋ ಏನೋ ಎಂಬ ಭೀತಿಯಿಂದಲೋ ಏನೋ, ಯಾರೂ ಅವುಗಳ ಪುನರುದ್ಧಾರ ಕಾರ್ಯಕ್ಕೆ ಪ್ರಯತ್ನಿಸಿಲ್ಲ! ಆದರೂ ಆ ಶಾಸನಗಳು, ಒಂದು ವಿಷಯಕ್ಕಾಗಿ, ಈ ಜಾತಿ ಜಗಳಕ್ಕೆ ಕೃತಜ್ಞವಾಗಿರಬೇಕಾಗಿದೆ. ಈ ವ್ಯಾಜ್ಯ ವೊಂದು ಇಲ್ಲದಿದ್ದಲ್ಲಿ, ಆ ಶಾಸನಗಳು ಎಂದೋ ಕಟುಕರ ಹಯಾತ್ ಸಾಬಿಯ ಮಸೆಗಲ್ಲಾಗಿ, ಅಗಸರ ಬಸಪ್ಪನ ಬಟ್ಟೆ ಒಗೆಯುವ ಬಂಡೆ ಯಾಗಿ, ಹೆಸರು ಹೇಳುವುದಕ್ಕೂ ಇಲ್ಲದಂತಾಗಿ ಹೋಗುತ್ತಿದ್ದುವು. ಆ ಶಾಸನಗಳ ಅದೃಷ್ಟ ಒಳ್ಳೆಯದು! ಅದಕ್ಕಿನ್ನೂ ಬಿಸಿಲು, ಗಾಳಿಯ ಭಾಗ್ಯ ವಿತ್ತು. ಎಂತಲೇ ಊರಿನಲ್ಲಿ ಜಗಳ ಹುಟ್ಟಿ, ಊರು ಕೆಟ್ಟರೂ, ಶಾಸನಗಳು ಉಳಿದುಕೊಂಡಿವೆ!!

ಆ ಶಾಸನಗಳಿಂದ ಈಗ ಇಷ್ಟು 'ಉಪಕಾರವಾಗುತ್ತಿದೆಯೆ, ಹೊರತಾಗಿ, ಅದನ್ನು ಓದಬಲ್ಲವರು ಯಾರೂ ನಾಗರವಳ್ಳಿಯಲ್ಲಿಲ್ಲ.

ಅದನ್ನು ಓದಬಲ್ಲ ಶಕ್ತಿಯಿದ್ದವರು, ಕಣ್ಮರೆಯಾದ ದಿನವೇ ನಾಗರವಳ್ಳಿಯ 'ಅಗ್ರಹಾರ' ವೆಂಬ ಖ್ಯಾತಿಯೂ ಕಣ್ಮರೆಯಾಯಿತು.

ಈಗ ನಾಗರವಳ್ಳಿಗೆ ಪ್ರಖ್ಯಾತಿ ಉಳಿದಿರುವುದು, ಅದರ ಹೆಸರು ಸೀಮೆಯ ಜನದ ನಾಲಿಗೆಯ ಮೇಲೆ ನಲಿದಾಡುತ್ತಿರುವುದು, ಚಮ

ಒಮ್ಮೆ ಅಗ್ರಹಾರವಾಗಿತ್ತು ಎಂಬ ಕಾರಣಕ್ಕಲ್ಲ, ಅಲ್ಲಿಯ ದೇವಸ್ಥಾನದ ಬೀದಿಯಲ್ಲಿರುವ 'ಚದುರಂಗದ ಮನೆ' ಯಿಂದಾಗಿ.

ಶಂಕರನಾರಾಯಣಸ್ವಾಮಿ ದೇವಾಲಯದ ಸುತ್ತಮುತ್ತಲೂ ಹರಡಿರುವ ಬ್ರಾಹ್ಮಣರ ಮನೆಗಳಲ್ಲೆಲ್ಲಾ ಎದ್ದು ಕಾಣುವ ಮನೆ ಚದುರಂಗದ ಮನೆ. ತನ್ನ ಎತ್ತರದಿಂದಷ್ಟೇ ಅಲ್ಲ, ಗಳಿತಾವಸ್ಥೆಯಿಂದಲೂ, ಆ ಮನೆ ಸುತ್ತಮುತ್ತಲ ಮನೆಗಳ ನಡುವೆ ಎದ್ದು ಕಾಣುತ್ತದೆ. ಜನವಾಸವಿದ್ದೂ, ಜನವಿಹಾರವಾಗಿ ಕಾಣುವ ಆ ಮನೆಯನ್ನು, ನಾಗರವಳ್ಳಿಯ ಜನ, ಊರಿಗೆ ಹೊಸದಾಗಿ ಬಂದವರಿಗೆ, ಹೆಮ್ಮೆಯಿಂದ ತೋರಿಸುವುದಲ್ಲದೆ, ಅತ್ಯಂತ ಉತ್ಸಾಹದಿಂದ ಆ ಮನೆಯ ಇತಿಹಾಸವನ್ನು ಬಣ್ಣಿಸುತ್ತಾರೆ. ನಾಗರವಳ್ಳಿಯ ಇತಿಹಾಸ ತಿಳಿಯದವರಿಗೂ, ಆ ಮನೆಯ ಇತಿಹಾಸ ತಿಳಿದಿದೆ.

ಆ ಮನೆ, ಆ ಇತಿಹಾಸದ ಮೂಲಪುರುಷ ಚದುರಂಗದ ಮಾಧವರಾಯ.

೨

ಮಾಧವರಾಯ ನಾಗರವಳ್ಳಿಯವನಾದುದೂ ಒಂದು ಇತಿಹಾಸವೇ.

ಮಾಧವರಾಯ ನಾಗರವಳ್ಳಿಯ ಮೂಲನಿವಾಸಿಯಲ್ಲ. ಪೂನಾದ ಕಡೆಯ ದೇಶಸ್ಥ ಬ್ರಾಹ್ಮಣ.

ಟಿಪ್ಪೂಸುಲ್ತಾನನ ಕಾಲದಲ್ಲಿ, ಕೇವಲ ಲೂಟಿ, ದರೋಡೆಯ ಉದ್ದೇಶದಿಂದಲೇ, ಮೈಸೂರು ಸೀಮೆಯ ಮೇಲೆ ದಂಡೆತ್ತಿಬಂದ ಪರಶುರಾಮ ಭಾವೂನ ಸೇನೆಯಲ್ಲಿ, ಮುತ್ಸದ್ದಿಯಾಗಿ, ಮಾಧವರಾಯ ಮೈಸೂರುಸೀಮೆಯಲ್ಲಿ ಕಾಲಿಟ್ಟ. ಪರಶುರಾಮ ಭಾವೂನ ಸೇನೆ, ಶೃಂಗೇರಿಯ ಮೇಲೆ ದಾಳಿಮಾಡಿ, ಶಾರದಾ ಅಮ್ಮನವರ ದೇವಾಲಯವನ್ನು ಲೂಟಿ ಮಾಡಿ, ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ, ಅಮ್ಮನವರ ಅಮೂಲ್ಯವಾದ ಆಭರಣಗಳನ್ನು ಅಪಹರಿಸಿದಾಗ, ಆ ಲೂಟಿಯಲ್ಲಿ ಮಾಧವರಾಯನೂ ಪಾಲುಗಾರನಾಗಿದ್ದ.

ಆ ಅಪವಿತ್ರ ಲೂಟಿಯ ದಿನದವರೆಗೂ, ಪರಶುರಾಮ ಭಾವುವಿನ ಅತ್ಯಂತ ವಿಶ್ವಾಸದ ನೌಕರನಾಗಿದ್ದ ಮಾಧವರಾಯನಿಗೆ, ಆಮ್ಮಾನವರ ದಿವ್ಯ ಆಭರಣಗಳನ್ನು ನೋಡಿ ಕಣ್ಣು ಕೋರೈಸಿ, ಮನದಲ್ಲಿ ಆಶೆ ಅಂಕುರಿಸಿತು. ಎಂತಲೇ ಆ ಒಡವೆಗಳಲ್ಲಿ ಅತ್ಯಂತ ಅಮೂಲ್ಯವಾದ ಒಡವೆಗಳನ್ನು ಲಪಟಾಯಿಸಿ, ರಾತ್ರೋರಾತ್ರಿ ಪರಶುರಾಮ ಭಾವೂವಿನ ಶಿಬಿರದಿಂದ ಕಣ್ಣು ಮರೆಯಾದ.

ಪರಶುರಾಮ ಭಾವುವಿನ ರಕ್ತತೃಷೆ, ಪ್ರತೀಕಾರ ಬುದ್ಧಿ ಎಂಥ ರಾಕ್ಷಸೀ ಸ್ವರೂಪದ್ದು ಎಂಬುದನ್ನು ಚೆನ್ನಾಗಿ ಬಲ್ಲ ಮಾಧವರಾಯ, ತಾನು ಅಪಹರಿಸಿ ತಂದ ಅಮೂಲ್ಯ ಅಭರಣಸಂಪತ್ತಿನೊಂದಿಗೆ, ತನ್ನ ಹೆಂಡತಿ ಮಕ್ಕಳಿದ್ದ ತನ್ನ ಸೀಮೆಗೆ ಹಿಂದಿರುಗುವ ಯೋಚನೆಯನ್ನು ಬಿಟ್ಟು ಅದುವರೆಗೂ ಕಂಡು ಕೇಳದ ನಾಗರವಳ್ಳಿಗೆ ಬಂದು ನೆಲಸಿದ.

ನಾಗರವಳ್ಳಿಗೆ ಬಂದ ಹೊಸದರಲ್ಲಿ ಮಾಧವರಾಯ ಸನ್ಯಾಸಿಯ ವೇಷಹಾಕಿಕೊಂಡು, ಅಷ್ಟುದಿನ ಶಂಕರನಾರಾಯಣ ಗುಡಿಯಲ್ಲೇ ಬಿಡಾರ ಮಾಡಿ, ತೋರಿಕೆಗೆ ಭಿಕ್ಷಾನ್ನದಿಂದ ಜೀವನ ಮಾಡುತ್ತಾ, ಕ್ರಮೇಣ ಊರಿನವರ ಪರಿಚಯ ಗಳಿಸಿಕೊಂಡ. ಹಾಗೆ ಮಾಧವರಾಯ, ನಾಗರವಳ್ಳಿಯಲ್ಲಿ ಪರಿಚಯಮಾಡಿಕೊಂಡವರಲ್ಲಿ ಮೊದಲಿಗ, ಅಕ್ಕಸಾಲೆ ಶ್ರೀಕಂಠಾಚಾರಿ. ಅವನ ಸಹಾಯದಿಂದ ಒಂದೆರಡು ಸಣ್ಣ ಪುಟ್ಟ ಆಭರಣ ಕರಗಿಸಿ ಅದರಿಂದ ಬಂದ ಚಿನ್ನವನ್ನು ಮಾರಿ, ಮಾಧವರಾಯ ನಾಗರವಳ್ಳಿಯಲ್ಲಿ ಬೇರು ಬಿಡಲು ದಾರಿ ಮಾಡಿಕೊಂಡ. ಕೇಳಿದವರಿಗೆಲ್ಲಾ ಔಪ್ರುದೋಲಡಾಯಿಯಲ್ಲಿ ತನ್ನ ಸಂಸಾರವೆಲ್ಲಾ ಹಾಳಾಗಿ ಹೋಯಿತೆಂದೂ, ಅದರಿಂದ ತಾನು ಜಿಗುಪ್ಸೆಗೊಂಡು ತನ್ನ ಊರು ಬಿಟ್ಟು ಅಲೆದಾಡುತ್ತಾ ನಾಗರವಳ್ಳಿಗೆ ಬಂದುದಾಗಿ ಹೇಳಿ, ಊರವರ ಸಹಾನುಭೂತಿಯನ್ನು ದೊರಕಿಸಿಕೊಂಡು, ಊರಿನಲ್ಲಿದ್ದ ನಾಲ್ಕುಜನ ಬ್ರಾಹ್ಮಣ ಮುಖ್ಯಸ್ಥರ ನೆರವು ಪಡೆದು ಇರಲು ಒಂದು ಮನೆಯನ್ನು ಮಾಡಿಕೊಂಡ.

ಇದೆಲ್ಲವೂ ಆದಾಗ ಮಾಧವರಾಯನಿಗೆ ಸುಮಾರು ನಲವತ್ತು–ನಲವತ್ತೈದು ವರ್ಷ ವಯಸ್ಸು. ಒಳ್ಳೇ ಸಂಸಾರಸುಖವನ್ನು ಅನುಭವಿಸುವ ಆ ಪ್ರಾಯದಲ್ಲಿ, ಕೈಯಲ್ಲಿ ಹಣ, ಮೈಯಲ್ಲಿ ಪ್ರಾಯ ಎರಡೂ ಇದ್ದ ಮಾಧವರಾಯ ತಾನೇ ಕೈಸುಟ್ಟುಕೊಂಡು, ಕೂಳು ಬೇಯಿಸಿಕೊಳ್ಳುವ

ದನ್ನು ಸಹಿಸಲಾಗದ ನಾಗರವಳ್ಳಿಯ ಬ್ರಾಹ್ಮಣರು ಕೆಲವರು, ಆತ ಮದುವೆ ಮಾಡಿಕೊಳ್ಳಬೇಕೆಂದು ಬೆನ್ನು ಬಿದ್ದರು.

‘ತನ್ನಂಥ ಊರು, ಕೇರಿ, ಕುಲ ಗೋತ್ರ ತಿಳಿಯದ ಬ್ರಾಹ್ಮಣನಿಗೆ ಯಾರು ಹೆಣ್ಣು ಕೊಡುತ್ತಾರೆ?’

—ಎಂದು ಮಾಧವರಾಯ ಹೇಳಿದರೂ. ಅವರು ಮಾತ್ರ ತಮ್ಮ ಪ್ರಯತ್ನ ಬಿಡಲಿಲ್ಲ.

ಅವರ ಪ್ರಯತ್ನ ಮಾಧವರಾಯನಿಗೂ ಅಪ್ರಿಯವಾಗಿರಲಿಲ್ಲ.

ಅದೆಲ್ಲದರ ಫಲವಾಗಿ, ಮಾಧವರಾಯ ನಾಗರವಳ್ಳಿಯಲ್ಲಿ ತಳ ಊರಿದ ಎರಡು–ಮೂರು ವರ್ಷಗಳಲ್ಲಿ, ನಾಗರವಳ್ಳಿಯ ಸಮೀಪದ ಸಿಂಧುವಳ್ಳಿಯಲ್ಲಿದ್ದ, ಬಡ ವಿಧವೆಯೊಬ್ಬಳ ಮಗಳು, ಮಾಧವರಾಯನ ವಧುವಾಗಿ ಬಂದು, ಸನ್ಯಾಸಿಯ ವೇಷದಲ್ಲಿದ್ದ ಮಾಧವರಾಯ ಸಂಸಾರಿಯಾಗುವಂತೆ ಮಾಡಿದಳು.

ಮದುವೆಯಾಗಿ ಮನೆ ಹೂಡಿದ ಬಳಿಕ ಮಾಧವರಾಯ ಸಂಪೂರ್ಣವಾಗಿ ನಾಗರವಳ್ಳಿಯವನೇ ಆದ.

ದಿನ ಕಳೆದಂತೆ ಮಾಧವರಾಯ, ತನ್ನ ಕಳ್ಳಗಂಟನ್ನು ನಗದಾಗಿ ಮಾರ್ಪಡಿಸಿ, ನಾಗರವಳ್ಳಿಯಲ್ಲಿ ಸ್ವಂತ ಮನೆ ಜಮೀನು ಮಾಡಿಕೊಂಡು ಊರಿನಲ್ಲಿ ಗಣ್ಯವ್ಯಕ್ತಿಯಾದ. ಊರಿನ ಹತ್ತಾರು ಜನ ಅವನನ್ನು ಆಶ್ರಯಿಸತೊಡಗಿದರು. ತನ್ನ ಜೀವನ ನಿರ್ವಹಣೆಗೆ ಯಾರ ನೆರವನ್ನೂ ಕೋರದ ಮಾಧವರಾಯನಿಗೂ, ಒಬ್ಬಿಬ್ಬರ ಸ್ನೇಹವಾದರೂ ಬೇಕಾಗಿತ್ತು—ಅವರೊಂದಿಗೆ ಚದುರಂಗದಾಟ ಆಡಲು.

ಚದುರಂಗದಾಟವೆಂದರೆ ಮಾಧವರಾಯನಿಗೆ ಪಂಚಪ್ರಾಣ; ಹೆಂಡತಿ ಸಂಸಾರಕ್ಕಿಂತಲೂ ಹೆಚ್ಚಿನ ಅಭಿಮಾನ ಆ ಆಟದಲ್ಲಿತ್ತು. ಮೊದಲಿನಿಂದಲೂ ಚದುರಂಗವೆಂದರೆ ಜೀವ ಕೊಡುತ್ತಿದ್ದ ಮಾಧವರಾಯನಿಗೆ ಸೇನೆಯಲ್ಲಿದ್ದಷ್ಟು ದಿನವೂ, ದಿನವೆಲ್ಲವನ್ನೂ ಆ ಆಟದಲ್ಲೇ ಕಳೆಯಲು ಅವಕಾಶವಿರಲಿಲ್ಲ. ಈಗ, ಆತನಿಗೆ ಜೀವನದಲ್ಲಿ ಆ ಆಟ ಆಡುವುದಲ್ಲದೆ, ಬೇರೆ ಉದ್ದೇಶವೇ ಇರಲಿಲ್ಲ. ತನ್ನೊಂದಿಗೆ ಆಟವಾಡುತ್ತಾ ಕಾಲ ಕಳೆಯಬಲ್ಲ ನಿರುದ್ಯೋಗಿಗಳ ಸಣ್ಣದೊಂದು ಗುಂಪನ್ನೇ ತನ್ನ ಸುತ್ತಲೂ ನಿರ್ಮಿಸಿಕೊಂಡ ಮಾಧವರಾಯ. ಆತನ ಮನೆ ಚದುರಂಗದ ಆಟಗಾರರ

ವಾಳಿಯವಾಯಿತು. ಆತನೊಂದಿಗೆ ಆಟಕ್ಕೆ ಕೂಡುತ್ತಿದ್ದವರಿಗೆ, ಊಟ ಉಪಚಾರಗಳೂ ಅಲ್ಲೇ ನಡೆಯುತ್ತಿತ್ತು. ವಾರವಾಗಲಿ, ತಿಂಗಳಾಗಲಿ, ತನ್ನೊಂದಿಗೆ ಆಟಕ್ಕೆ ಕೂಡುವವರನ್ನು ಮನೆಗೆಹೋಗಿ ಬನ್ನಿ ಎಂದು ಮಾಧವ ರಾಯ ಹೇಳುತ್ತಿರಲಿಲ್ಲ. ಒಳ್ಳೆ ಆಟಗಾರನಾದರೆ, ಅವನಿಗೆ ಊಟ-ಉಪ ಚಾರವೇನು. ಅಗತ್ಯ ಬಿದ್ದರೆ, ಅಂಥವರಿಗೆ ಹಣಕಾಸಿನ ಸಹಾಯವನ್ನೂ ಮಾಡಿ, ಅವರು ಗೃಹಕೃತ್ಯದ ಯೋಚನೆಯಿಂದ ಮುಕ್ತರಾಗುವಂತೆ ಮಾಡು ತ್ತಿದ್ದ. ಹೀಗಾಗಿ ಮಾಧವರಾಯನ ಮನೆ ಆಟ ಆಡುವವರು ನೋಡು ವವರು, ಹೊಗಳುವವರು, ಬುದ್ಧಿ ಹೇಳುವವರು—ಹೀಗೆ ಆಟಕ್ಕೆ ಸಂಬಂಧಿಸಿದ ಬಗೆಬಗೆಯ ಜನಗಳಿಂದ ಗಿಜಗುಟ್ಟಲಾರಂಭಿಸಿ ಸುತ್ತಮುತ್ತಲ ಪ್ರಾಂತ್ಯ ದಲ್ಲೆಲ್ಲಾ ಮಾಧವರಾಯ ಬಹುಬೇಗ ಚದುರಂಗದ ಮಾಧವರಾಯ ಎಂದು ಹೆಸರಾದ ; ಆ ಕಾಲದಲ್ಲೇ ಆತನ ಮನೆಗೆ ' ಚದುರಂಗದ ಮನೆ' ಎಂದು ಹೆಸರು ಬಿದ್ದು, ಆತ ತಾನು ಸ್ವತಃ ಆಡುವುದಕ್ಕಾಗಿ ಮಾಡಿಸಿಕೊಂಡ ಬೆಳ್ಳಿಯ, ಬಂಗಾರದ ಚದುರಂಗದ ಮನೆ, ಬೆಳ್ಳಿ—ಬಂಗಾರದ 'ಕಾಯಿ'ಗಳ ಕಥೆ ಸುತ್ತಮುತ್ತಲ ಸೀಮೆಯಲ್ಲೆಲ್ಲಾ ಹರಡಿತು.

ಮೊದಮೊದಲು ಕೇವಲ ವಿನೋದವಾಗಿ ಆರಂಭವಾದ ಆಟ, ಜೂಜಾಗಿ ಪರ್ಯವಸಾನವಾಗಲೂ ಹೆಚ್ಚು ಕಾಲ ಹಿಡಿಯಲಿಲ್ಲ. ಗೆದ್ದವ ರಿಗೆ ಏನಾದರೂ ಲಾಭಸಿಗುವ ಆಸೆಯಿಲ್ಲದಿದ್ದಲ್ಲಿ, ಆಟದಲ್ಲಿ ಸಾಕಷ್ಟು ಬಿಸಿ ಇರುವುದಿಲ್ಲವೆಂದು ಮಾಧವರಾಯನೇ ಪಂದ್ಯ ಕಟ್ಟುವ ರುಚಿ ತೋರಿಸಿದ.

ಕಷ್ಟಪಟ್ಟು ಹಣ ಗಳಿಸುವ ಅವಶ್ಯಕತೆ ಇಲ್ಲದೆ, ಅನಾಯಾಸದ ಹಣವೇ ಸಾಕಷ್ಟು ಇದ್ದ ಮಾಧವರಾಯನಿಗೆ, ಆಟದ ಸೋಲು-ಗೆಲವುಗಳ ಪರಿವೆ ಇರಲಿಲ್ಲ. ಅವನಿಗೆ ಬೇಕಾದುದು ಕೇವಲ ಆಟ, ಅದರ ಕಾವು: ಆಟದ ಅಮಲು ನೆತ್ತಿಗೇರಿ, ಮೈಮರೆಯುವ ಸಲುವಾಗಿ ಮಾಧವರಾಯ ಏನುಬೇಕಾದರೂ ಮಾಡಲು ಸಿದ್ಧನಿದ್ದ.

ಮಾಧವರಾಯನಿಗೆ ಚದುರಂಗದಾಟದ ಬಗ್ಗೆ ಎಷ್ಟು ಹುಚ್ಚು ಇತ್ತೋ, ಅಷ್ಟು ಕುಶಲತೆ ಇರಲಿಲ್ಲ. ಆದರೆ ಪರರ ಕುಶಲತೆಯನ್ನು ಮೆಚ್ಚುವ ಔದಾರ್ಯವಿತ್ತು. ಎಂತಲೇ ತಾನು ಆಟದಲ್ಲಿ ಗೆದ್ದರೂ, ಇದಿರಾಳಿ ತನ್ನೊಂದಿಗೆ ಸಾಕಷ್ಟು ಚತುರತೆಯಿಂದ ಸೆಣಸಿದ್ದರೆ, ಅವನ ಕುಶಲತೆ ಯನ್ನು ಮೆಚ್ಚಿ, ತಾನೇ ಆತನಿಗೆ ಬಹುಮಾನ ಕೊಡುತ್ತಿದ್ದ. ಹಾಗೆ ಬಹಳ

ಚನ್ನಾಗಿ ಆಟವಾಡುವವರನ್ನು ತಿಂಗಳುಗಟ್ಟಲೆ, ವರ್ಷಗಟ್ಟಲೆ ತನ್ನ ಮನೆಯಲ್ಲಿಟ್ಟುಕೊಂಡು ಅವರ ಆಜೂಜುವಾರಿ ಮಾಡಿ ಸಂತೋಷಪಡುತ್ತಿದ್ದ; ಅವರು ತನ್ನನ್ನು ಸೋಲಿಸಿದ ಚಾತುರಿಯನ್ನು ತಾನೇ ಬಾಯಿತುಂಬ ಹೊಗಳುತ್ತಿದ್ದ.

ಮಾಧವರಾಯನ ಈ ಗುಣದ ಕೀರ್ತಿ ವ್ಯಾಪಿಸಿದ ಹಾಗೆ ನಾಗರವಳ್ಳಿಯ ಜನರಷ್ಟೇ ಅಲ್ಲ, ಸುತ್ತಮುತ್ತಲ ನೂರು ಮೈಲಿ ಸುತ್ತಳತೆಯೊಳಗಿನ ಊರುಗಳ ಚ ದು ರಂ ಗ ದಾ ಟ ಗಾ ರ ರೂ ನಾಗರವಳ್ಳಿಗೆ ಬಂದು ಮುರುಕಲಾರಂಭಿಸಿದರು. ಎಷ್ಟೋಜನ, ಜೀವನ ನಿರ್ವಹಣೆಗೆ ಬೇರೆ ದಾರಿಯಿಲ್ಲದ ಚದುರಂಗದ ಆಟಗಾರರು, ಮಾಧವರಾಯನ ಆಶ್ರಯದಲ್ಲಿ, ನಾಗರವಳ್ಳಿಯಲ್ಲೇ ಬೀಡುಬಿಟ್ಟರು.

ತನ್ನ ಸುತ್ತಮುತ್ತ ಜನಸಂದಣಿ ಹೆಚ್ಚಿದಷ್ಟೂ ಮಾಧವರಾಯನ ಆಟದ ಹುಚ್ಚೂ ಹೆಚ್ಚಿತು.

ಮಾಧವರಾಯನ ಚದುರಂಗದಾಟದ ಜೀವನದ ಅತ್ಯಂತ ಪ್ರಖ್ಯಾತವಾದ, ನಾಗವಳ್ಳಿಯ ಇತಿಹಾಸದಲ್ಲೇ ಚಿರಸ್ಥಾಯಿಯಾದ ಘಟನೆ, ಆತ ಚದುರಂಗದಾಟವಾಡಲು ಸೂಳೆಯರನ್ನು ಕರೆಸಿದುದು.

ಆ ಘಟನೆ ನಡೆದದ್ದು ಹೀಗೆ :

## ೩

ನಾಗರವಳ್ಳಿಗೆ ಸುಮಾರುಅರವತ್ತು-ಎಪ್ಪತ್ತುಮೈಲಿಗಳ ದೂರದಲ್ಲಿದ್ದ ಅಮರಾಪುರದಲ್ಲಿ ಚಂದ್ರಯ್ಯ ಎಂಬ ಅತ್ಯಂತ ಹೆಸರುವಾಸಿಯಾದ ಚದುರಂಗದ ಆಟಗಾರನೊಬ್ಬನಿದ್ದ. ಹಲವಾರು ರಾಜಾಸ್ಥಾನಗಳು, ಪಾಳಯಗಾರರ ದರ್ಬಾರಿನವರೆಗೂ ವ್ಯಾಪಿಸಿದ್ದ ಚಂದ್ರಯ್ಯನ ಕೀರ್ತಿಯನ್ನು ಎಷ್ಟೋ ಜನ ಆಟಗಾರರಿಂದ ಮಾಧವರಾಯನೂ ಕೇಳಿದ್ದ. ಚಂದ್ರಯ್ಯನ ಕೌಶಲ್ಯದ ಬಗ್ಗೆ ಬಗೆ ಬಗೆಯ ಕಥೆಗಳನ್ನು ಕೇಳಿದ ಮಾಧವರಾಯನಿಗೆ, ತಾನು ಒಮ್ಮೆ ಅವನೊಂದಿಗೆ ಚದುರಂಗವಾಡಿ, ಆ ಆನಂದವನ್ನು ಅನುಭವಿಸಬೇಕೆಂಬ ಚಪಲ ಮೂಡಿತು. ಆ ಚಪಲವನ್ನು ತೃಪ್ತಿ

ಹಿಡಿಸಿಕೊಳ್ಳುವ ಸಲುವಾಗಿಯೇ, ಮಾಧವರಾಯ, ಚಂದ್ರಯ್ಯನನ್ನು ನಾಗರವಳ್ಳಿಗೆ ಕರೆತರಲು, ತನ್ನ ಇಬ್ಬರು ಆಪ್ತರನ್ನು ಆಹ್ವಾನದೊಂದಿಗೆ ಅಮರಾಪುರಕ್ಕೆ ಕಳಿಸಿದ.

ರಾಜಾಸ್ಥಾನಗಳ ರುಚಿಕಂಡ ಚಂದ್ರಯ್ಯ ಅಷ್ಟು ಸುಲಭವಾಗಿ ನಾಗರವಳ್ಳಿಗೆ ಬರಲು ಒಪ್ಪಲಿಲ್ಲ. ಮಾಧವರಾಯನ ಕಡೆಯವರನ್ನು ನಾಲ್ಕಾರುಸಲ ಅಮರಾಪುರಕ್ಕೆ ಓಡಾಡಿಸಿ, ತಾನು ಹಾಕಿದ ಷೋಡಶೋಪಚಾರಗಳ ಷರತ್ತುಗಳೆಲ್ಲವನ್ನೂ ಮಾಧವರಾಯ ಒಪ್ಪಿಕೊಂಡಬಳಿಕ ನಾಗರವಳ್ಳಿಗೆ ಆಗಮಿಸಿದ.

ಚಂದ್ರಯ್ಯ ನಾಗರವಳ್ಳಿಗೆ ಬರುವ ಸುದ್ದಿ, ಅವನ ಪ್ರಖ್ಯಾತಿಯ ಕಥೆಗಳೊಂದಿಗೆ ಸುತ್ತಮುತ್ತಲೆಲ್ಲಾ, ಚಂದ್ರಯ್ಯ ಬರುವ ಮೊದಲೇ ಹರಡಿದ್ದುದರಿಂದ, ಅವನ ಆಟದ ಕೌಶಲ್ಯವನ್ನು ಕಣ್ಣಾರೆ ಕಾಣಲು, ಸಾಧ್ಯವಾದರೆ ಅವನೊಂದಿಗೆ ಒಂದು ಆಟ ಆಡಿ, ತಮ್ಮ ಕೈ ಆತನಿಗೆ ತೋರಿಸಲು, ಹತ್ತಾರು ಊರುಗಳ ಚದುರಂಗ ಪ್ರೇಮಿಗಳು, ನಾಗರವಳ್ಳಿಗೆ ಬಂದು ನೆರೆದರು.

ಅವರೆಲ್ಲರಿಗೂ ಮಾಧವರಾಯನ ಮನೆಯೇ ಬಿಡಾರವಾಯಿತು.

ತನ್ನ ಛತ್ರಿಹಿಡಿಯುವ ಆಳು, ಎಲೆ ಅಡಿಕೆ ಚೀಲ ಹಿಡಿಯುವ ಆಳು ನಶ್ಯ ತಿಕ್ಕಿಕೊಡುವ ಆಳುಗಳ ಪರಿವಾರದೊಂದಿಗೆ. ರಾಜಸ್ಥಾನದಿಂದ ಬಂದ ಚಂದ್ರಯ್ಯನೊಂದಿಗೆ ಒಂದೆರಡು ಆಟ ಆಡಿದಬಳಿಕ, ಸ್ವತಃ ನಿಪುಣ ಆಟಗಾರನಲ್ಲದಿದ್ದರೂ ಉತ್ತಮ ಆಟಗಾರಿಕೆಯನ್ನು ಅರಿಯಬಲ್ಲ ಮಾಧವರಾಯನಿಗೂ ಚಂದ್ರಯ್ಯನ ಪ್ರಖ್ಯಾತಿ, ಕೇವಲ ಹೊಗಳಿಕೆಯ ಮಾತಲ್ಲ, ಸಾಧಾರವಾದದ್ದು ಎಂಬುದು ಮನವರಿಕೆಯಾಯಿತು.

ಚಂದ್ರಯ್ಯನ ಆಟಗಾರಿಕೆಯಲ್ಲಿ, ಮಾಧವರಾಯ ಹಿಂದೆಂದೂ ಕಾಣದ ಚತುರತೆಯಿತ್ತು. ಉಳಿದವರ ಹಾಗೆ ಆತ 'ರಕ್ಷಣೆ' 'ಆಘಾತ' 'ದಾಳಿಯ' ಕ್ರಮವನ್ನೇ ತನ್ನ ಆಟಗಾರಿಕೆಯ ಆಧಾರವಾಗಿ ಉಪಯೋಗಿಸದೆ, ಆರಂಭದ 'ಸೇದೆ'ಗಳ ಎರಡು ನಡೆಯಲ್ಲೇ, ಇದಿರಾಳಿಯ ಆಟಗಾರಿಕೆಯ ಧ್ವನಿಸುವನ್ನು ಅರಿತುಕೊಂಡು ತನ್ನ ಆಟಗಾರಿಕೆಯನ್ನು ಅದಕ್ಕೆ ಅನುಗುಣವಾಗಿ ರೂಪಗೊಳಿಸಿಕೊಳ್ಳುತ್ತಿದ್ದ. ತನ್ನ ಒಂದು ಕಾಯನ್ನು ನಡೆಸುವಾಗ, ಅದರ ಪರಿಣಾಮವಾಗಿ, ಇದಿರಾಳಿ ನಡೆಸಬಹುದಾದ ಹತ್ತು ನಡೆಗಳನ್ನು

ಊಹಿಸಿ ನಡೆಸುತ್ತಿದ್ದ. ಅಷ್ಟೇ ಅಲ್ಲ, ಆತನ ಒಂದೊಂದು ನಡೆಯೂ ಇದಿರಾಳಿಯ ಕೈಗೆ ಶೃಂಖಲೆಯಂತೆ ಬಿಗಿದು, ಆತ ನಿರ್ಧರಿಸಿದ ದಾರಿಯಲ್ಲಿ ಕಾಯನ್ನು ನಡೆಸುವಂತೆ ಮಾಡುತ್ತಿತ್ತು. ಆತನ ಊಹಾಶಕ್ತಿ, ನಡೆಗಳ ವೈವಿಧ್ಯ, ಇವುಗಳಿಂದಾಗಿ, ಆತನನ್ನು ಗೆಲ್ಲಲು ಸಾಧ್ಯವಿಲ್ಲವಾದರೂ, ಸಾಕಷ್ಟು ಹೊತ್ತು ಹೆಣಗಿಸುತ್ತೇನೆ ಎಂದುಕೊಂಡು ಬಂದ ಬಿಗಿಯಾದ ಆಟಗಾರರೂ, ಹತ್ತು ನಿಮಿಷ, ಇಪ್ಪತ್ತು ನಿಮಿಷ ಹೆಚ್ಚೆಂದರೆ ಅರ್ಧಗಂಟೆಯಲ್ಲಿ ತಮ್ಮ ರಾಜನನ್ನು ಚಂದ್ರಯ್ಯನ ಕಾಯಿಗೆ ಶರಣಾಗತಿಗೆ ಒಪ್ಪಿಸಿ ಏಳುತ್ತಿದ್ದರು.

ಚಂದ್ರಯ್ಯನ ಆಟಗಾರಿಕೆಯ ಈ ಚಾತುರ್ಯ, ಮಾಧವರಾಯನ ಪಾಲಿಗೆ ರಸದೌತಣವಾಗಿ, ಮೂರುದಿನಗಳ ಮಟ್ಟಿಗೆ ಎಂದು ಬಂದ ಚಂದ್ರಯ್ಯನನ್ನು, ಅವನು ಕೇಳಿದ ಮೆಚ್ಚುಕೊಟ್ಟು, ಒಂದು ವಾರದವರೆಗೂ ನಿಲ್ಲಿಸಿಕೊಂಡ.

ಮಾಧವರಾಯನ ಔದಾರ್ಯ, ರಸಿಕತೆ, ಆಟದ ಅಭಿಮಾನಗಳು, ಚಂದ್ರಯ್ಯನಿಗೂ ಅಚ್ಚುಮೆಚ್ಚಾಗಿ ಕೇವಲ ಆಟಗಾರನಾಗಿ ಬಂದ ಚಂದ್ರಯ್ಯ, ಮಾಧವರಾಯನ ಆಪ್ತಮಿತ್ರನಾದ.

ತಾನು ಅಲ್ಲಿಂದ ಅಮರಾಪುರಕ್ಕೆ ಹಿಂತಿರುಗುವ ದಿನ, ಮಾಧವರಾಯ ತನಗೆ ಕೊಟ್ಟ ಐದುನೂರು ವರಹ ಕಾಣಿಕೆ, ಶಾಲು ಜೋಡಿ, ಜರತಾರಿಯ ಪಂಚೆ, ವಸ್ತ್ರಗಳು, ತನ್ನ ಮನೆಗೆ ಆರು ತಿಂಗಳ ಜೀವನಕ್ಕಾಗುವಷ್ಟು ಮಟ್ಟಿಗೆ. ಬಂಡಿಯಲ್ಲಿ ತುಂಬಿದ ಗ್ರಾಸವನ್ನು ನೋಡಿ. ಚಂದ್ರಯ್ಯನ ಕಣ್ಣಲ್ಲಿನೀರು ತುಂಬಿ—

'ನೀವು ರಾಜರಾಗಿ ಹುಟ್ಟಬೇಕಾದವರು. ಪೂರ್ವಪುಣ್ಯದಲ್ಲಿ ಎಲ್ಲೋ ಕೊಂಚ ಅರಕೆಯಾಗಿ, ನಮ್ಮಹಾಗೆ ಸಾಮಾನ್ಯ ಮನುಷ್ಯರಾಗಿ ಹುಟ್ಟಿದಿರಿ ; ಅಷ್ಟೆ. ನಾನೂ ಎಂತೆಂತಹ ಧಣಿಗಳನ್ನೋ ನೋಡಿದೆ. ಆದರೆ ನಿಮ್ಮಂತಹ ಬಿಚ್ಚುಗೈ 'ರಾಜಮನುಷ್ಯ' ರನ್ನು ಬೇರೆಲ್ಲೂ ಕಾಣಲಿಲ್ಲ.'

—ಎಂದು ಮುಕ್ತಕಂಠದಿಂದ ಮಾಧವರಾಯನನ್ನು ಹೊಗಳಿದ.

'ಸೈ, ಸೈ, ನಾನು ಮಾಡಿದುದು ಏನು ಹೆಚ್ಚು ? ದೇವರು ನನಗೆ ನಿನ್ನನ್ನು ಸಾಕುವ ಯೋಗ್ಯತೆ ಕೊಡಲಿಲ್ಲ. ಕೊಟ್ಟಿದ್ದರೆ ನಿನ್ನನ್ನು ಅಮರಾ

ಪುರಕ್ಕೆ ಹೋಗಲೇಬಿಡುತ್ತಿರಲಿಲ್ಲ. ಅಷ್ಟು ಭಾಗ್ಯವಂತೂ ನನಗಿಲ್ಲ. ಆದರೆ ಇವತ್ತು ಬಂದು ಹೋದದ್ದು, ಇವತ್ತು ಕೊಟ್ಟದ್ದೇ ಕೊನೆ ಎಂದುಕೋ ಬೇಡ ಚಂದ್ರಯ್ಯ. ಯಾವತ್ತೇ ಆದರೂ ಸರಿ, ನನ್ನಿಂದ ನಿನಗೇನು ಸಹಾಯ ಆಗಬೇಕಾಗಿದ್ದರೂ ಹೇಳಿಕಳಿಸು. ಮಧ್ಯರಾತ್ರಿಯಲ್ಲಾದರೂ ಸರಿಯೇ—ಇಲ್ಲ ಎನ್ನುವುದಿಲ್ಲ.'

—ಎಂದು ಮಾಧವರಾಯನೂ ಶಾಶ್ವತಸ್ನೇಹದ ವಾಗ್ದಾನ ಮಾಡಿದ.

ಮಾಧವರಾಯ ಹೇಳಿದುದನ್ನು ಕೇಳಿ ಚಂದ್ರಯ್ಯನ ಮನಸ್ಸಿನಲ್ಲಿ, ಬಹುದಿನಗಳಿಂದಲೂ ಸುಪ್ತವಾಗಿ ಮಿಡಿಯುತ್ತಿದ್ದ ಆಸೆಯೊಂದು ಕುಡಿಯಿಟ್ಟು—

"ಉಂಡು ಉಡೋಕೆ ನಿಮ್ಮಂಥವರ ಆಶೀರ್ವಾದದಿಂದ ದೇವರು ನನಗೇನೂ ಕಡಮೆ ಮಾಡಿಲ್ಲ ರಾಯರೇ. ನಾನು ಎರಡುಹೊತ್ತು ನೆಮ್ಮದಿಯಾಗಿ ಉಂಡು, ಮನೆಬಾಗಿಲಿಗೆ ಬಂದವರಿಗೆ, ಒಪ್ಪತ್ತು ಊಟಹಾಕುವಷ್ಟು ಮಟ್ಟಿಗೆ ಯೋಗ್ಯತೆಯನ್ನು ದೇವರು ನನಗೂ ಕೊಟ್ಟಿದಾನೆ. ನನ್ನ ಸಣ್ಣ ಪುಟ್ಟ ಆಸೆಗಳನ್ನು ತೀರಿಸಿಕೊಳ್ಳುವ ಶಕ್ತಿಯೂ ಇದೆ. ಅದಾವುದಕ್ಕೂ ನನಗೆ ಕೊರತೆ ಇಲ್ಲ. ಆದರೆ, ಬಹಳ ದಿನಗಳಿಂದ ನನ್ನ ಮನಸ್ಸಿನಲ್ಲಿ, ನನ್ನಂಥ ಮಾಮೂಲಿ ಮನುಷ್ಯನಿಂದ ನೀಗಿಸಲಿಕ್ಕಾಗದಂಥ ಆಸೆಯೊಂದು ಇದೆ. ಅದು ತೀರಬೇಕು ಎಂದರೆ, ನಿಮ್ಮಂಥ ಶ್ರೀಮಂತರೇ ಮನಸ್ಸು ಮಾಡಬೇಕು.'

'ಅದೇನು ಹೇಳು ಚಂದ್ರಯ್ಯ? ನಿನ್ನ ಆಸೆ ತೀರಿಸುವುದು ನನ್ನಿಂದ ಆಗುವಂಥ ಕೆಲಸವಾದರೆ, ಖಂಡಿತ ತೀರಿಸುತ್ತೇನೆ. ನಿನ್ನ ಆಸೆ ಏನಿದೆಯೋ ಸಂಕೋಚಪಟ್ಟುಕೊಳದೆ ಹೇಳು.'

—ಮಾಧವರಾಯ ಆಶ್ವಾಸನವಿತ್ತು ಹೇಳಿದ.

'ಬಾಯಿಬಿಟ್ಟು ಹೇಳಿದ ಮೇಲೆ, 'ಅಂಗೈ ತೋರಿಸಿದರೆ, ಚಿಕ್ಕಾಪ ಕೇಳಿದ' ಅಂತ ಎಲ್ಲಿ ಮನಸ್ಸಿಗೆ ಬೇಜಾರುಮಾಡಿಕೊಳ್ಳುತ್ತೀರೋ ಏನೋ....'

'ಖಂಡಿತವಾಗಿಯೂ ಇಲ್ಲ. ಏನಿದ್ದರೂ ಹೇಳು.'

'ರಾಯರು ನನ್ನ ಚದುರಂಗದಾಟನೋಡಿ ಮೆಚ್ಚಿಕೊಂಡಿರಿ. ನಿನ್ನಂಥ

ಆಟಗಾರನೇ ಇಲ್ಲ ಚಂದ್ರಯ್ಯ' ಅಂತ ಬಾಯಿತುಂಬ ಹೊಗಳಿದಿರಿ; ಕೈ ತುಂಬುವಷ್ಟು ಉಡುಗೊರೆಯನ್ನೂ ಕೊಟ್ಟಿರಿ. ಆದರೆ ಶ್ರೀರಂಗಪಟ್ಟಣದಲ್ಲಿ ನನ್ನನ್ನು ಮೀರಿಸಿದ ಶಾಮಯ್ಯಂಗಾರ್ರು ಅಂತ ಚದುರಂಗದ ಆಟಗಾರರೊಬ್ಬರಿದಾರೆ, ಅವರ ಆಟಗಾರಿಕೆಯನ್ನು ಮೆಚ್ಚಿ, ಪಟ್ಟಣದ ದರಬಾರಿನವರು, ಅವರಿಗೆ 'ಚದುರಂಗ ಕೇಸರಿ' ಅಂತ ಖಿಲ್ಲತ್ತುಕೊಟ್ಟಿದಾರೆ. ಇವತ್ತಿನವರೆಗೂ ಅವರನ್ನು ಚದುರಂಗದಲ್ಲಿ ಸೋಲಿಸಿದವರೇ ಇಲ್ಲ. ನಾನೂ, ಒಂದೊಂದು ಸಲ ಪಟ್ಟಣಕ್ಕೆ ಹೋದಾಗ ಅವರ ಜೊತೇಲಿ ಒಂದೆರಡು ಆಟ ಆಡೋಣ ಅಂತ ಪ್ರಯತ್ನಪಟ್ಟೆ: ಆದರೆ ಆ ಬ್ರಾಹ್ಮಣ ಅದಕ್ಕೆ ಒಪ್ಪಲಿಲ್ಲ.

'ಯಾಕಂತೆ? ನಿನ್ನಂಥ ಆಟಗಾರರ ಜೊತೇಲಿ ಆಡೋಕೆ ಭಯ ಆಯ್ತೇನೋ ಆತನಿಗೆ?'

'ಸೈ, ಸೈ, ನನ್ನಂಥೋರು ಎಷ್ಟು ಜನಾನ ನುಂಗಿ ನೀರು ಕುಡಿದಿದಾನೋ ಏನೋ ಈ ವಯಸ್ಸಿಗೆ, ಇನ್ನು ನಾನೊಂದು ಲೆಕ್ಕಾನೇ. ಅದಕ್ಕಲ್ಲ....'

'ಮತ್ತೆ ?'

'ಈಗವರಿಗೆ ವಯಸ್ಸು ಎಷ್ಟು ಗೊತ್ತೆ ?'

'ಎಷ್ಟು ?'

'ನಾನು ನೋಡಿದಾಗ ತೊಂಬತ್ತು ವರ್ಷ ವಯಸ್ಸು, ಈಗ ತೊಂಬತ್ತೈದೋ, ತೊಂಬತ್ತಾರೋ ಇರಬೇಕು. ಅವರೂ ಕಣ್ಣು ಮಂಜಾಗಿಲ್ಲ, ಒಂದು ಹಲ್ಲು ಅಲ್ಲಾಡಿಲ್ಲ....'

'ಹಾಗಂದ್ರೆ ಇಷ್ಟು ವಯಸ್ಸಿನಲ್ಲಿ ಈ ಆಟ-ಪಾಟ ಏಕೇಂತ ಬಿಟ್ಟಿದ್ದಾರೆಯೋ ?'

— ಚಂದ್ರಯ್ಯ ತನ್ನ ಮಾತುಮುಗಿಸುವಮುನ್ನವೇ ಕೇಳಿದ ಮಾಧವರಾಯ.

'ಈಗ ಆ ಬ್ರಾಹ್ಮಣ ಆಟ ಆಡ್ತಾ ಇಲ್ಲಾನ್ನೋದು ನಿಜ. ಆದರೆ ಅದಕ್ಕೆ ವಯಸ್ಸು ಕಾರಣವಲ್ಲ.

'ಮತ್ತೆ ?'

'ಈ ವಯಸ್ಸಿನಲ್ಲಿ ಎಷ್ಟೋ ಸಾವಿರ ಆಟ ಆಡಿದೆ. ಬಿರುದು ಬಾವಲಿ ತಗೊಂಡದ್ದೂ ಆಯಿತು. ಇನ್ನು ಯಾವಪುರುಷಾರ್ಥಕ್ಕೇಂತ ಆಡಬೇಕು. ಈ ಹಳಸಿದ ಆಟಾನ. ನನ್ನದೊಂದು ಷರತ್ತಿದೆ. ಅದಕ್ಕೆ ಯಾರಾದರೂ

ಒಪ್ಪಿದರೆ ಒಂದು ಕಡೆ ಆಟ ಆಡಿ ಬಿಡ್ತೀನಿ' ಎಂದರು, ಅವರನ್ನ ನಾನು ಬಹಳ ಒತ್ತಾಯ ಮಾಡಿ ಕೇಳಿದ್ದಕ್ಕೆ.'

'ಏನಂತೆ ಆತನ ಷರತ್ತು ?'

'ನೀವೂ ಕೇಳಿರಬಹುದಲ್ಲ—ಅಕ್ಬರ್ ಬಾದಷಹನಿಗೂ ಈ ಚದುರಂಗದಾಟದ ಹುಚ್ಚು ಬಹಳ ಇತ್ತಂತೆ. ಅದಕ್ಕೆ ಆತ, ತನ್ನ ಅರಮನೆಯಲ್ಲಿ ಕರಿ, ಬಿಳುಪು, ಬಣ್ಣದ. ಅಮೃತಶಿಲೆಯ ತುಂಡುಗಳನ್ನು ಒಂದು ದೊಡ್ಡ ಹಜಾರದಲ್ಲಿ ಚದುರಂಗದ ಹಲಗೆ ಹಾಗೆ ಜೋಡಿಸಿ, ಆ ಮನೆಯಲ್ಲಿ ಕಾಯಿಗಳಿಗೆ ಬದಲು ಅದಕ್ಕೆ ತಕ್ಕ ಹಾಗೆ ಉಡುಪುಧರಿಸಿದ ಹುಡುಗಿಯರನ್ನು ನಿಲ್ಲಿಸಿ ಆಟ ಆಡುತ್ತಿದ್ದರಂತೆ. ಶಾಮಯ್ಯಂಗಾರಿಗೂ, ಯಾರಾದರೂ ಶ್ರೀಮಂತರು ಮುಂದೆ ಬಂದರೆ, ಅಂಥ ಒಂದು ಆಟ ನೋಡಿ ಸಂತೋಷಪಟ್ಟು ಕಣ್ಣುಮುಚ್ಚಿಬಿಡಬೇಕು ಅಂತ ಆಸೆ ಇದೆ. 'ಹಾಗೆ ಆಟ ಆಡಿಸೋ ಧಣಿ ಯಾರಾದರೂ ಇದ್ದರೆ ಕರಕೊಂಡು ಬಾ, ಒಂದಲ್ಲ ನಾಲ್ಕು ಆಟ ಆಡಿ ಆಮೇಲೆ ಈ ಆಟಕ್ಕೆ ಎಳ್ಳುನೀರು ಬಿಟ್ಟುಬಿಡ್ತೀನಿ. ಈ ದಂತದ ಕಾಯಿ ನಡೆಸಿ, ನಡೆಸಿ, ಅಸಹ್ಯ ಹುಟ್ಟಿ ಹೋಗಿದೆ' ಎಂದರು....'

ಚಂದ್ರಯ್ಯ ವಿವರಿಸಿದ ಶಾಮಯ್ಯಂಗಾರ್ರ ಷರತ್ತನ್ನು ಕೇಳಿ ಮಾಧವರಾಯನಿಗೆ ಆಶ್ಚರ್ಯವಾಗಿ—

'ಅಂತೂ ಭಾರಿ ಷರತ್ತೇ ಹಾಕಿದಾನೆ ಘಾಟಿ ಮುದುಕ! ಈ ವಯಸ್ಸಿನಲ್ಲೂ ಒಳ್ಳೇ ಚವಲಾನೇ ಪಟ್ಟಿದಾನೆ.'

—ಎಂದ.

'ಸುಖ ಅನುಭವಿಸೋಕೆ ಮನಸ್ಸು ಬೇಕೇ ಹೊರತು, ವ್ಯೆಯೇನು ಮಾಡುತ್ತೇ. ಆ ಮುದುಕನ ಷೋಕಿ ಅಷ್ಟಿಷ್ಟಲ್ಲ. ಈ ವಯಸ್ಸಿನಲ್ಲೂ ಸೂಳೆಯ ಮನೆಗೆ ಹೋಗಿ, ಅವಳ ಸಂಗೀತ ಕೇಳಿ, ಅವಳು ಮಡಚಿಕೊಟ್ಟ ಮೈಸೂರು ಚಿಗುರೆಲೆ ವೀಳೆಯ ಹಾಕಿಕೊಂಡು ಬಂದೇ ಮಲಗುವುದು. ಅಲ್ಲಿಗೆ ತಕ್ಕೊಂಡು ಹೋಗೋಕೆ, ದಿನಾ ಸಂಜೆ ಮೈಸೂರಿನಿಂದ ಹೂವು, ವಿಳ್ಳೇದೆಲೆ,ಅದೂ ವರವಮಾಯಿಷೀದು ತರಿಸ್ತಾನೆ ಮುದುಕ.'

ಚಂದ್ರಯ್ಯ ಶ್ಯಾಮಯ್ಯಂಗಾರ್ಯರ ವಿಷಯವಾಗಿ ಹೇಳಿದುದನ್ನು ಕೇಳಿ, ಮಾಧವರಾಯನ ಹೃದಯದಲ್ಲಿ ಆ ವೃದ್ಧರ ಬಗ್ಗೆ ಅಭಿಮಾನ ಮೂಡಿ......

'ನೀನು ಹೇಳಿದ್ದು ಕೇಳಿದರೆ, ಅಯ್ಯಂಗಾರ‍್ರು ಒಳ್ಳೇಜಾತಿ ರಸಿಕರೂಂತ ಕಾಣ್ತಾರಲ್ಲಾ ಚಂದ್ರಯ್ಯ....ಒಮ್ಮೆ ಅವರನ್ನು ನೋಡಬೇಕಲ್ಲ....'

—ಎಂದ ಮೆಚ್ಚುಗೆ ತುಂಬಿದ ಧ್ವನಿಯಲ್ಲಿ.

'ದೇವರು ನಿಮಗೆ ಬೇಕಾದ ಅನುಕೂಲಾನ್ನೆಲ್ಲಾ ಕೊಟ್ಟಿದ್ದಾನೆ· ನೀವು ಮನಸ್ಸು ಮಾಡಿದರೆ, ಶಾಮಯ್ಯಂಗಾರನ್ನು ನೋಡೋದೇನು, ಅವರ ಆಟಾನೂ ನೋಡಬಹುದು. ನನಗೂ ಅದೊಂದು ದೊಡ್ಡ ಆಸೆ ಇದೆ. ನಿಮ್ಮ ಆಸೆ, ನನ್ನ ಆಸೆ ಎರಡೂ ತೀರುತ್ತೆ, ನೀವು ದೊಡ್ಡ ಮನಸ್ಸು ಮಾಡಿದರೆ.... ಇನ್ನೇನು ಆತ ಬಹಳ ದಿವಸ ಬದುಕಿರೋಲ್ಲ....ಏನಿದ್ರೂ ಜೇಗ ನಮ್ಮ ಆಸೆ ತೀರಿಸಿಕೊಳ್ಳಬೇಕು....'

—ಎಂದು ಚಂದ್ರಯ್ಯ ತನ್ನ ಮನದಲ್ಲಿ ಬಹುದಿನಗಳಿಂದ ಮನೆ ಮಾಡಿಕೊಂಡಿದ್ದ ಬಯಕೆಯನ್ನು ಬಿತ್ತರಿಸಿದ.

ಆ ವೇಳೆಗೆ ಶಾಮಯ್ಯಂಗಾರ್ಯರ ಬಗ್ಗೆ ಸಾಕಷ್ಟು ಕುತೂಹಲ ಕೆರಳಿದ್ದ ಮಾಧವರಾಯನಿಗೂ ಕೂಡಲೇ 'ಹೂ' ಎನ್ನಬೇಕು ಎನ್ನುವಷ್ಟು ಉತ್ಸಾಹ ಮೂಡಿದ್ದರೂ, ಅಪಾರವೆಚ್ಚದ ಆ ಕಾರ್ಯಕ್ಕೆ ಕೂಡಲೇ 'ಹೂ' ಎನ್ನಲು ಧೈರ್ಯ ಸಾಲದೆ—

'ಆಯಿತು, ನಿನ್ನ ಆಸೆ, ಏನೂಂತ ಹೇಳಿದೀಯಲ್ಲ, ದೇವರಿದಾನೆ—ನೋಡೋಣ. ನನ್ನಿಂದ ನಡೆದರೆ ಅದೂ ಒಂದು ನಡೆದು ಹೋಗಲಿ. ಯಾವುದಕ್ಕೂ ಯೋಚನೆ ಮಾಡಿ ಹೇಳಿಕಳಿಸುತ್ತೇನೆ.'

—ಎಂದಷ್ಟೇ ಹೇಳಿದ.

'ಶಿವನಿಚ್ಛೆ ಹೇಗಿದೆಯೋ ಹಾಗಾಗಲಿ.'

—ಎಂದು ಹೇಳಿ ಚಂದ್ರಯ್ಯನೂ ನಾಗರವಳ್ಳಿಯನ್ನು ಬಿಟ್ಟ.

೪

ಚಂದ್ರಯ್ಯ ನಾಗರವಳ್ಳಿಯಿಂದ ಹೋದ—

ಆದರೆ ಚಂದ್ರಯ್ಯ, ಮಾಧವರಾಯನ ಮನದಲ್ಲಿ ಅಂದು ಬಿತ್ತಿದ

ಬಯಕೆಯ ಬೀಜ ದಿನಗಳೆದಂತೆ ಬೆಳೆದು, ಮಾಧವರಾಯನ ಮನೋ ದಿಗಂತವನ್ನೆಲ್ಲಾ ಹರಡಿತು.

'ನೋಡಬೇಕು, ಅಂಥ ದೃಶ್ಯವನ್ನು ನಾನು ಒಮ್ಮೆ ನೋಡಿ ಸಾಯ ಬೇಕು. ಇಲ್ಲವಾದರೆ ಹುಟ್ಟಿ ಬದುಕಿದ್ದಕ್ಕೇನು ಸಾರ್ಥಕ?'

—ಎಂಬ ಹಟವೂ, ಬಯಕೆಯೊಂದಿಗೇ ಜೊತೆಜೊತೆಯಾಗಿ ಬೆಳೆ ಯಿತು.

ಚಂದ್ರಯ್ಯ ವಿವರಿಸಿದ ಶಾಮಯ್ಯಂಗಾರಿಯ ಪರತ್ತಿನ ಚಿತ್ರ ದಿನಗ ಳೆದಂತೆ ರಂಗುಗಳಿಸಿ, ಅತ್ಯಂತ ವಿಶಾಲವಾದ ಚದುರಂಗದ ವೇದಿಕೆಯ ಮೇಲೆ, ಯೌವನವತಿಯರಾದ ಸುಂದರಿಯರು, ಗೆಜ್ಜೆಕಾಲಿನ ಸದ್ದು ಮಾಡುತ್ತಾ ಸಂಚರಿಸುವಚಿತ್ರ ಮಾಧವರಾಯನ ಕನಸ್ಸನ್ನುಕೆಣಕಿ, ಆ ಕನ ಸಿನ ಒತ್ತಡವನ್ನು ತಡೆಯಲಾರದೆ, ಉಳಿದ ಎಲ್ಲ ಎಚ್ಚರಿಕೆಗಳನ್ನೂ ಗಾಳಿಗೆ ತೂರಿ, ಚಂದ್ರಯ್ಯನಿಗೆ ಕೂಡಲೇ ನಾಗರವಳ್ಳಿಗೆ ಬರುವಂತೆ ಸುದ್ದಿ ಕಳಿಸಿದ.

ಚಂದ್ರಯ್ಯ ಅಮರಾಪುರದಿಂದ ನಾಗರವಳ್ಳಿಗೆ ಬರುತ್ತಿದ್ದ ಹಾಗೇ—

ಚಂದ್ರಯ್ಯ, ಇಷ್ಟುದಿನ ನಿನ್ನದಾಗಿದ್ದ ಆಸೆ. ಇಂದು ನನ್ನ ಆಸೆ. ಅದರ ಕಾವಿನಲ್ಲಿ ಏನು ಆಗಿ ಹೋಗುತ್ತದೋ ಆಗಲಿ. ಶತಾಯಗತಾಯ ನೋಡೇ ಬಿಡುತ್ತೇನೆ. ನೀನೇ ಶ್ರೀರಂಗಪಟ್ಟಣಕ್ಕೆ ಹೋಗಿ, ಶಾಮ ಯಂಗಾರ್ಯರು ಇಲ್ಲಿಗೆ ಬರಲು ಏನುವ್ಯವಸ್ಥೆ ಬೇಕೋ ಮಾಡು. ಚದುರಂಗದಾಟಕ್ಕೆ ಬೇಕಾದ ಹುಡುಗಿಯರಿಗೂ ನೀನೇ ವ್ಯವಸ್ಥೆ ಮಾಡ ಬೇಕು, ನನಗೆ ಯಾವುದೂ ತಿಳಿಯದು. ನೀನು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ. ಇದೆಲ್ಲಾ ನಮ್ಮ ಜೀವಮಾನದಲ್ಲಿ ಒಂದುಸಲ ಮಾತ್ರ ಆಗುವಂಥದು. ಆದ್ದರಿಂದ ಹಣಕಾಸಿನ ಮುಖ ನೋಡಿದರೆ, ಈ ಕೆಲಸ ಆಗುವುದಿಲ್ಲ, ನೀನೂ ಅಷ್ಟೇ—ದುಡ್ಡಿನ ಮುಖ ನೋಡಬೇಡ. ಎಷ್ಟು ವರಹ ಖರ್ಚಾದರೂ ಸರಿಯೆ. ಎಲ್ಲಕ್ಕೂ ಅದ್ದೂರಿಯಾಗಿ ಏರ್ಪಾಡು ಮಾಡಿಬಿಡು. ಈ ಕೆಲಸ ಮುಗಿಯುವವರೆಗೂ ನಿನಗೆ, ನನ್ನ ಮನೆಯೇ ಮನೆ. ಎಲ್ಲಾ ಮುಗಿಸಿಕೊಂಡೇ ನೀನು ಅಮರಾಪುರಕ್ಕೆ ವಾಪಸು ಹೋಗ ಬೇಕು.'

—ಎಂದು ಹೇಳಿದ.

ಮಾಧವರಾಯ ಹೇಳಿದುದನ್ನು ಕೇಳಿ, ಚಂದ್ರಯ್ಯನಿಗೆ ಹಲವಾರು

ಜನ್ಮಗಳಿಂದ ಬಯಸಿದ ಸ್ವರ್ಗ, ಕೈಗೆ ಎಟಕುವಷ್ಟು ಹತ್ತಿರಬಂದಂತಾಗಿ—

'ನಿಮ್ಮ ಆಶೀರ್ವಾದ ಒಂದು ಇದ್ದರೆ, ನಾನು, ನೀವೇನು, ನಾಗರ ವಳ್ಳಿಯೇ' 'ಹಿಂದೆ ನೋಡಿರಲಿಲ್ಲ ಮುಂದೆ ನೋಡುವುದಿಲ್ಲ' ಎನ್ನುವ ಹಾಗೆ ನಡೆಸಿಬಿಡುತ್ತೇನೆ.'

—ಎಂದು ಹೇಳಿ, ಊರಿಗೆ ಹಿಂದಿರುಗುವ ಯೋಚನೆಯನ್ನು ಬಿಟ್ಟು, ಮಾಧವರಾಯ ಖರ್ಚು–ವೆಚ್ಚಕ್ಕೆ ಕೊಟ್ಟ ಐದುನೂರ ವರಹ ತೆಗೆದುಕೊಂಡು ಅವನ ಪೆಟ್ಟಿಗೆ ಗಾಡಿಯಲ್ಲೇ, ರಾಮಯ್ಯಂಗಾರ್ಯರನ್ನು ಕಾಣಲೆಂದು ಶ್ರೀರಂಗಪಟ್ಟಣಕ್ಕೆ ಪ್ರಯಾಣ ಬೆಳೆಸಿದ.

ಎರಡು ದಿನಗಳ ಸತತ ಪ್ರಯಾಣ ಮಾಡಿ, ಪಟ್ಟಣಕ್ಕೆ ಬಂದ ಚಂದ್ರಯ್ಯ, ಛತ್ರದಲ್ಲಿ ಇಳಿದುಕೊಂಡು, ಕಾವೇರೀ ನದಿಯಲ್ಲಿ ಸ್ನಾನ ಮಾಡಿ, ಅಲ್ಲಿಂದಲೇ ನೇರವಾಗಿ, ರಂಗನಾಥಸ್ವಾಮಿ ದೇವಾಲಯದ ರಸ್ತೆ ಯಲ್ಲಿದ್ದ ಶಾಮಯ್ಯಂಗಾರ್ಯರ ಮನೆಗೆ ಹೋಗಿ, ಅವರನ್ನು ಕಂಡು, ತಾನು ಬಂದ ಕಾರಣವನ್ನು ವಿವರಿಸಿದ.

ಚಂದ್ರಯ್ಯ ಹೇಳಿದುದನ್ನು ಕೇಳಿ, ವಯೋವೃದ್ಧರಾದ ಶ್ಯಾಮಯ್ಯಂ ಗಾರ್ರಿಗೆ ನವಯೌವನ ಬಂದಂತಾಗಿ—

'ಈ ಜನ್ಮದಲ್ಲಿ ನನ್ನ ಬಯಕ್ಕೆ ಸಫಲವಾಗೊಲ್ಲಾಂತಿದ್ದೆ. ಅಂತೂ ನಮ್ಮಪ್ಪ ರಂಗನಾಥಸ್ವಾಮಿ ಅದನ್ನು ನಡೆಸಿಕೊಟ್ಟೇ ಬಿಟ್ಟ, ಆದರೆ ಒಂದು ಮಾತು ಚಂದ್ರಯ್ಯ....'

'ಏನು ಹೇಳಿ ಸ್ವಾಮಿ?'

'ಆಟದಲ್ಲಿ ಹುಡುಗೀರನ್ನು ಹೂಡಬೇಕೂಂತ ಎಂಥದೋ ಹೆಣ್ಣಿನ ಆಕಾರದ ಎಲುಬಿನ ಗೊಂಬೆಗಳನ್ನು ತಂದು ನಿಲ್ಲಿಸಬೇಡ. ಆಟ ಹೀಗೆ ನಡೆಯುತ್ತೇಂದರೆ, ಆಡೋರು ಇಬ್ಬರಾದರೂ, ನೋಡೋಕೆ ನೂರಾರು ಜನ ಕಲೀತಾರೆ. ಅವರ ಕಣ್ಣು ತೃಪ್ತಿ ಆಗೋ ಅಂಥ ಹುಡುಗೀರನ್ನ ಆರಿಸಬೇಕು....ನೋಡು. ಇಲ್ಲಾಂದ್ರೆ ಪಂಚಭಕ್ಷ್ಯ ಪರಮಾನ್ನದ ಭೋಜನ ಮಾಡಿಸಿ ಕೊನೇಲಿ, ಕೆಟ್ಟ ನೀರಿಗಿಂತ ಕೇಡಾದ ನೀರುಮಜ್ಜಿಗೆ ಬಡಿಸೋ ಸಮಾರಾಧನೆ ಊಟದ ಹಾಗೆ ಮಾಡಬೇಡಾಂತ ನಿಮ್ಮ ನಾಯು ಕಾರರಿಗೆ ಹೇಳು. ಇಷ್ಟಕ್ಕೆಲ್ಲಾ ಧಾರಾಳಮಾಡಿ, ಇದರಲ್ಲಿ ಜೀನತನ ಮಾಡೋದು ಸರಿಯಲ್ಲ.'

' ನಮ್ಮ ಧಣಿಗಳಲ್ಲಿ ಅಂಥ ಚಿಲ್ಲರೆ ಬುದ್ಧಿ ಇಲ್ಲ. ಅಯ್ಯಂಗಾರ್ ಸ್ವಾಮಿಗಳೇ. ಎಲ್ಲಾ ನನಗೆ ಒಪ್ಪಿಸಿಬಿಟ್ಟಿದ್ದಾರೆ. ನಿಮ್ಮ ಹಾಗೇ ಅವರೂ-ಎಷ್ಟೇ ಖರ್ಚಾಗಲೀ, ಎಲ್ಲಾ ಭರ್ಜರಿಯಾಗೇ ಆಗಬೇಕೂಂತ ಹಟ. ಆದರೆ ಒಂದೇ ತಾಪತ್ರಯವಲ್ಲ?

' ಏನು ? '

'ನಾಗರವಳ್ಳಿ ಶುದ್ಧ ಹಳ್ಳಿಗಾಡು ಕೊಂಪೆ, ಆ ಊರೆಲ್ಲಾ ಜಾಲಾಡಿಸಿದರೂ, ಮೂವತ್ತೆರಡಲ್ಲ, ಮೂರುಜನ ಕೂಡಾ, ಲಕ್ಷಣವಾದ ವೇಶ್ಯೆಯರ ಹುಡುಗಿಯರು ಸಿಕ್ಕೋಲ್ಲ. ಅದಕ್ಕೆ ಏನು ಮಾಡಬೇಕೂಂತ ನನಗೂ ಯೋಚನೆಯಾಗಿದೆ.

' ನಾಗರವಳ್ಳೀಲಿ ಇಲ್ಲಾಂದ್ರೆ ಏನು ಸೀಮೇನೇ ಹಾಳೇ ! ಅಲ್ಲಿನವರೇ ಆಗಬೇಕೂಂತ ನಿಮ್ಮ ಸಾಹುಕಾರರಿಗೇನೂ ಹಟ ಇಲ್ಲ ತಾನೇ !

' ಹಾಗೇನೂ ಇಲ್ಲ.'

' ಹಾಗಿದ್ದರೆ ಸರಿ ಮತ್ತೆ, ನಾಗರತ್ನನ ಮನೆಗೆ ಹೋಗೋಣ ನಡಿ. ಅವಳಿಗೆ ಹೇಳಿದರೆ ಗಾಜಿನಗೊಂಬೆಯಂಥ ಹುಡುಗೇರನ್ನ ಪತ್ತೆಹಚ್ಚಿ, ಕೊಡುತ್ತಾಳೆ.'

—ಎಂದು ಶ್ಯಾಮಯ್ಯಂಗಾರ್ಯರೇ, ಚಂದ್ರಯ್ಯನ ಸಮಸ್ಯೆಗೆ ಪರಿಹಾರೋಪಾಯ ಸೂಚಿಸಿದರು.

' ಆ ಕೆಲಸಕ್ಕೆ ಇನ್ನೆಷ್ಟು ಊರು ಅಲೀಬೇಕೋಂತ ನನಗೂ ಯೋಚನೆಯಾಗಿತ್ತು. ಅದೂ ಇಲ್ಲೇ ಮುಗಿದು ಹೋದರೆ ಇಷ್ಟದ್ದು ಅನುಕೂಲವಾಯಿತು. ಬನ್ನಿ, ಈಗಲೇ ಹೋಗಿ ಆ ಕೆಲಸಾನೂ ಮುಗಿಸಿಬಿಡೋಣ.'

—ಎಂದು ಚಂದ್ರಯ್ಯ ಉತ್ಸಾಹದಿಂದ.

ಒಳ್ಳೆ ಅಡ್ಡಕಸುಬಿ ಹಾಗೆ ಮಾತಾಡ್ತೀಯಲ್ಲೋ ಚಂದ್ರಯ್ಯ ಹಗಲು ಹೊತ್ತಿನಲ್ಲಿ ಯಾರಾದರೂ ಸೂಳೇರ ಮನೆಗೆ ಹೋಗ್ತಾರೇನೋ ? ಅದಕ್ಕೂ ಹೊತ್ತು ಗೊತ್ತು ಇಲ್ವೆ ? ಸಂಜೆ ಆಗೋವರೆಗೂ ಸುಧಾರಿಸಿಕೋ ಈಗ ಮನೇಲಿ, ಲಕ್ಷಣವಾಗಿ ಪುಳಿಹೋರೆ ಮಾಡಿಸಿದೀನಿ. ತಿಂದು ಮಲಗಿಕೋ.

—ಎಂದು ಚಂದ್ರಯ್ಯನ ಉತ್ಸಾಹಕ್ಕೆ ಕಡಿವಾಣ ಹಾಕಿದ್ದರು.

ಶಾಮಯ್ಯಂಗಾರ್ಯರು ಅಷ್ಟು ಹೇಳಿದ ಬಳಿಕ, ಚಂದ್ರಯ್ಯ ತನ್ನ ಉತ್ಸಾಹಕ್ಕೆ ತಡೆ ಹಾಕಿ, ಸಂಜೆಯವರೆಗೂ ಕಾಯಲೇಬೇಕಾಯಿತು.

ಅದರಂತೆಯೇ, ಸಂಜೆಯಾಗಿ ಮನೆಗಳಲ್ಲಿ ದೀಪಗಳು ಹೊತ್ತಿದ ಬಳಿಕ ಚಂದ್ರಯ್ಯ, ಶಾಮಯ್ಯಂಗಾರ್ಯರು ಇಬ್ಬರೂ ಷಹರ್‌ಗಂಜಾಂನಲ್ಲಿದ್ದ ಶಾಮಯ್ಯಂಗಾರ್ಯರ ಉಪಪತ್ನಿ ನಾಗರತ್ನಳ ಮನೆಗೆ ಹೊರಟರು.

ನಾಗರತ್ನಳ ಮನೆಯನ್ನು ನೋಡುತ್ತಿದ್ದ ಹಾಗೇ, ಚಂದ್ರಯ್ಯನಿಗೆ 'ಇದು ಮಾಮೂಲಿ ಆಸಾಮಿಯಲ್ಲ, ಬಿಳೀ ಕುದುರೆ ಸಮಾಚಾರ' ಎನಿಸಿ, ಮುಂದೆ ಒದಗಬಹುದಾದ ಪೆಚ್ಚಿನ ಯೋಚನೆಯಿಂದ ಎದೆ ಅಳುಕಿತು.

ಅಯ್ಯಂಗಾರ್ಯರ ಪಾಲಿಗೆ ಅದು ದಿನವೂ ಬಂದು ಹೋಗುವ ಮನೆಯಾದುದರಿಂದ, ಯಾವ ಅಳುಕೂ ಇಲ್ಲದೆ, ನಿಸ್ಸಂಕೋಚವಾಗಿ ಒಳಗೆ ಪ್ರವೇಶಿಸಿ, ಹಜಾರದಲ್ಲಿದ್ದ ತೂಗುಮಣೆಯ ಮೇಲೆ ಕುಳಿತು, ತೂಗಿಕೊಳ್ಳುತ್ತಾ, ಅದರ ಧ್ವನಿಯನ್ನು ಕೇಳಿ ಹೊರಗೆ ಇಣುಕಿದ ಹುಡುಗಿಯೊಬ್ಬಳಿಗೆ—

'ಚಿನ್ನಾ, ನಾಗರತ್ನಾನ ಒಂದು ಗಳಿಗೆ ಇಲ್ಲೇ ಕರೆ.'

—ಎಂದು ಹೇಳಿ ಕಳಿಸಿದರು.

ಸ್ವಲ್ಪ ಹೊತ್ತಿನಲ್ಲೇ, ಒಳಮನೆಯಲ್ಲಿದ್ದ ನಾಗರತ್ನ ಹಜಾರಕ್ಕೆ ಬಂದು, ಅಯ್ಯಂಗಾರ್ಯರ ಜೊತೆಯಲ್ಲಿ ಹೊಸಬನೊಬ್ಬ ಇದ್ದುದನ್ನು ಕಂಡು, ತಲೆಯಮೇಲಿನ ಮುಸುಕನ್ನು ಸರಿಪಡಿಸಿಕೊಂಡು, ಅಯ್ಯಂಗಾರ್ಯರ ಕಾಲು ಮುಟ್ಟಿ ನಮಸ್ಕಾರ ಮಾಡಿ, ಕಂಭವನ್ನು ತನಗೆ ಮರೆ ಮಾಡಿಕೊಂಡು ಕುಳಿತುಕೊಂಡು ಕಣ್ಣೋಟವನ್ನು ಒಮ್ಮೆ ಚಂದ್ರಯ್ಯನತ್ತ ಸುಳಿಸಿ 'ಇವರು ಯಾರು ?' ಎಂಬಂತೆ ಮೂಕಪ್ರಶ್ನೆ ಮಾಡಿದಳು.

ಚಂದ್ರಯ್ಯನೂ ನಾಗರತ್ನ ಒಳಮನೆಯಿಂದ ಹಜಾರದೊಳಗೆ ಪ್ರವೇಶಿಸಿದಾಗ, ಒಂದುಗಳಿಗೆ ಕಂಡ ಆಕೆಯ ಮುಖವನ್ನು ಕಂಡು ಚಕಿತನಾದ.

ಅಲ್ಲಿಗೆ ಬಂದಾಗ ತೊಂಭತ್ತರ ಗೆರೆ ದಾಟಿದ ಅಯ್ಯಂಗಾರ್ಯರ ಉಪಪತ್ನಿ ಅವರಷ್ಟೇ ವೃದ್ಧಳಾಗಿರಬೇಕು ಎಂದುಕೊಂಡಿದ್ದ ಚಂದ್ರಯ್ಯ. ಆತನ ಊಹೆಯಂತೆ ನಾಗರತ್ನಳಿಗೆ ಸಾಕಷ್ಟು ವಯಸ್ಸಾಗಿದ್ದರೂ, ದೇಹದ ಅಲ್ಪ ಸ್ಥೂಲತೆಯೊಂದು ವಿನಾ, ಬೇರಾವ ವೃದ್ಧಾಪ್ಯದ ಕುರುಹೂ ಕಾಣದೆ

ಹೆಚ್ಚೆಂದರೆ ಮೂವತ್ತು ನಲವತ್ತಕ್ಕಿಂತ ಹೆಚ್ಚು ವಯಸ್ಸಿರಲಾರದು ಈಕೆಗೆ, ಎನಿಸಿತು. ಅವಳ ಲಾವಣ್ಯ ವಯಸ್ಸಿನ ಭಾರವನ್ನು ನಿರಾತಂಕವಾಗಿ ಹೊತ್ತು ಮೆರೆಯುತ್ತಿತ್ತು. ಅದನ್ನು ಕಂಡು ಮೊದಲೇ ಅಯ್ಯಂಗಾರ್ಯರ ರಸಿಕತೆಯನ್ನು ಮೆಚ್ಚಿಕೊಂಡ ಚಂದ್ರಯ್ಯ ಈಗ ಮತ್ತಷ್ಟು ಮಾರುಹೋಗಿ ಕಂಭದ ಮರೆಯಲ್ಲಿ ಕಾಣುತ್ತಿದ್ದಷ್ಟೇ ನಾಗರತ್ನಳ ಮುಖವನ್ನು ನೋಡುತ್ತ ಕುಳಿತ.

ಚಂದ್ರಯ್ಯ ನಾಗರತ್ನಳನ್ನು ನೋಡುತ್ತಿರುವಾಗ, ಆಕೆಯೂ ಮನಸ್ಸಿನಲ್ಲೇ 'ಈ ಹೊಸಬನ ಆಗಮನದ ಉದ್ದೇಶವೇನಿರಬಹುದು ?' ಎಂದು ಯೋಚಿಸುತ್ತಾ, ಚಂದ್ರಯ್ಯ ಧರಿಸಿದ ಉಡುಪಿನ ತಕ್ಕಡಿಯ ಮೇಲೇ ಆತನ ಯೋಗ್ಯತೆಯನ್ನು ತೂಗಲು ಯತ್ನಿಸುತ್ತಿದ್ದಳು.

ಅವರಿಬ್ಬರ ಮನಸ್ಸಿನಲ್ಲೂ ನಡೆಯುತ್ತಿರಬಹುದಾದ ಊಹೆಗಳನ್ನು ಅರ್ಥಮಾಡಿಕೊಂಡ ರಾಮಯ್ಯಂಗಾರ್ಯರು ಗಟ್ಟಿಯಾಗಿ ನಗುತ್ತಾ—

'ನಾಗರತ್ನ, ಕಂಭದ ಮರೇಲಿ ಮುಖ ಮರೆಸಿಕೊಂಡು ಯಾಕೆ ಕೂತಿದೀಯ, ಹೀಗೆ ಬಾ. ಚಂದ್ರಯ್ಯ ಈ ಮನೆಗೆ ಹೊಸಬನಾದರೂ, ಪರಕೀಯನೇನೂ ಅಲ್ಲ. ನಾನು ಹಿಂದೊಂದು ಸಲ ನಿನಗೆ ಅಮರಾಪುರದ ಚಂದ್ರಯ್ಯಾಂತ ಅನ್ನೋರು ನನ್ನ ಜೊತೇಲಿ ಚದುರಂಗ ಆಡಬೇಕೂಂತ ಬಂದಿದ್ರು ಅಂತ ಹೇಳಿರಲಿಲ್ವೆ—ಅವರೇ ಇವರು.... ಈಗ ನಿನ್ನಿಂದ ಒಂದು ದೊಡ್ಡ ಕೆಲಸ ಆಗಬೇಕಾಗಿದೆ. ಅದಕ್ಕೇ ನಿನ್ನ ಹತ್ತಿರ ಬಂದಿದಾನೆ.'

—ಎಂದು ನಾಗರತ್ನಳಿಗೆ ಹೇಳಿ, ತಾವೇ ಅವಳನ್ನು ಕಂಭದ ಮರೆಯಿಂದ ಹೊರಕ್ಕೆ ಎಳೆದು—

'ನೋಡಿದೆಯಾ ಚಂದ್ರಯ್ಯ, ಇವಳೇ ಈ ಮುದುಕನ 'ರಕ್ಷಣಾ !'

—ಎಂದು ಪರಸ್ಪರ ಪರಿಚಯ ಮಾಡಿಸಿದರು.

'ಅಪ್ಪಣೆ ಆಗಲಿ. ನೀವು ಕಾಲಿಂದ ತೋರಿಸಿದ ಕೆಲಸಾನ ತಲೇ ಮೇಲೆ ಹೊತ್ತು ನಡೆಸೋಕೆ ಸಿದ್ಧವಾಗಿದೀನಿ.'

—ನಾಗರತ್ನ ಹೇಳಿದಳು.

'ಹಾಗಿದ್ರೆ ಸರಿ. ಚಂದ್ರಯ್ಯ, ನೀನೇ ಹೇಳಿಬಿಡು, ಬಂದ ಕೆಲಸ ಏನೂಂತ.'

ಅಯ್ಯಂಗಾರ್ಯರ ಮಾತನ್ನು ಕೇಳಿ ಚಂದ್ರಯ್ಯ, ತನ್ನ ಮುಖವನ್ನು

ನೋಡುತ್ತಿದ್ದ ನಾಗರತ್ನಳ ನೋಟದ ಪರಿಣಾಮವನ್ನು, ಗಳಿಗೆಗೊಮ್ಮೆ ಉಗುಳು ನುಂಗಿಕೊಂಡು ಪರಿಹರಿಸಿಕೊಳ್ಳುತ್ತಾ, ತಾನು ಅಲ್ಲಿಗೆ ಬಂದ ಉದ್ದೇಶವನ್ನು ಸಾವಧಾನವಾಗಿ ವಿವರಿಸಿ—

"ಈ ಕೆಲಸಾನ ನೀವು ನಿಂತು ಮಾಡಿಸಿಕೊಟ್ಟರೆ, ನನ್ನ ಬಯಕೆ, ಅಯ್ಯಂಗಾರ್ ಸ್ವಾಮಿಗಳ ಬಯಕೆ ಎರಡೂ ತೀರುತ್ತೆ."

—ಎಂದು ಹೇಳಿದ.

ಸ್ವಲ್ಪಹೊತ್ತು ಮೌನವಾಗಿ ಕುಳಿತು, ಚಂದ್ರಯ್ಯ ಹೇಳಿದುವನ್ನೆಲ್ಲಾ ನಿಧಾನವಾಗಿ ಅರಗಿಸಿಕೊಂಡು, ಬಳಿಕ—

'ಅಂತೂ, ಬಹಳ ತೂಕದ ಕೆಲಸಾನೇ ನನ್ನ ಮೇಲೆ ಹೊರಿಸ್ತಾ ಇದೀರಿ.'

—ಎಂದಳು.

'ಅದನ್ನು ನಿಭಾಯಿಸೋ ಶಕ್ತಿ ನಿನಗಿದೇಂತಾಲೇ, ಅದನ್ನು ನಿನಗೆ ಹೊರಿಸ್ತಾ ಇರೋದು. ನಿನ್ನಿಂದ ಇದು ಆಗೋದಿಲ್ಲಾನ್ನೋ ಹಾಗಿದ್ರೆ ಹೇಳು. ಇವರನ್ನ ಚೂಡಾಮಣಿ ಮನೆಗೆ ಕರಕೊಂಡು ಹೋಗ್ತೀನಿ.'

—ಎಂದು ಸವಿರಾಗಿ, ನಾಗರತ್ನಳಲ್ಲಿದ್ದ ಸ್ಪರ್ಧಾಭಾವನೆಯನ್ನು ಕೆಣಕಿ ಹೇಳಿದರು ಅಯ್ಯಂಗಾರ್ಯರು.

ಆ ಮಾತನ್ನು ಕೇಳುತ್ತಿದ್ದ ಹಾಗೇ ನಾಗರತ್ನಳ ಮುಖ ಕೆಂಪೇರಿ—

'ನನ್ನ ಕೈಲಿ ಆಗದ ಕೆಲಸಾನ, ಆ ಶನಿಮುಖಿಮೋಳು ಏನು ಮಾಡ್ತಾಳೆ? ಅಷ್ಟೇ ಅಲ್ದೆ, ನಾನೇನು ಇದು ನನ್ನ ಕೈಲಿ ನೀಗದ ಕೆಲ ಸಾಂತಹೇಳಿದ್ನಾ? ತೂಕದ ಕೆಲಸಾಂತಹೇಳಿದೆ.'

—ಎಂದಳು, ಸವಾಲು ಹಾಕುವಂತೆ.

'ಕೆಲಸ ತೂಕವಾದದ್ದೋ ಹಗುರವಾದದ್ದೋ — ಅದೆಲ್ಲಾ ನಮಗೆ ಗೊತ್ತಿಲ್ಲ. ನಮ್ಮ ಕೆಲಸ ನೀನು ಮಾಡಿಕೊಡ್ತೀನೀಂದರೆ ಸರಿ.'

—ರಾಮಯ್ಯಂಗಾರ್ಯರು ಹೇಳಿದರು.

'ನಾನು ಹೊರಿಸೋ ತೂಕಾನ ನೀವೂ ಹೊರೋಕೆ ತಯಾರಾಗಿದ್ರೆ. ನೀವು ಹೊರಿಸೋ ತೂಕಾನ ನಾನೂ ಹೊರೋಕೆ ತಯಾರಾಗಿದೀನಿ.'

'ಅಂದ್ರೆ—'

'ನೀವು ನನ್ನ ಕೇಳ್ತಾ ಇರೋದು ವಿಚಿತ್ರವಾದ ವಿಷಯ. 'ಮೇಳ'

ಕಟ್ಟೋಕೆ, ಹಾಡಿಸೋಕೆ ನಾನೂ ಎಷ್ಟೋ ಕಡೆ ಜನಾನ ಕಳಿಸಿದೀನಿ, ಆದ್ರೆ ಇದು ಹಂಗಲ್ಲ. ಗೊಂಬೆ ಹಾಗೆ ನಿಂತುಕೊಂಡು, ಚದುರಂಗದ ಕಾಯ್ನಂಗೆ ಆಡಬೇಕು. ಆ ಆಟ ನಮ್ಮುಡುಗೀರಿಗೆ ಯಾರಿಗೂ ಅಭ್ಯಾಸ ಇಲ್ಲ. ಅದು ಹೆಂಗೋ ನೀವಿದ್ದೀರ, ಹೀಗ್ಮಾಡಬೇಕು ಅನ್ನೋದನ್ನ ಕೇಳಿ ಕಲಿಸೋಣ ಅಂದ್ರೆ, ಒಬ್ಬಿಬ್ಬರಲ್ಲ, ಮೂವತ್ತೆರಡು ಜನ ಹುಡುಗೀರು, ಎಲ್ಲಾ ಕೈ ತೊಳಕೊಂಡು ಮುಟ್ಟೋಅಂಥೋರು ಬೇಕು ಅಂತೀರ. ಅಷ್ಟು ಜನಾನ ಕೂಡಿಸೋದು ಭಾರಿ ದಣಿವಿನ ವಿಷಯ. ಅದ್ರಾಗೂ ಊರು ಬಿಟ್ಟು ಊರಿಗೆ ಹೋಗಿ ನಾಲ್ಕಾರುದಿನ ಪರಸ್ಥಳದಲ್ಲಿ ಇದ್ದು ಬರ ಬೇಕೊಂದರೆ, ನೀವು ಕೇಳೋ ಅಂಥ ಹುಡುಗೀರು ಸುಲಭಕ್ಕೆ ಸಿಕ್ತಾರೆಯೇ, ಅವರ ತಾಯೀರು ಅಷ್ಟು ಸುಲಭವಾಗಿ ಒಪ್ತಾರೆಯೇ? ಖುದ್ದು ಸುಲ್ತಾನರೇ ಹೇಳಿ ಕಳಿಸಿದರೂ ನಿಂತಕಾಲಾಗೆ ಆಗೋ ಕೆಲ್ಸ ಅಲ್ಲ ಇದು. ಇದಕ್ಕೆ ಕಾಲಾನೂ ಬೇಕು, ನೀರಿನ ಹಂಗೆ ಖರ್ಚುಮಾಡೋಕೆ ಹಣಾನೂ ಬೇಕು."

—ನಾಗರತ್ನ ತನ್ನ ಮಾತಿನ ಅರ್ಥವನ್ನು ವಿವರಿಸಿ ಹೇಳಿದಳು.

'ಹಣ ಅಂದ್ರೆ ಸುಮಾರು ಎಷ್ಟು ಬೇಕಾಗಬಹುದು?'

—ವ್ಯವಹಾರದ ಮಾತು ಬಂದ ಬಳಿಕ, ಮಾತನ್ನು ಅಯ್ಯಂಗಾರ್ಯರಿಗೇ ಬಿಡದೆ ಚಂದ್ರಯ್ಯ ಕೇಳಿದ—

'ನೀವು ಖರ್ಚು ಎಷ್ಟಾಗಬಹುದೂಂತ ಅಂದಾಜು ಮಾಡಿದೀರ?'

'ನಮಗೆ ಇದರ ಅಂದಾಜೇ ಇಲ್ಲ. ಏನಿದ್ದರೂ ನೀವೇ ಹೇಳಬೇಕು.'

'ಒಬ್ಬೊಬ್ಬರಿಗೆ ತಲಾ ನೂರು ವರಹ ಅಂದರೂ ಮೂರುಸಾವಿರದ ಇನ್ನೂರು ವರಹ, ಬರೀ ಹುಡುಗೀರಿಗೆ ಕೊಡೋದೇ ಆಗುತ್ತೆ. ಇದರ ಮೇಲೆ ಅವರು ಹೋಗಿ ಬರೋ ಖರ್ಚು, ಊಟ, ಉಪಚಾರ ಉಡುಗೊರೆ ಎಲ್ಲಾ ನೀವೇ ನೋಡಿಕೋಬೇಕು. ಇದರ ಮೇಲೆ ನಿಮಗೇಂತ ಇಷ್ಟೆಲ್ಲಾ ಕಷ್ಟ ನೀಸಿದ್ದಕ್ಕೆ ನನಗೇನಾರ ಕೊಡೋದು ಬಿಡೋದು ನಿಮ್ಮ ವಿಶ್ವಾಸ. ಇದಕ್ಕೆಲ್ಲಾ ನೀವು ಸಿದ್ಧನಾಗಿದ್ದರೆ ಹೇಳಿ, ನಾನೂ ನನ್ನ ಶಕ್ತಿಮೀರಿ ಕೆಲಸ ಮಾಡ್ತೀನಿ.'

—ನಾಗರತ್ನ ಹೇಳಿದಳು.

ಆಕೆ ಹೇಳಿದ್ದನ್ನೆಲ್ಲಾ ಕೇಳಿ, ಮನಸ್ಸಿನಲ್ಲೇ ತಾನೂ ಲೆಕ್ಕಾಚಾರ ಹಾಕಿದ ಚಂದ್ರಯ್ಯನಿಗೆ, ಕಡೆಯ ಪಕ್ಷ ಇದು ಐದಾರುಸಾವಿರ ವರಹಗಳ

ವ್ಯವಹಾರ ಎನಿಸಿ, ಆ ಕಲ್ಪನೆಯಿಂದಲೇ ಅವನ ಎದೆ ನಡುಗಿತು. ಇಷ್ಟು ದೊಡ್ಡ ಹೊಬಲಗನ್ನು, ಕೇವಲ ಒಂದೆರಡು ದಿನದ ಮೋಜಿಗಾಗಿ ಮಾಧವ ರಾಯ ಖರ್ಚು ಮಾಡಲು ಸಿದ್ಧನಾಗಬಹುದೇ ಎನಿಸಿ ಯೋಚನೆಯಾಗಿ—

'ಇದಕ್ಕೆಲ್ಲಾ ಇಷ್ಟು ಹಣ ಬೇಕಾಗುತ್ತೇಂತ ನಾನು ಅಂದು ಕೊಂಡಿರಲಿಲ್ಲ.....'

—ಎಂದು ಗೊಣಗಿದ.

'ನೀವು ಕೇಳೋ ಅಂಥ ಹುಡುಗೀರಿಗೆ ಮನೆ ಬಾಗಿಲಿಗೇ ದಿನಾ ನೂರು ವರಹ ಕೊಡೋಅಂಥ ಧಣಿಗಳು ನಾವಿರ ಜನ ಇದಾರೆ. ಹಾಗಿರೋ ನಾಗ ನೀವು ಅಷ್ಟೂ ಕೊಡೋಲ್ಲಾಂದ್ರೆ ಯಾರು ಬರ್‍ತಾರೆ ?'

—ಸವಾಲು ಹಾಕಿದಂತೆ ಕೇಳಿದಳು ನಾಗರತ್ನ.

'ನಾವು ಕರೆಂಹೋದಕ್ಕೂ, ಇಲ್ಲಿ ಮನೆ ಬಾಗಿಲಿಗೆ ಬರೋದಕ್ಕೂ ವ್ಯತ್ಯಾಸ ಇಲ್ಲವೆ ?'

'ಏನಿದ್ರೂ ಊರು ಬಿಟ್ಟು ಬಂದರೆ ಅವರಿಗೆ ಕಸಬು ಕೆಡೋದಿಲ್ಲವೇ? ಇಟ್ಟುಕೊಂಡ ಧಣೀಗೆ ಮೂರುದಿನ ಉಪವಾಸ ಮಲಗಿಸಿ ಬರಬೇಕಲ್ಲಾ ? ಅದಕ್ಕೆ ಅವರನ್ನ ಒಪ್ಪಿಸಿ ಬರಬೇಕು. ಇದೆಲ್ಲಾ ನಿಮ್ಮ ಚಿಟಿಕೆ ಹೊಡೆದಷ್ಟು ಸುಲಭವಾಗಿ ಆಗೋ ಕೆಲಸವೇ ?'

'ಊಹೂ. ನೀವು ಹೇಳೋದೆಲ್ಲಾ ಸರಿ....'

'ಅದಕ್ಕೇ ನಾನೂ ಸರಿಯಾಗಿ ಕೇಳಿದೆ. ಮುಂದಿನದು ನಿಮ್ಮಿಷ್ಟ. ನೀವು ಆಗಲಿ ಅಂದರೆ ನಾನೂ ಮುಂದಕ್ಕೆ ಪ್ರಯತ್ನ ಮಾಡ್ತೀನಿ.'

—ಎಂದಳು ನಾಗರತ್ನ ಆ ಮಾತನ್ನು ಅಲ್ಲಿಗೇ ಮುಗಿಸಿದಂತೆ.

ಆಕೆ ಹೇಳಿದುದನ್ನು ಕೇಳಿ ಚಂದ್ರಯ್ಯನಿಗೆ ಪ್ರಾಣಸಂಕಟ ಬಂದಂ ತಾಯಿತು. ಮಾಧವರಾಯನನ್ನು ಕೇಳದೆ, ಅಷ್ಟು ವೆಚ್ಚದ ಕೆಲಸಕ್ಕೆ 'ಹೂ' ಎನ್ನಲು ಆತನಿಗೆ ಧೈರ್ಯವಿರಲಿಲ್ಲ. 'ಬೇಡ' ಎನ್ನಲು, ಬಿಟ್ಟರೆ ತನ್ನ ಜೀವಮಾನದ ಕನಸು ನನಸಾಗದೆ ಹೋಗುತ್ತದೆಯಲ್ಲಾ ಎಂಬ ಮುಗುಬ್ಬಸ. ಚಂದ್ರಯ್ಯ ಈ ಇಬ್ಬಗೆಯ ಎಳೆತದಲ್ಲಿ ತುಯ್ಯುತ್ತಿರುವಾಗ ಅದುವರೆಗೂ ಅವರ ಮಾತಿನ ಮಧ್ಯದಲ್ಲಿ ಪ್ರವೇಶಿಸದೆ ಸುಮ್ಮನಿದ್ದ ನಾನು ಯ್ಯಂಗಾರ್‍ರು, ಆಗ ನಡುವೆ ಬಾಯಿ ಹಾಕಿ—

'ಚಂದ್ರಯ್ಯ, ನೀನೂ ಈಗಲೇ ಮಡುಕಿ ಏನೂ ಹೇಳಬೇಡ. ಬೇಕಾ

ವರಿ ನಾಗರವಳ್ಳೀಗೆ ಹೋಗಿ, ನಿಮ್ಮ ಸಾಹುಕಾರರನ್ನು ವಿಚಾರಿಸಿಕೊಂಡು ಬಾ....ನಾಗರತ್ನ, ನೀನೂ ಚಂದ ಮನೇಲಿ ಹಿರಿದದ್ದೇ ಲಾಭ ಅಂತ ನೋಡ ಬೇಡ. ಇವನು ಈಗ ಇದೆಲ್ಲಾ ಉತ್ಸವಕ್ಕೆ ಹೊರಟಿರೋದು ನನಗಾಗಿ. ನೀನು ಎಷ್ಟು ಕಡಮೇಲಿ ಸಾಧ್ಯವಾಗುತ್ತೋ ಅಷ್ಟರಲ್ಲಿ ಎಲ್ಲಾ ಏರ್ಪಾಡು ಮಾಡು. ಎಲ್ಲಾ ತೃಪ್ತಿಕರವಾಗಿ ಏರ್ಪಾಡು ಆದರೆ, ನಾವು ಯಾರೂ ನಿನ್ನನ್ನು ಮರೆಯೊಲ್ಲ. ಗೊತ್ತಾಯಿತೇ ?'

—ಎಂದು ಹೇಳಿದರು.

ಚಂದ್ರಯ್ಯನಿಗೂ ಅವರು ಹೇಳಿದುದೇ ಸರಿ ಎಂದು ತೋರಿ -

'ನನಗೆ ನಾಲ್ಕುದಿನ ಅವಕಾಶ ಕೊಟ್ಟರೆ ಧಣಿಚಿತ್ತ ಹೇಗೇಂತ ತಿಳಿದು ಹೇಳುತ್ತೇನೆ.'

—ಎಂದು ಹೇಳಿ, ಆ ದಿನಕ್ಕೆ ಮಾತನ್ನು ಅಲ್ಲಿಗೆ ಮುಗಿಸಿ, ನಾಗರತ್ನ ತನ್ನ ಮುಂದೆ ತಂದಿಟ್ಟ ತಾಂಬೂಲದ ತಟ್ಟೆಯೊಳಗೆ ಒಂದು ವರಹ 'ಮಾಮೂಲು' ಇಟ್ಟು, ವೀಳೆಯದೆಲೆ ಹಾಕಿಕೊಂಡು ಅಲ್ಲಿಂದ ಹೊರಬಿದ್ದ.

೫

ಪಟ್ಟಣದಿಂದ ಹಿಂತಿರುಗಿದ ಚಂದ್ರಯ್ಯ ಹೇಳಿದುದನ್ನೆಲ್ಲಾ ಕೇಳಿ, ಮಡಿಯದ ಹಣವನ್ನು ವೆಚ್ಚಮಾಡಲು ಹಿಂದೆ ಮುಂದೆ ನೋಡದ ಮಾಧವ ರಾಯನಿಗೂ ಚಿಂತೆಯಾಯಿತು.

ಆ ಚಿಂತೆಯಿಂದಾಗಿ ಅವರ ಉತ್ಸಾಹಕ್ಕೂ ಮಂಕು ಕಟ್ಟಿದಂತಾಗಿ ಹೇಗೆ ಇತ್ಯರ್ಥ ಮಾಡಬೇಕೆಂದು ತೋಚದೆ—

'ಏನು ಮಾಡೋದೂನ್ತೀಯಾ ಚಂದ್ರಯ್ಯ, ಇದೊಳ್ಳೆ ಬಿಸಿ ತುಪ್ಪ ನುಂಗಿದ ಸಮಾಚಾರ ಆಯಿತಲ್ಲಾ ?"

—ಎಂದು ಕೇಳಿದ.

'ನನ್ನನ್ನು ಕೇಳಿದರೆ ನಾನೇನು ಹೇಳಲಿ—ಎಲ್ಲಾ ನಿಮ್ಮ ಚಿತ್ತಕ್ಕೆ ಸೇರಿದ್ದು. ಆದರೂ ಐದಾರು ಸಾವಿರ ವರಹ ಖರ್ಚು ಮಾಡೋದು ಅಂದರೆ ಸಾಮಾನ್ಯವಲ್ಲ, ಬಡವರ ನೂರು ಮದುವೆ ಆಗುತ್ತೆ. ಅಷ್ಟು ಹಣಾನ

ಎರಡು ದಿನದ ಮೋಜಿಗೆ ಕಳೆಯೋದು ನನಗೂ ಸರಿ ಕಾಣೊಲ್ಲ....ಈ ಯೋಚನೆ ಸದ್ಯಕ್ಕೆ ಬಿಟ್ಟುಬಿಡೋದೇ ಮೇಲು ಅಂತ ಕಾಣ್ತಾದೆ.'

—ಆ ಮಾತನ್ನು ಆಡುವುದೇ ಬಿಡುವುದೇ ಎಂದು ಯೋಚಿಸುತ್ತಾ ಹೇಳಿದ ಚಂದ್ರಯ್ಯ.

'ನನಗೂ ಹಾಗೇ ಅನಿಸುತ್ತೆ. ಆದರೆ ಇದನ್ನ ಬಿಟ್ಟುಬಿಟ್ಟರೆ ಊರಿನಲ್ಲಿ ನಗೆಪಾಟಲಾಗುತ್ತಲ್ಲಾ ?'

'ಏಕೆ ?'

'ಈಗಾಗಲೇ ಊರಿನಲ್ಲಿ ಬಹಳ ಜನಕ್ಕೆ ಪಟ್ಟಣಕ್ಕೆ ಹೋದವಿಷಯ ಗೊತ್ತಾಗಿದೆ. ನಾನೂ ಹತ್ತಾರು ಜನರ ಮುಂದೆ ಬಾಯಿಬಿಟ್ಟು ಹೇಳಿಯಾಗಿದೆ. ಈಗ ಸುಮ್ಮನಾಗಿಬಿಟ್ಟರೆ, ಅವರೆಲ್ಲಾ ನನ್ನದು ಬಾಯಿ ಬಡಾಯಿ ಎಂದುಕೊಳ್ಳೋದಿಲ್ಲವೇ ?....'

'ಅನ್ನೋರೆಲ್ಲಾ ನೀವು ಕೈಲಿದ್ದದ್ದನ್ನ ಕಳೆದುಕೊಂಡರೆ ಆಮೇಲೆ ನಿಮಗೆ ಸಹಾಯಾಂದ್ರೆ ಕೊಡ್ತಾರೆಯೇ ?'

'ಕೊಡ್ತಾರೋ ಬಿಡ್ತಾರೊ–ಈಗಂತೂ ನಮ್ಮ ಬೆಲೆ ಇಷ್ಟೇಂತ ಕಟ್ಟಿ ಹಾಕ್ತಾರೆ. ರಾಮಯ್ಯಂಗಾರ್ರ ಎದುರಿಗೆ ನೀನೂ ನಗೆಪಾಟಲಾಗುತ್ತೀಯ.'

'ಅದೂ ನಿಜವೇ....'

'ಅದಕ್ಕೆ ನಾನು ಹೇಳಿದ್ದು, ಇದು ಬಿಸಿ ತುಪ್ಪ ನುಂಗಿದ ಸಮಾಚಾರ ಅಂತ....'

'ಹೇಗೊ ಇದು ನನ್ನಿಂದ ಆರಂಭವಾದದ್ದು. ನಿಮ್ಮೊಬ್ಬರ ಮೇಲೆ ಭಾರ ಹಾಕೋದು ನನಗೂ ಧರ್ಮವಲ್ಲ. ಸಾವಿರನ್ನೋ, ಐದುನೂರೋ– ನಾನೂ ನನ್ನ ಕೈಯಿಂದ ಆದಷ್ಟು ಹಾಕುತ್ತೇನೆ. ನಿಮ್ಮಿಂದ ಆದಷ್ಟು ನೀವೂ ಹಾಕಿ. ಹೇಗೊ ಆ ನಿಮಿತ್ತ ಅನ್ನಿಸಿಬಿಡೋಣ."

—ಎಂದು ಚಂದ್ರಯ್ಯ ಆ ಧರ್ಮಸಂಕಟದಿಂದ ಪಾರಾಗಲು ದಾರಿ ತೋರಿಸಿದ.

ಚಂದ್ರಯ್ಯನ ಮಾತು ಕೇಳಿ, ಸಾವಿರ, ಐನೂರಕ್ಕೆ ತನ್ನಂಥವನು ಚಂದ್ರಯ್ಯನಿಗೆ ಕೈಚಾಚಬೇಕೇ ಎಂಬ ಕೋಪ ಮೂಡಿ, ಮಾಧವರಾಯ–

'ನೀನೇನೂ ಕೊಡಬೇಡ. ಎಷ್ಟು ಖರ್ಚಾಗುತ್ತೋ ಆಗಲಿ. ಇದು ನಡೆದು ಹೋಗಲಿ. ಮುಂದಕ್ಕೆ ದೇವರಿಟ್ಟ ಹಾಗಾಗಲಿ."

—ಎಂದು ಹೇಳಿ, ಚಂದ್ರಯ್ಯನನ್ನು ಹಜಾರದಲ್ಲೇ ಕೂಡಿಸಿ, ಒಳ ಮನೆಗೆ ಹೋಗಿ, ಗೋಡೆಯೊಳಗಿನ ರಹಸ್ಯ ಸ್ಥಾನದೊಳಗಿದ್ದ ಆಭರಣಗಳ ಗಂಟಿನಲ್ಲಿದ್ದ ಹಿಂದೆ ಕರಗಿಸಿದ ಒಡವೆಗಳ ವಜ್ರ, ಕೆಂಪು ಮೊದಲಾದ ಹರಳು ಕಲ್ಲುಗಳು, ಒಂದೆರಡು ದೊಡ್ಡ ಒಡವೆಗಳನ್ನು ತಂದು, ಚಂದ್ರಯ್ಯನ ಕೈಯಲ್ಲಿಟ್ಟು—

'ಪಟ್ಟಣದಲ್ಲಿ ಇದನ್ನು ಗುಟ್ಟಾಗಿ ಯಾರಿಗಾದರೂ ಮಾರಿಬಿಡು. ಇದರ ಮಾರಾಟದಿಂದ ಬೇಕಾದಷ್ಟು ಹಣ ಒದಗಬಹುದು. ಆದರೆ ಒಂದು ಮಾತು. ಯಾರಿಗೂ ಈ ವಿಷಯ ತಿಳಿಸಬೇಡ. ಕೊಂಡುಕೊಳ್ಳುವವನಿಗೂ ಇದು ನನ್ನದು ಅಂತ ತಿಳಿಯಬಾರದು.'

—ಎಂದು ಎಚ್ಚರಿಕೆ ಹೇಳಿದ.

ಚಂದ್ರಯ್ಯನಿಗೆ ಆ ಒಡವೆಗಳ ಬೆಲೆ ಕಟ್ಟುವ ಯೋಗ್ಯತೆ ಇಲ್ಲದಿದ್ದರೂ, ಒಡವೆಗಳ, ಹರಳುಗಳ ಆಕಾರ, ಹೊಳಪಿನಿಂದಲೇ ಅವು ಬಹು ಬೆಲೆ ಬಾಳುವವು ಎನ್ನುವಷ್ಟು ಅರಿವಾಗಿ, ಹಣದ ಅಡಚಣೆಗಾಗಿ ಮಾಧವರಾಯ ತನ್ನ ಹೆಂಡತಿಯ ಒಡವೆಗಳನ್ನು ಮಾರುತ್ತಿದ್ದಾನೆಯೋ ಏನೋ ಎನಿಸಿ ಸಂಕಟವಾಗಿ—

'ಇದೆಂಥ ಹುಚ್ಚು ಬಿಡಿ ಸ್ವಾಮಿ, ಇದನ್ನು ಮಾರೋದೂ ಬೇಡ, ಆ ಮನೆಹಾಳು ಖುಷಿ ಪಡೋದೂ ಬೇಡ.'

—ಎಂದು ಹೇಳಿದ, ಮಾಧವರಾಯ ತನ್ನ ಕೈಗೆ ಕೊಟ್ಟ ಒಡವೆಗಳನ್ನು ಆತನ ಮುಂದೇ ಇಟ್ಟು.

ಚಂದ್ರಯ್ಯನ ಮಾತು ಕೇಳಿ ಮಾಧವರಾಯ, ವ್ಯಂಗ್ಯವಾದ ನಗು ನಗುತ್ತಾ—

"ಇದನ್ನು ಎಲ್ಲಿಂದ ತಂದೆನೋ ಅಲ್ಲಿಗೇ ಮತ್ತೆ ತಗೊಂಡು ಹೋಗಿ ಇಡೋದು ಸಾಧ್ಯವೇ ಇಲ್ಲ, ಚಂದ್ರಯ್ಯ."

—ಎಂದ.

'ಏಕೆ?'

'ಇದು ಹೀಗೇ ಹೋಗಬೇಕಾದದ್ದೇ. ನೀನು ಗಾದೆ ಮಾತು ಕೇಳಿಲ್ಲವೇ,—'ದಂಡಿನಲ್ಲಿ ಹುಟ್ಟಿದ್ದು ಲಡಾಯಿಯಲ್ಲಿ ಸತ್ತಿತು' ಅಂತ. ಈ

ಒಡವೆಗಳೂ ಅದೇ ಚಾಯಮಾನಕ್ಕೇ ಸೇರಿದವು. ಆದ್ದರಿಂದ ನೀನೇನೂ ಯೋಚನೆ ಮಾಡಬೇಡ.'

'ಹಾಗಂದ್ರೇನು ಸ್ವಾಮಿ, ಎಲ್ಲೋ ಬೀದೀಲಿ ಇವೆಲ್ಲಾ ಸಿಕ್ಕ ಹಾಗೆ ಮಾತಾಡ್ತೀರಲ್ಲಾ........'

'ಹಾಗೆ ಸಿಕ್ಕಿದ್ದೂಂತಲೇ ಇಟ್ಕೊಕೋ........'

'ಇವು ಅಮ್ಮನವರ ಒಡವೆಗಳಲ್ಲವೇ ಸ್ವಾಮಿ ?"

ಚಂದ್ರಯ್ಯನ ಮಾತು ಕೇಳಿ ಮಾಧವರಾಯನಿಗೆ ಕೆಂಡ ತುಳಿದಂತಾಯಿತು. ಈ ಒಡವೆಗಳು ಕಳುವಿನ ಮಾಲು ಎಂಬುದು ಚಂದ್ರಯ್ಯನಿಗೆ ತಿಳಿಯಿತೋ ಏನೋ ಎಂಬ ಅಳುಕಿನಿಂದ, ಚಂದ್ರಯ್ಯನ ಮಾತಿಗೆ ಉತ್ತರ ಕೊಡದೆ, ಸಂಶಯಪೂರ್ಣ ದೃಷ್ಟಿಯಿಂದ ಅವನ ಮುಖವನ್ನೇ ನೋಡಿದ.

ಮಾಧವರಾಯ ತನ್ನ ಮಾತಿಗೆ ಉತ್ತರ ಕೊಡದಿದ್ದುದನ್ನು ಕಂಡು, ಚಂದ್ರಯ್ಯನಿಗೆ ತನ್ನ ಮಾತು ಅತಿಯಾಯಿತೇನೋ ಅನಿಸಿ—

'ಏನೋ ಮಾತಾಡಿದೇಂತ ತಾವು ಚಿತ್ತಕ್ಕೆ ಆಯಾಸ ಮಾಡಿಕೊಳ್ಳಬಾರದು. ಅಮ್ಮಾವರು ಈ ಮನೆಗೆ ಲಕ್ಷ್ಮಿ ಇದ್ದ ಹಾಗಿದಾರೆ. ನಾನೂ ಆ ತಾಯಿ ಇಟ್ಟ ಅನ್ನ ತಿಂದಿದೇನೆ. ಹೆತ್ತ ತಾಯಿಗಿಂತ ಹೆಚ್ಚಾಗಿ ಆಕೆ ನನ್ನ ಮೇಲೆ ಅಕ್ಕರೆ ಮಾಡ್ತಾಳೆ. ಅಂಥಾವರ ಒಡವೇನ ತಗೊಂಡು ಹೋಗಿ, ಈ ಶವಲಿಗೆ ಮಾರೋಕೆ ನನಗೆ ಇಷ್ಟವಿಲ್ಲ. ಅದಕ್ಕೇ ಆ ಮಾತು ಆಡಿದೆ.'— ಎಂದ.

ಆ ಮಾತು ಕೇಳಿ ಚಂದ್ರಯ್ಯನಿಗೆ ತನ್ನ ಗುಟ್ಟಿನ ಸುಳಿವು ಸಿಕ್ಕಿಲ್ಲವೆಂದು ಅರ್ಥವಾಗಿ, ಮನಸ್ಸಿಗೆ ನೆಮ್ಮದಿಯಾಗಿ, ನಗುತ್ತಾ—

'ನೀನೇನೂ ಯೋಚನೆ ಮಾಡಬೇಡ ಚಂದ್ರಯ್ಯ. ಒಡವೆಗಳು ಈ ಅಮ್ಮನವರವು ಅಲ್ಲ.'

—ಎಂದು ಹೇಳಿದ.

'ಮತ್ತೆ........'

'ಹೀಗೆ ಇನ್ನು ಯಾರೋ ಒಬ್ಬ ಅಮ್ಮನವರದು- ಈ ಅಮ್ಮನವರ ಒಡವೆ ಮಾರೋಕೆ ನಿನ್ನಷ್ಟೇ ನನಗೂ ಮನಸ್ಸಿಲ್ಲ. ಆದ್ದರಿಂದ ಆ ಯೋಚನೆ ಬಿಟ್ಟು, ನಿಶ್ಚಿಂತೆಯಾಗಿ ಪಟ್ಟಣಕ್ಕೆ ಹೋಗಿ, ಇದನ್ನು ಮಾರಿ ನಿನ್ನ ಕೆಲಸ

ಮಾಡಿಕೊಂಡು ಬಾ. ಆದರೆ ಇದು ನನ್ನದು, ನಾನು ಮಾರಲಿಕ್ಕೆ ಕೊಟ್ಟೆ ಅನ್ನೋ ವಿಷಯ ಮಾತ್ರ ಯಾರು ಯಾರಿಗೂ ತಿಳಿಯಬಾರದು....'

' ಹಾಗಂದ್ರೆ ಕೊಳ್ಳೋರ ಮುಂದೆ ಯಾರದೂಂತ ಹೇಳಲಿ ? '

' ನಿನ್ನದೇ ಅಂತ ಹೇಳಿಕೋ. ಏನಾದರೂ ಹೇಳು—ನನ್ನದು ಅಂತ ಮಾತ್ರ ಹೇಳದಿದ್ದರೆ ಸರಿ.'

—ಎಂದು ಕಟ್ಟುಮಾಡಿದ ಮಾಧವರಾಯ.

ಆತ ಅಷ್ಟು ಹೇಳಿದ ಬಳಿಕ, ಬೇರೇನೂ ಮಾತಾಡಲು ತೋಚದೆ, ಚಂದ್ರಯ್ಯ—

' ಆಯಿತು—ನಿಮ್ಮಿಷ್ಟ, ಇವತ್ತಲ್ಲ, ಯಾವತ್ತೇ ಆದರೂ, ಈ ಹಾಳು ಚಂದ್ರಯ್ಯನಿಂದ ಇದೆಲ್ಲಾ ಆಯಿತು ಅಂತ ನೀವಾಗಲೀ, ಅಮ್ಮನವರಾಗಲೀ ನೊಂದುಕೊಂಡು ನನಗೆ ಶಾಪ ಹಾಕದಿದ್ದರೆ ಸರಿ.'

—ಎಂದು ಹೇಳಿ, ಆ ಮಾತಿನ ಮೂಲಕ, ತನ್ನ ನೆತ್ತಿಯ ಮೇಲಿದ್ದ ಭಾರವನ್ನು ಇಳುಹಿಕೊಂಡಂತೆ, ಚಂದ್ರಯ್ಯ ಮತ್ತೆ ಪಟ್ಟಣದತ್ತ ಪ್ರಯಾಣ ಬೆಳೆಸಿದ.

ಆದರೆ ಈ ಬಾರಿ, ಅವನ ಮನಸ್ಸು, ಮೊದಲ ಬಾರಿ ಪ್ರಯಾಣ ಹೊರಟಾಗಿನಷ್ಟು ಗೆಲುವಾಗಿರಲಿಲ್ಲ; ಇಬ್ಬಗೆಯ ದುಗುಡ ಅವನನ್ನು ಕಾಡುತ್ತಿತ್ತು. ಒಂದು—ಅನ್ಯಾಯವಾಗಿ ಎರಡು ದಿನದ ಖುಷಿಗೆ ಇಂಥ ಒಳ್ಳೆಯ ಒಡವೆಗಳನ್ನು ಮಾರಬೇಕಲ್ಲ ಎಂಬುದು. ಮಾಧವರಾಯ ಇವು ತನ್ನ ಹೆಂಡತಿಯ ಒಡವೆಗಳಲ್ಲ ಎಂದು ಹೇಳಿದ್ದರೂ, ಚಂದ್ರಯ್ಯನಿಗೆ ಆ ಮಾತು ನಂಬಿಕೆಯಾಗಿರಲಿಲ್ಲ. ತನ್ನ ಬಳಿ ಅಷ್ಟು ನಗದಿಲ್ಲ ಎಂದು ಸೋಗಿ ಬಿಂಕವನ್ನು ಕಳೆದುಕೊಳ್ಳಲಾಗದ ಸಂಕಟಕ್ಕೆ ಮಾಧವರಾಯ ಸುಳ್ಳು ಹೇಳಿದ್ದಾನೆ ಎಂದೇ ಚಂದ್ರಯ್ಯ ಊಹಿಸಿದ್ದ. ಆ ಊಹೆ ಚಂದ್ರಯ್ಯನ ಕರುಳನ್ನು ಇರಿಯುತ್ತಿತ್ತು.

ಚಂದ್ರಯ್ಯ ಮೊದಲಬಾರಿಗೆ ಮಾಧವರಾಯನೊಂದಿಗೆ ಚದುರಂಗ ದಾಟವಾಡಲು ಬಂದಾಗಲೇ, ಮಾಧವರಾಯನ ಹೆಂಡತಿ ಶಂಕರಮ್ಮನನ್ನು ನೋಡಿದ್ದ. ಆಗಲೇ ಮಾಧವರಾಯನ ಮನೆ, ಮನೆಯಂತಿರದೆ ಛತ್ರದಂತೆ ನಡೆಯುತ್ತಿರುವುದೂ ಅವನ ಕಣ್ಣಿಗೆ ಬಿದ್ದಿತ್ತು. ' ಗಂಡ ಇಷ್ಟು ದುಂದು ವೆಚ್ಚ ಮಾಡಿದರೂ, ಹೊತ್ತಲ್ಲದ ಹೊತ್ತಿನಲ್ಲಿ ಹತ್ತಾರು ಜನರನ್ನು ಊಟಕ್ಕೆ

ಎಬ್ಬಿಸಿದರೂ, ಮೂರು ಮೂರು ದಿನ ಹಗಲು ಇರುಳು ಹೆಂಡತಿಯ ಮುಖ ವನ್ನೇ ನೋಡದೆ, ಚದುರಂಗ ಆಡುತ್ತಾ ಕುಳಿತರೂ, ಇನ್ನೂ ಚಿಕ್ಕ ಪ್ರಾಯದ ಶಂಕರಮ್ಮ, ಒಮ್ಮೆಯಾದರೂ ಮುಖ, ಗಂಟುಹಾಕದೆ, ಕಣ್ಣಿನಲ್ಲೂ ಬೇಸರವನ್ನು ನಟಿಸದೆ, ನಗುನಗುತ್ತಾ ಮಾತನಾಡಿಸಿ, ವಿಶ್ವಾಸದಿಂದ ಊಟಕ್ಕಿಡುತ್ತಿದ್ದುದನ್ನು ನೋಡಿದ್ದ ಚಂದ್ರಯ್ಯನಿಗೆ ಆಕೆಯ ಬಗ್ಗೆ ಅಪಾರ ವಿಶ್ವಾಸ ಮೂಡಿತ್ತು. ಆಕೆಯ ಒಳ್ಳೆಯತನದ ಪುಣ್ಯದಿಂದಲೇ ಮಾಧವ ರಾಯನ ಮನೆಯಲ್ಲಿ ಲಕ್ಷ್ಮಿ ತಾಂಡವನಾಡುತ್ತಿದ್ದಾಳೆ ಎಂದು ನಂಬಿದ್ದ. ಎಂತಲೇ ಈಗ ಆಕೆಯ ಒಡವೆಗಳನ್ನು ಮಾರಬೇಕಲ್ಲಾ ಎಂಬುದು ಚಂದ್ರಯ್ಯನ ಹೃದಯವನ್ನು ಸಬಳದಂತೆ ಇರಿಯುತ್ತಿತ್ತು.

ಅವನ ದುಗುಡಕ್ಕೆ ಇದು ಒಂದು ಕಾರಣವಾದರೆ, ಇನ್ನೊಂದು—

ಮಾಧವರಾಯ ಹೇಳಿದಹಾಗೆ, ಯಾರಿಗೂ ಏನೂ ಸುಳಿವು ಕೊಡದೆ ಇಂಥಾ ಭಾರಿ ಒಡವೆಗಳನ್ನು ಹೇಗೆ ಮಾರುವುದು ಎಂಬುದು.

ಚಂದ್ರಯ್ಯ ಒಂದೆರಡು ಬಾರಿ ಶ್ರೀರಂಗಪಟ್ಟಣಕ್ಕೆ ಬಂದು ಹೋಗಿದ್ದರೂ, ಅವನಿಗೆ ಪಟ್ಟಣದ ವಜ್ರವಡಿ ವ್ಯಾಪಾರಿಗಳು ಯಾರದೂ ಪರಿಚಯವಿರಲಿಲ್ಲ. ಅಪರಿಚಿತರಾದ ವರ್ತಕರ ಬಳಿ ಹೋಗಿ, ಹೆಸರು ದಿಶೆ ತಿಳಿಸದೆ ಇದನ್ನು ಕೊಳ್ಳಿ ಎಂದು ಕೇಳುವುದು ಹೇಗೆ? ಕೇಳಿದರೂ ಅವರು ನನ್ನಲ್ಲಿ ಅನುಮಾನಪಟ್ಟು ಕೊತ್ವಾಲ ಚಾವಡಿಗೆ ಸುದ್ದಿ ಕಳಿಸಿದರೆ ಏನು ಗತಿ? ಹಾಗೂ ಯಾರಾದರೂ ನಂಬಿಕೊಂಡರೂ, ವಜ್ರ ವ್ಯಾಪಾರದ ಗಂಧವೂ ಇಲ್ಲದ ನನಗೆ ಅವರು ಮೋಸ ಮಾಡಿದರೆ— ?

ಈ ಚಿಂತೆಯನ್ನು ನಿವಾರಿಸಲು ಚಂದ್ರಯ್ಯನಿಗೆ ಹೊಳೆದ ಮೊದಲ ದಾರಿ—ಶಾಮಯ್ಯಂಗಾರ್ಯರಿಗೆ ಇದ್ದ ವಿಷಯ ತಿಳಿಸಿ, ಅವರ ಮೂಲಕ ಒಡವೆಗಳ ವ್ಯಾಪಾರ ಮಾಡಿಸಿದರಾಯಿತು ಎಂಬುದು.

ಆದರೆ ಕೊಂಚ ಆಲೋಚನೆ ಮಾಡಿದ ಬಳಿಕ, ಶಾಮಯ್ಯಂಗಾರ್ಯರಿಗೆ ಈ ವಿಷಯ ಹೇಳಿದರೆ, ಅವರಿಗೆ ಮಾಧವರಾಯನ ಬಗ್ಗೆ ತಾತ್ಸಾರಭಾವನೆ ಮೂಡಬಹುದು ಎನಿಸಿ, ಆ ದಾರಿ ಸರಿಯಲ್ಲವೆನಿಸಿ ಕೊನೆಗೆ—

'ನಾಗರತ್ನಳ ಮೂಲಕ ಈ ವ್ಯವಹಾರ ಮಾಡಬೇಕು. ವೇಶ್ಯೆಯಾದ ಅವಳಿಗೆ ದೊಡ್ಡ ವರ್ತಕರ ಪರಿಚಯವಿರುತ್ತೆ. ಅವಳು ಮಾರಾಟ ಮಾಡಿದರೆ ಯಾರಿಗೂ ಅನುಮಾನ ಬರುವುದಿಲ್ಲ. ಅಷ್ಟೋ ಇಷ್ಟೋ ಎಂಜಲು

ಹಾಕಿದರೆ ಅವಳೂ ಯಾರ ಮುಂದೂ ಬಾಯಿ ಬಿಡುವುದಿಲ್ಲ. ಈ ದಾರಿಯೇ ಸರಿ"—ಎಂದು ತೀರ್ಮಾನಕ್ಕೆ ಬಂದ.

ಆ ಬಗ್ಗೆ ಯೋಚನೆ ಮಾಡಿದಷ್ಟೂ ಅದೇ ಅತ್ಯಂತ ಸೂಕ್ತ ಮಾರ್ಗ ವೆಂದು ಮನಸ್ಸಿಗೆ ಖಚಿತವಾಗಿ, ಶ್ರೀರಂಗಪಟ್ಟಣವನ್ನು ತಲುಪಿದ ಚಂದ್ರಯ್ಯ, ಶ್ಯಾಮಯ್ಯಂಗಾರ್ಯರನ್ನು ಕಾಣಲು ಹೋಗದೆ, ಕೋಟೆ ಯೊಳಗೇ ಪ್ರವೇಶ ಮಾಡದೆ, ನೇರವಾಗಿ ಷಹರ್ ಗಂಜಾಂಗೆ ಹೋಗಿ ನಾಗರತ್ನಳ ಮನೆಯ ದಾರಿ ಹಿಡಿದ.

೬

ಒಮ್ಮೆ, ಶ್ಯಾಮಯ್ಯಂಗಾರ್ಯರೊಂದಿಗೆ ನಾಗರತ್ನಳ ಮನೆಗೆ ಬಂದು ಹೋದ ಚಂದ್ರಯ್ಯನಿಗೆ, ಎರಡನೆಯ ಬಾರಿ ನಾಗರತ್ನಳ ಮನೆಗೆ ಪ್ರವೇಶ ದೊರೆಯುವುದು ಏನೂ ಕಷ್ಟವಾಗಲಿಲ್ಲ.

ಯಾರಿಗೂ ಹೇಳದೆ ಕೇಳದೆ ಹಜಾರವನ್ನು ಪ್ರವೇಶಿಸಿ, ಬಂದವರು ಕುಳಿತುಕೊಳ್ಳಲೆಂದೇ ಹಾಕಿದ ರತ್ನಗಂಬಳಿಯ ಮೇಲೆ ಒರಗುದಿಂಬಿಗೆ ಮೈ ಒರಗಿಸಿ ಕುಳಿತುಕೊಂಡು....

''ಯಾರು ಬೇಕಾಗಿತ್ತೊ ?"

—ಎಂದು ಕೇಳಿದ ಹಜಾರದಲ್ಲಿದ್ದ ಮುದುಕಿಗೆ—

'ನಾಗರತ್ನಾನ ನೋಡಬೇಕಾಗಿತ್ತು. ನಾಗರವಳ್ಳಿಯಿಂದ ಚಂದ್ರಯ್ಯ ಬಂದಿದಾನೇಂತ ಹೇಳಿ'

—ಎಂದು ಹೇಳಿ ಕಳುಹಿಸಿದ.

ಆ ಸುದ್ದಿಯನ್ನು ಕೇಳುತ್ತಿದ್ದ ಹಾಗೇ ನಾಗರತ್ನ ಹಜಾರಕ್ಕೆ ಬಂದು ಚಂದ್ರಯ್ಯನಿಗೆ ಕೈ ಮುಗಿದು—

'ಊರಿಗೆ ಯಾವಾಗ ಬಂದಿರಿ ಅಣ್ಣಾ ?'

—ಎಂದು ಕುಶಲಪ್ರಶ್ನೆ ಮಾಡಿದಳು.

'ಇವತ್ತೇ.... ಈಗಲೇ ಇಲ್ಲಿಗೆ ಬಂದುದ್ದು'

'ಮತ್ತೆ......ಯಜಮಾನರು....'

'ಉಹೂ....ನಾನಿನ್ನೂ ಅವರನ್ನ ನೋಡಲಿಕ್ಕೆ ಹೋಗಿಲ್ಲ. ನಿನ್ನ ಹತ್ತಿರ ಮಾತು ಮುಗಿಸಿಕೊಂಡು ಅವರನ್ನು ನೋಡಲಿಕ್ಕೆ ಹೋಗ್ತೀನಿ'.'

'ಹೋದ ಕೆಲಸ ಏನು ಹಣ್ಣೋ ಕಾಯೋ ?'

" ಹಣ್ಣೇ...."

" ಹಂಗಿದ್ರೆ ಮಾತು ಮುಗಿಸೋಕೆ ಯಜಮಾನರು ಎದುರಿಗೇ ಇದ್ದರೆ, ಒಳ್ಳೆಯದಲ್ಲಾ—ಇಲ್ಲೀವರೆಗೂ ನಿಮ್ಮನ್ನ ಕರೆದುಕೊಂಡು ಬಂದೋರು ಅವರು ನನಗೂ ಅನ್ನ ಕೊಟ್ಟು ಸಾಕೋ ಧಣಿ ಅವರು. ಅವರು ನನ್ನ ಬಿಟ್ಟು ಮಾತು ಮುಗಿಸಿದರು ಅಂತ ಬೇಜಾರು ಮಾಡಿಕೊಂಡ್ರೆ...."

" ಅವರನ್ನು ಬಿಟ್ಟು ನಿನ್ನೊಬ್ಬಳ ಹತ್ತಿರವೇ ಮಾತು ಮುಗಿಸ ಬೇಕೂಂತ ನನಗೂ ಇಷ್ಟವಿಲ್ಲ. ಆ ಮಾತೆಲ್ಲಾ ಅವರ ಎದುರಿಗೇ ಮುಗಿಸೋಣ......"

" ಮತ್ತೆ....„

" ಈಗ ನಿನ್ನ ಹತ್ತಿರ ಗುಟ್ಟಾಗಿ ಕೆಲವು ಮಾತಾಡೋದಿತ್ತು. ಅದಕ್ಕೆ ಮೊದಲು ನಿನ್ನನ್ನು ನೋಡಿ ಮಾತಾಡಿದ ಮೇಲೆ ಅಯ್ಯಂಗಾರ್ ಸ್ವಾಮಿಗಳ ಹತ್ತಿರ ಹೋಗೋಣ ಅಂತ ಬಂದೆ...."

" ಹಾಗೋ. ಅಂಥಗುಟ್ಟು ಮಾತು ಏನು ಅಣ್ಣ ? "

" ಅದೇನೂಂತ ಹೇಳ್ತೀನಿ. ಅದಕ್ಕೆ ಮೊದಲು ನೀನು ನನಗೆ ಒಂದು ಮಾತು ಕೊಡಬೇಕು. "

" ಏನು ? "

" ನಾನು ಹೇಳೋಮಾತು ನಿನಗೆ ಒಪ್ಪಿಗೆಯಾದರೆ ಸರಿ. ಇಲ್ಲದೆ ಹೋದರೂ ನಾನು ನಿನ್ನ ಮುಂದೆ ಹೇಳೋ ವಿಷಯಾನ ಯಾರ ಮುಂದೂ ಬಾಯಿ ಬಿಡೊಲ್ಲಾ ಅಂತ ನೀನು ನನಗೆ ಮಾತು ಕೊಡಬೇಕು. "

" ಅಂಥ ಗುಟ್ಟೇ ? "

" ಹೂ. "

" ಹಂಗಿದ್ರೆ ಆಯ್ತು—ಹೇಳಿ. ನೀವು ಹೇಳಿದ ಕೆಲಸ ನನ್ನ ಕೈಯಿಂದ ಆದ್ರೆ ಮಾಡ್ತೀನಿ. ಇಲ್ಲಾಂದ್ರೆ ಇಲ್ಲ. ಆದ್ರೆ ಕೆಲ್ಸ ಆಗ್ಲಿ ಬಿಡ್ಲಿ, ನೀವು ಹೇಳಿದ ಮಾತನ್ನ ಮಾತ್ರ ಚಾಮುಂಡೇಶ್ವರಿ ಅಮ್ಮನವರ ಪಾದಸಾಕ್ಷಿಯಾಗೂ ಯಾರ ಮುಂದೂ ಬಾಯಿ ಬಿಡೋದಿಲ್ಲ."

—ಎಂದು ಪ್ರಮಾಣ ಮಾಡಿ ಹೇಳಿದಳು ನಾಗರತ್ನ.

" ನೀನು ಅಷ್ಟು ಹೇಳಿದ ಮೇಲೆ ಸರಿ...."

—ಎಂದು, ಆ ಮಾತನ್ನು ಹತ್ತು ಜನ ಬಂದು ಹೋಗಬಹುದಾದ ಹಜಾರದಲ್ಲಿ ಆಡಲು ಹಿಂಜರಿದು ಸುತ್ತಮುತ್ತಲೂ ನೋಡಿದ ಚಂದ್ರಯ್ಯ.

ಅವನ ನೋಟದಿಂದಲೇ, ಅವನ ಸಂಕೋಚ ಏನೆಂಬುದನ್ನು ಅರ್ಥ ಮಾಡಿಕೊಂಡ ಇಂಗಿತಜ್ಞಳಾದ ನಾಗರತ್ನ—

"ಗುಟ್ಟಿನ ಮಾತಾದ್ರೆ ಇಲ್ಲಿ ಆಡೋದು ಸರಿಯಲ್ಲ. ಒಳಕ್ಕೆ ಬನ್ನಿ, ನನ್ನ ಕೋಣೇಲೇ ಮಾತಾಡೋಣ."

—ಎಂದು ಹೇಳಿ, ಬಳಿಕ ಏನೋ ಯೋಚಿಸಿ—

"ಅಂದ ಹಾಗೆ ಊರಿಗೆ ಬಂದೋರು ನೆಟ್ಟಗೆ ಇಲ್ಲಿಗೇ ಬಂದೆ ಅಂದ್ರಲ್ಲಾ....ಬೆಳಗ್ಗೆ ತಿಂಡಿ ಎಲ್ಲಾರಾ ಆಯ್ತಾ ?"

—ಎಂದು

"ಊಹೂ. ಏನೂ ಇಲ್ಲ. ಇನ್ನೂ ಮುಖಾ ಕೂಡಾ ತೊಳಿದಿಲ್ಲ."

"ಹಾಗಿದ್ರೆ ಬಚ್ಚಲುಮನೆಗೆ ಹೋಗಿ ಮುಖ ತೊಳದು ಬನ್ನಿ.... ನಾನೂ ಒಳಗೇನಾರ ಫಲಾರ ಇದೆಯೇನೋ ನೋಡ್ತೀನಿ. ಈ ಮನೆ ತಿಂಡಿ ತಿನ್ನೋಕೆ ಅಭ್ಯಂತರ ಏನೂ ಇಲ್ಲತಾನೇ ಅಣ್ಣಾ...."

"ಇಲ್ಲ, ಇಲ್ಲ....ಅಯ್ಯಂಗಾರ್ ಸ್ವಾಮಿಗಳು ಕಾಲಟ್ಟ ಮೇಲೆ ಈ ಮನೆ ಪವಿತ್ರವಾಗಿ ಹೋಗಿದೆ- ಅವರೇ ಉಂಡು ತಿನ್ನೋ ಮನೇಲಿ ಉಣ್ಣೋಕೆ ನನಗೇನು ಸಂಕೋಚ...."

—ಎಂದು ನಗುತ್ತಾ ಹೇಳದ ಚಂದ್ರಯ್ಯ.

ಅವನ ಮಾತನ್ನು ಕೇಳಿ ನಾಗರತ್ನಳೂ ಮುಸಿನಗೆ ನಗುತ್ತಾ—

"ಈ ಮನೇಲಿರೋದೆಲ್ಲಾ ಸ್ವಾಮಿಗಳ ಪ್ರಸಾದಾನೇ."

—ಎಂದು ಹೇಳಿ ಮುದುಕಿಯನ್ನು ಜೊತೆಮಾಡಿ ಚಂದ್ರಯ್ಯನನ್ನು ಬಚ್ಚಲುಮನೆಗೆ ಮುಖ ತೊಳೆದು ಬರಲುಕಳುಹಿ, ತಾನೇ ಅಡಿಗೆಮನೆಗೆ ಹೋಗಿ ತಮಗೆ ಬೆಳಗಿನ ಉಪಾಹಾರಕ್ಕೆ ಮಾಡಿದ ತಿಂಡಿಯನ್ನು ತಂದಿಟ್ಟುಕೊಂಡು ಚಂದ್ರಯ್ಯ ಬರುವುದನ್ನೇ, ತನ್ನ ಕೋಣೆಯಲ್ಲಿ ಕುಳಿತು ಕಾಯತೊಡಗಿದಳು.

ಮುಖ ಪಕ್ಷ್ಮಿ ಕನವನ್ನು ಪ-ಗಿ-ಬಂದ ಚಂಪ್ರಯ್ಯ, ಉಪಾಹಾರ ವನ್ನು ಮುಗಿಸಿ—

" ನಾನು ಹೇಳೋದು ಒಹಳ ದೊಡ್ಡ ಗುಟ್ಟಿನ ಮಾತು—ನೆನಪಿರಲಿ "

—ಎಂದು ಮಾತಿಗೆ ಪೀಠಿಕೆ ಹಾಕಿದ.

" ನಾನಾಗ್ಲೇ ಹೇಳಲಿಲ್ವೆ. ನನಗಿರೋದು ಒಂದೇ ನಾಲಿಗೆ. ಮಾತು ಕೊಟ್ಟು ಕುತ್ತಿಗೆ ಕೊಯ್ಯೋದು ನಮ್ಮ ಕುಲಕ್ಕೇ ಬಂದಿಲ್ಲ. ಅದ್ರಲ್ಲೂ ಅಮ್ಮನೋರ ಮೇಲೆ ಆಣೆ ಮಾಡಿದ ಮೇಲೆ ಮುಗದೇ ಹೋಯ್ತು. ನಾಲಿಗೆ ಸೀಳಿಸಿ ಉಪ್ಪು ತುಂಬಿದರೂ ನನ್ನ ಬಾಯಿಂದ ಸುದ್ದಿ ಹೊರಡೊಲ್ಲ. "

" ರಾಮಯ್ಯಂಗಾರ್ರಿಗೂ ಈ ವಿಷಯ ತಿಳೀಕೂಡದು."

"ನೀವು ಹೇಳೋದು ಅವರಿಗೆ ದ್ರೋಹ ಬಗೆಯೋ ಮಾತಲ್ಲ ತಾನೇ?"

—ಚುರುಕಾಗಿ ಕೇಳಿದಳು ನಾಗರತ್ನ.

" ಶಿವನಾಣೆಗೂ ಅಲ್ಲ. "

" ಹಾಗಿದ್ರೆ ಸರಿ. ಅದೇನು ಹೇಳಿ ? "

" ಹೋದಸಲ ನಾವಿಲ್ಲಿಗೆ ಬಂದಾಗ ಆದ ಮಾತೆಲ್ಲಾ ನಿನಗೇ ಗೊತ್ತಲ್ಲ. ನಾನು ಹೋಗಿ ನಮ್ಮ ಧಣಿಗಳಿಗೆ ಇಲ್ಲಿ ನಡೆದದ್ದೆಲ್ಲಾ ಹೇಳಿದೆ. ನನ್ನ ಹಾಗೇ ಅವರಿಗೂ ಇದು ಇಷ್ಟು ಖರ್ಚಿನ ಬಾಬು ಅಂತ ತಿಳಿದಿರಲಿಲ್ಲ. ಆದ್ರೂ ಒಂದು ಸಲ ತಲೇಲಿ ಬಂದ ಯೋಚನೇನ, ತಲೆ ಹೋದ್ರೂ ಬಿಡೋರಲ್ಲ ಅವರು. 'ಅಷ್ಟಲ್ಲ, ಇನ್ನೊಂದು ಸಾವಿರ ಖರ್ಚಾದರೂ ಸರಿಯೆ. ಅಂದುಕೊಂಡ ಕೆಲಸ ಆಗಲೇ ಬೇಕು.' ಅಂದರು. ಆದ್ರೆ ಅವರ ಹತ್ತಿರ ಸದ್ಯಕ್ಕೆ ನೀನು ಹೇಳಿದಷ್ಟು ನಗದಾಗಿರಲಿಲ್ಲ...."

" ಆದ್ರೆ ಇದು ಗಡುವು ಹೇಳೋ ವ್ಯವಹಾರವಲ್ಲವಲ್ಲ...."

ಚಂದ್ರಯ್ಯ ತನ್ನ ಮಾತನ್ನು ಮುಗಿಸುವ ಮೊದಲೇ, ಆತ ಏನು ಹೇಳಬಹುದೆಂದು ಊಹಿಸಿ, ಆ ಮಾತನ್ನೇ ಆಡದಂತೆ ಹೇಳಿದಳು ನಾಗರತ್ನ.

" ಗಡವು, ಮಾತು ಆಡೋಕೆ ನಮ್ಮ ಯಜಮಾನರೇನು ಬಿಕನಾಶಿ ಗಳೂಂತ ತಿಳುಕೊಂಡ್ಯಾ ನಾಗರತ್ನ. ಅವರ ಹೆಸರು ಹೇಳಿದೋರಿಗೊ ಅಂಥ ಬುದ್ಧಿ ಬರೊಲ್ಲ. "

ನಾಗರತ್ನಳ ಊಹೆಯನ್ನು ಖಂಡಿಸಿ ಹೇಳಿದ ಚಂದ್ರಯ್ಯ.

" ಹಾಗಿದ್ರೆ...."

" ಎಂಥಾ ಸಾಹುಕಾರರಾದರೂ, ಐದಾರು ಸಾವಿರ ವರಹ ನಗದು ಗಂಟು ಯಾರು ಇಟ್ಕೊಂಡಿರ್‍ತಾರೆ ಹೇಳು. ಅದಕ್ಕೇ ಅವರು ನನ್ನ ಕೈಲಿ ಇಷ್ಟು ಒಡವೆ ಕೊಟ್ಟಿದಾರೆ— " ಪಟ್ಟಣದಲ್ಲಿ ಅದನ್ನ ಮಾರಿ, ಯಾರು ಯಾರಿಗೆ ಏನೇನು ಕೊಡಬೇಕೋ ಎಲ್ಲಾ ಕೊಟ್ಟುಬಿಟ್ಟು ಉಳಿದದ್ದು ತಗೊಂಡು ಬಾ " ಅಂತ. ನನಗೆ ಪಟ್ಟಣದಲ್ಲಿ ವಜ್ರವಡಿ ವ್ಯಾಪಾರಿಗಳು ಯಾರದೂ ಪರಿಚಯವಿಲ್ಲ. ಅಲ್ಲದೆ ನಮ್ಮ ಯಜಮಾನರಿಗೆ ಈ ವಿಷಯ ದಲ್ಲಿ ತಮ್ಮ ಹೆಸರು ಹೊರಗೆ ಬೀಳೋದು ಸುತರಾಂ ಇಷ್ಟವಿಲ್ಲ. ಅದಕ್ಕೇ ನಿನ್ನ ಹತ್ತಿರ ಬಂದೆ. ಅಷ್ಟು ಮಾಡಿಕೊಡೋದು ನಿನ್ನಿಂದ ಆಗುತ್ತೆಯೋ?"

" ವಿಚಾರಿಸಿ ನೋಡ್ತೀನಿ. ಒಡವೆಗಳನ್ನು ತಂದಿದೀರಾ ಅಣ್ಣಾ?"

" ಮಾಲಿಲ್ಲದೆ ಯಾರಾದರೂ ಮಾತಾಡ್ತಾರೆಯೇ ? "

" ಎಲ್ಲಿ ತೋರ್‍ಸ್ರಿ, ಹೆಂಗವೆಯೋ ನಾನು ಒಂದ್ಸಲ ಕಣ್ಣಾರೆ ನೋಡ್ತೀನಿ "

—ಐದಾರು ಸಾವಿರ ವರಹಗಳಷ್ಟು ಬೆಲೆ ಬಾಳುವ ಒಡವೆಗಳನ್ನು ನೋಡುವ ಸ್ತ್ರೀಸಹಜವಾದ ಕುತೂಹಲದಿಂದ ಕೇಳಿದಳು ನಾಗರತ್ನ.

ಅವಳ ಪ್ರಶ್ನೆಗೆ ಉತ್ತರವಾಗಿ ಚಂದ್ರಯ್ಯ ತನ್ನ ಬಗಲುಕಸೆಯ ಅಂಗಿಯೊಳಗೆ ಮುಚ್ಚಿಟ್ಟುಕೊಂಡಿದ್ದ ಒಡವೆಯ ಗಂಟನ್ನು ಹೊರತಗೆದು ಅದನ್ನು ಬಿಚ್ಚಿದ.

ಒಡವೆಯ ಗಂಟಿನಲ್ಲಿ ಹೆಚ್ಚು ಒಡವೆಗಳಿರಲಿಲ್ಲ—ಒಂದು ಅಂಗೈ ಅಗಲದ, ವಜ್ರ, ಕೆಂಪು, ಪಚ್ಚೆ, ಮುತ್ತುಗಳಿಂದ ಕೆತ್ತಲ್ಪಟ್ಟ ಪದಕ, ಸಣ್ಣ ಗಜ್ಜುಗದಷ್ಟು ದಪ್ಪನಾದ ಮೂರು ಮುತ್ತು, ಮುತ್ತೈದೆಯರು ಇಟ್ಟುಕೊಳ್ಳುವ ಕುಂಕುಮದ ಬೊಟ್ಟನಿಟ್ಟು ಅಗಲವಾದ ಒಂದೇ ಒಂದು ವಜ್ರದಹೆಳುಕಿದ್ದ ಒಂದು ಮೂಗುತಿ ಇಷ್ಟೇ ಒಡವೆಗಳೇ ಆ ಗಂಟಿನಲ್ಲಿದ್ದುದು. ಅವೇ ಅಲ್ಲದೆ ಹತ್ತಿಪ್ಪತ್ತು ವಜ್ರ, ಕೆಂಪು, ಪಚ್ಚೆಗಳು ಹತ್ತಿಪ್ಪತ್ತು ಹಳುಕು ಗಳಿದ್ದವು. ಗವಾಕ್ಷದಿಂದ ಇಳಿಬಿದ್ದ ಬೆಳಕಿನ ಕಿರಣದಲ್ಲಿ ಥಳಥಳಿಸಿದ ಆ ರತ್ನಗಳ ಕಾಂತಿಯಿಂದ ನಾಗರತ್ನಳ ಕಣ್ಣು ಕೋರೈಸಿದಂತಾಗಿ—

" ಇವು, ನಿಮ್ಮ ಯಜಮಾನರ ಮನೇದೇನಾ ಈ ಒಡವೆಗಳು ? "

....ಎಂದು ಕೇಳಿದಳು, ಅಚ್ಚರಿ–ಮೆಚ್ಚುಗೆಗಳು ತುಳುಕುವ ಧ್ವನಿಯಲ್ಲಿ.

ನ್ಯೆ, ಇವು ಯಾವ ಲೆಕ್ಕದ್ದು ನಮ್ಮ ಯಜಮಾನರಿಗೆ. ಅಮ್ಮಾವರು ತೊಟ್ಟು ಬೇಜಾರಾಗಿ ಬಿಸಾಕಿದೋವು ಇವು. ಇದರ ಅಪ್ಪನಂಥೋವು ಸಾವಿರ ಇವೆ ಅವರ ಮನೇಲಿ."

—ನಾಗರತ್ನಳ ದೃಷ್ಟಿಯಲ್ಲಿ ಮಾಧವರಾಯನ ತೂಕವನ್ನು ಹೆಚ್ಚಿಸುವ ಸಲುವಾಗಿ ಹೇಳಿದ ಚಂದ್ರಯ್ಯ.

"ಅಂಥೋರ ಕೈ ಹಿಡಿಯೋಕೆ ಆಯೆಮ್ಮ ಎಷ್ಟು ಜನ್ಮದ ಪುಣ್ಯ ಮಾಡಿದ್ದಳೋ ಏನೋ! ಎಲ್ಲಾದಕ್ಕೂ ಪಡಕೊಂಡು ಬರಬೇಕು... "

—ಎಂದು ಅತೃಪ್ತ ಬಯಕೆಯ ನಿಟ್ಟುಸಿರಿಟ್ಟು—

"ಆಯ್ತು, ಇವತ್ತೇ ವಿಚಾರಿಸಿ, ಸಂಜೆಗೆ ನಿಮಗೆ ಏನಾಯ್ತೂಂತ ಹೇಳ್ತೀನಿ. ಯಾವುದಕ್ಕೂ ನಿಮಗೆಲ್ಲಿಗೆ ಹೇಳಿಕಳಿಸಲಿ ?"

"ನೀನೆಲ್ಲಿಗೂ ಹೇಳಿ ಕಳಿಸಬೇಡ. ನೀನು ಇಷ್ಟು ಹೊತ್ತಿಗೆ ಬಾಂತ ಹೇಳಿದರೆ, ನಾನೇ ಇಲ್ಲಿಗೆ ಬರ್ತೀನಿ"

"ಹಾಗಂದ್ರೆ ನೀವೀಗ ರಾಮಯ್ಯಂಗಾರ್ರ ಮನೆಗೆ ಹೋಗೋಲ್ವಾ ?"

"ಊಹೂ. ಈ ಕೆಲಸವೆಲ್ಲಾ ಆದ ಮೇಲೆ, ಅವರನ್ನ ಹೋಗಿ ನೋಡ್ತೀನಿ...."

"ಮತ್ತೆ, ಅಲ್ಲೀವರೆಗೆ...."

"ಹೆಂಗೂ ಇಷ್ಟು ದೂರ ಬಂದಿದೀನಿ. ಮತ್ತೆ ಇತ್ಲಾಕಡೆ ಬರೋದು ಯಾವಾಗ್ಲೋ ಏನೋ. ಹಂಗೇ ಕರೀಘಟ್ಟಕ್ಕೆ ಹೋಗಿ, ದೇವಂಗೆ ಹಣ್ಣು ಕಾಯಿ ಮಾಡಿಸಿಕೊಂಡು, ನೀನು ಹೇಳಿದ ಹೊತ್ತಿಗೆ ಇಲ್ಲಿಗೆ ಬರ್ತೀನಿ."

"ಅದೂ ಒಳ್ಳೇದೇ, ಹಂಗೇ ಮಾಡಿ ಅಣ್ಣಾ. ದೀಪ ಹಚ್ಚೋ ಹೊತ್ತಿಗೆ ನೀವಿಲ್ಲಿಗೆ ಬಂದ್ರೆ, ಅಷ್ಟುಹೊತ್ತಿಗೆ ನಾನೆಲ್ಲಾ ಮಾತಾಡಿಟ್ಟಿರ್ತೀನಿ"

"ಅಷ್ಟು ಹೊತ್ತಿಗೆ ಬಂದ್ರೆ, ಅಯ್ಯಂಗಾರ್ ಸ್ವಾಮಿಗಳು ಇಲ್ಲಿಗೆ ಬಂದಿರ್ತಾರೋ ಏನೋ....

"ಅಷ್ಟು ಹುಷಾರು ನಂಗಿಲ್ವಾ....ಮೈಲಿ ಚೆಂದಾಗಿಲ್ಲಾಂತ ಹೇಳಿ ಕಳಿಸುತ್ತೇನೆ."

—ಎಂದಳು ನಾಗರತ್ನ.

"ಹಾಗಿದ್ರೆ ಸರಿ, ನಾನು ಬರ್ತೀನಿ. ಆದ್ರೆ ಒಡವೆ ವ್ಯಾಪಾರದಲ್ಲಿ ಚಿನಿವಾರ ಶೆಟ್ಟರು ಮೋಸ ಮಾಡಿಯಾರು ಹುಷಾರಾಗಿರು."

—ಎಂದು ಆಕೆಯನ್ನು ಎಚ್ಚರಿಸಿದ ಚಂದ್ರಯ್ಯ.

"ಅವೆಲ್ಲಾ ನನಗೆ ಹೇಳಿಕೊಡಬೇಕೇ ಅಣ್ಣಾ...."

"ನೀನು ಹುಷಾರಾಗಿದ್ರೆ ಸರಿ. ಅಂತೂ ನಾನು ಹೇಳಿದ್ದು ಮರೀ ಬೇಡ. ಇದು ಯಾರದು ಏನು ಅಂತ ಯಾರಿಗೂ ಗೊತ್ತಾಗಬಾರದು."

—ಎಂದು ಮತ್ತೊಮ್ಮೆ ನಾಗರತ್ನಳನ್ನು ಎಚ್ಚರಿಸಿ, ಬಿಡಿ ಹರಳು ಗಳನ್ನೂ, ಪದಕ, ಮೂಗುತಿಯಲ್ಲಿದ್ದ ಹರಳುಗಳನ್ನೂ ಎಣಿಸಿ,ಲೆಕ್ಕ ಹಾಕಿ ಕೊಂಡು ನಾಗರತ್ನಳ ಮನೆಯಿಂದ ಹೊರಬಿದ್ದ ಚಂದ್ರಯ್ಯ.

ಚಂದ್ರಯ್ಯ ಅಲ್ಲಿಂದ ಹೋದ ಬಳಿಕ,ನಾಗರತ್ನ ಒಡವೆಯ ಗಂಟನ್ನು ಬಿಚ್ಚಿ, ಲಕಲಕಿಸುವ ಒಡವೆಗಳನ್ನು ಮತ್ತೊಮ್ಮೆ ನೋಡಿದಳು.

ಬಿಸಿಲ ಬೆಳಕಿನಲ್ಲಿ ಆ ಹರಳುಗಳು ಬಣ್ಣ ಬಣ್ಣವಾಗಿ ಉರಿದಂತೆಯೇ ಅವಳ ಮನದಲ್ಲಿಯೂ ಹೊಸ ಬಯಕೆಯೊಂದು ಹೊತ್ತಿ ಉರಿಯಿತು.

ನಾಗರತ್ನಳಿಗೆ ಹೇಳಿದಂತಯೇ ಚಂದ್ರಯ್ಯ, ಅವಳ ಮನೆಯಿಂದ ಹೊರಟವನು, ಕಾವೇರಿ ಸೇತುವೆಯನ್ನು ದಾಟಿಕೊಂಡು, ಶ್ರೀನಿವಾಸಪುರ ಅಗ್ರಹಾರದ ಮೂಲಕ ಕರೀಘಟ್ಟವನ್ನು ತಲುಪಿ, ಬೆಟ್ಟದ ಬುಡದಲ್ಲೇ ಲೋಕಪಾವನಿ ನದಿಯಲ್ಲಿ ಸ್ನಾನಮಾಡಿ, ಬೆಟ್ಟವನ್ನು ಹತ್ತಿ, ವೆಂಕಟ ರಮಣಸ್ವಾಮಿಗೆ ಹಣ್ಣು ಕಾಯಿ ಮಾಡಿಸಿ, ನೈವೇದ್ಯದ ಕಾಲದವರೆಗೂ ದೇವಾಲಯದಲ್ಲೇ ಹೊತ್ತು ಕಳೆದು, ಆ ಕಾಲದಲ್ಲಿ ಅರ್ಚಕರು ಹಂಚಿದ ಪೊಂಗಲು, ದ್ಯೋದಕಗಳನ್ನು ತಿಂದು, ದೇವಾಲಯದ ಪ್ರಾಂಗಣದಲ್ಲಿದ್ದ ಸಂಪಿಗೆಯ ಮರದಡಿಯಲ್ಲಿ, ಮೈಮೇಲಿದ್ದ ಉತ್ತರೀಯವನ್ನೇ ಹಾಸಿ ಕೊಂಡು ಮಲಗಿದ.

ಅತ್ತ ನಾಗರತ್ನ, ಚಂದ್ರಯ್ಯ ಮನೆಬಿಟ್ಟು ಹೋಗುತ್ತಿದ್ದ ಹಾಗೇ, ಮನೆಯ ಊಳಿಗದ ಕೆಲಸ ಮಾಡುತ್ತಿದ್ದ ಮುದುಕಿಯನ್ನು ತನ್ನ ಪರಿಚಯದ ಜವಾಹಿರಿ ವ್ಯಾಪಾರಸ್ಥರಾದ ನಾರಾಯಣಶೆಟ್ಟರ ಬಳಿಗೆ ಕಳುಹಿಸಿ, ಅವರನ್ನು ಮನೆಗೆ ಕರೆಸಿಕೊಂಡು, ಚಂದ್ರಯ್ಯ ತನ್ನ ವಶಕ್ಕೆ ಒಪ್ಪಿಸಿದ್ದ ಒಡವೆಗಳನ್ನೂ, ಬಿಡಿ ಹರಳುಗಳನ್ನೂ ತೋರಿಸಿ—

"ಇದಕ್ಕೆ ಬೆಲೆ ಕಟ್ಟಿಕೊಡ್ತೀರಾ?"
—ಎಂದು ಕೇಳಿದಳು.

ಶೆಟ್ಟರು ಆ ಒಡವೆಗಳನ್ನು ಪರೀಕ್ಷೆ ಮಾಡಿ ನೋಡಿ—

"ಇವೆಲ್ಲಿಯ ಒಡವೆಗಳು ನಾಗರತ್ನ? ಅರಮನೇಲಿ ಯಾರದೋ ಸ್ನೇಹ ಮಾಡಿರೋ ಹಾಗಿದೆಯಲ್ಲಾ........"

—ಎಂದು ಕೇಳಿದರು.

"ಏಕೆ? ಅದ್ಯಾಕೆ ಹಾಗೆ ಕೇಳ್ತೀರಿ?"

"ಇಂಥ ಪದಕ, ಮೂಗುತಿ ಅರಮನೇಲಿ ಅಲ್ಲದೆ ಬೇರೆ ಕಡೆ ಇರೋಕೆ ಸಾಧ್ಯವೇ? ಇವು ಇಲ್ಲ ಅರಮನೇವು ಇರಬೇಕು, ಇಲ್ಲ ಯಾವುದೋ ದೇವಸ್ಥಾನದ್ದಿರಬೇಕು. ಆ ಎರಡು ಸ್ಥಳ ಬಿಟ್ಟು ಬೇರೆ ಕಡೇಲಿ ಇರೋ ಅಂಥ ಒಡವೆಗಳಲ್ಲ ಇವು. ದೇವಸ್ಥಾನದ ಸ್ವತ್ತು ನಿನ್ನ ಮನೇವರೆಗೂ ಬರೋಕೆ ಸಾಧ್ಯವಿಲ್ಲ. ಅದಕ್ಕೇ ಅರಮನೆಯವು ಇರಬಹುದು ಅಂತ ಊಹಿಸಿ ಕೇಳಿದೆ."

"ಆಯ್ತು—ಅಲ್ಲೀದೇ ಅಂದುಕೊಳ್ಳಿ."

"ಹಾಗಾದ್ರೆ ನಿನ್ನ ಮಗಳು ಸೀತಾಸಾನೀದು ಗೆಜ್ಜೆಪೂಜೆ ಆಯ್ತೇನು? ನಮಗ್ಯಾರಿಗೂ ಆ ವಿಷಯ ಗೊತ್ತೇ ಆಗಲಿಲ್ಲ."

"ಅದೆಲ್ಲಾ ಆಮೇಲೆ ಹೇಳ್ತೀನಿ....ಈಗ ಇದರ ಬೆಲೆ ಎಷ್ಟಾಗಬಹುದೂಂತ ಹೇಳಿ."

"ಅಂದ್ರೆ ಇವನ್ನ ಮಾರಬೇಕೂಂತ ಮಾಡಿದೀಯಾ?"

"ಮಾರಿದ್ರೆ ಎಷ್ಟು ಸಿಗಬಹುದು ಸರಿಯಾಗಿ ಹೇಳಿ. ಈ ವಿಷಯದಲ್ಲಿ ಮಾತ್ರ ನಿಮ್ಮ ಕಸಬಿನ ವಿದ್ಯೆ ಉಪಯೋಗಿಸಬೇಡಿ."

"ಬಿಡಿ ಪದಕಗಳ ವಿಷಯ ಹಾಗಿರಲಿ— ಈ ಪದಕದ ಬೆಲೆ ಕಡಿಮೆ ಅಂದ್ರೂ ಮೂರು-ನಾಲ್ಕುಸಾವಿರ ವರಹ ಆಗುತ್ತೆ."

"ಮೂಗುತಿಗೆ?"

"ಅದಕ್ಕೆ ಬೆಲೆ ಕಟ್ಟುವ ಯೋಗ್ಯತೆ ನನಗಿಲ್ಲ. ಅದರಲ್ಲಿರೋ ಮುತ್ತುಗಳಿಗೆ ಏನು ಬೆಲೆ ಕೊಟ್ಟರೂ ಕೊಡಬಹುದು—ಅದು ಕೊಳ್ಳೋರ ಖುಷಿ. ಈ ಬಣ್ಣ, ಈ ಗಾತ್ರ ಇರೋ ಮುತ್ತುಗಳು ಕೊಳ್ಳೋಕೆ ಸಿಗೋದಿರಲಿ, ನೋಡೋಕೆ ಸಿಗೋದೂ ಪೂರ್ವಜನ್ಮದ ಪುಣ್ಯ. ಅದರಿಂದ ಅದರ ಬೆಲೆ

ಕಟ್ಟೋದು ನನ್ನಿಂದ ಆಗದ ಮಾತು. ಅಷ್ಟು ನೀನು ಬೇಕೊಂದ್ರೆ ಪಟ್ಟಣಿ ಶೆಟ್ಟರ ಹತ್ತಿರ ತಗೊಂಡು ಹೋಗಿ ಬೆಲೆ ಕಟ್ಟಿಸಿಕೊಂಡು ಬರ್‍ತೀನಿ."

"ಅದೇನೂ ಬೇಡ, ಬಿಡಿ. ಹೋಗಲಿ—ಈ ಬಿಡಿ ಹರಳುಗಳ ಬೆಲೆ ಎಷ್ಟಾಗಬಹುದು ?"

"ನ್ಯಾಯವಾದ ಬೆಲೆ ಮೂರು ಸಾವಿರ. ಕೊಡೋರಿಗೆ ಬಹಳ ಆತುರ ಇದ್ದರೆ ಎರಡು ಸಾವಿರ."

"ಹಾಗಿದ್ದರೆ ನೀವು ನನಗಾಗಿ ಒಂದು ಕೆಲಸ ಮಾಡಬೇಕಲ್ಲ...."

"ಏನು ?"

"ಈ ಒಡವೆಗಳು ನಮಗೆ ಬಹಳ ಬೇಕಾದ ಅರಸಿನವರು ಒಬ್ಬರದು. ಅವರಿಗೀಗ ಬಹಳ ಜರೂರಿಯಾಗಿ ಆರುಸಾವಿರ ವರಹ ಬೇಕಾಗಿದೆ. ಅದಕ್ಕೆ ಇದನ್ನು ನನ್ನ ಕೈಗೆ ಕೊಟ್ಟಿದ್ದಾರೆ. ಮೂಗುತೀನ ಅವರಿಗೇ ಹಿಂದಕ್ಕೆ ಕೊಟ್ಟುಬಿಡ್ತೀನಿ. ಉಳಿದದ್ದನ್ನು ತಗೊಂಡು, ನೀವೇ ಆರುಸಾವಿರ ಕೊಡ್ತೀರಾ ?"

—ಎಂದು ಕೇಳಿದಳು ನಾಗರತ್ನ.

"ಅರಸಿನವರೇ, ಯಾರು ?"

"ಯಾರೂಂತ ಹೇಳೋ ಹಾಗಿದ್ರೆ ನನ್ನ ಕೈಲಿ ಯಾಕೆ ಮಾರಿಸ್ತಾ ಇದ್ರು, ಈ ವ್ಯವಹಾರ ಯಾರಿಗೂ ತಿಳೀಬಾರದೂಂತ ನನಗೆ ಹೇಳಿದರು. ಅವರಿಗೂ, ನನಗೂ ತಲೆತಲಾಂತರದ ವಿಶ್ವಾಸ. ಅದಕ್ಕೆ ಕಟ್ಟಿಬಿಡ್ದು ಆಗಲಿ ಅಂದೆ. ನೀವೂ ನನಗೆ ಅಷ್ಟೇ ಬೇಕಾದವರು. ನೀವೇ ಇದನ್ನು ಕೊಂಡರೆ, ನನಗೂ ದೊಡ್ಡ ಉಪಕಾರ ಮಾಡಿದ ಹಾಗಾಗುತ್ತೆ."

"ಆರುಸಾವಿರ ವರಹ ಅಂದರೆ ಭಾಳ ದೊಡ್ಡ ರಕಮು. ಅದು ಯಾವಾಗ ಬೇಕು ?"

"ಇವತ್ತು ಸಂಜೇ ಒಳಗೆ ಬೇಕು ?"

"ಅಷ್ಟು ಆತುರಾನೇ ?"

"ನೀಲಾಗೆ ಗೆಜ್ಜೆಪೂಜೆ ಶಾಸ್ತ್ರ ಎಷ್ಟು ಬೇಗ ಮುಗಿದು ಹೋದರೆ, ಅಷ್ಟು ನಿಮಗೂ ಒಳ್ಳೇದಲ್ವೇ...."

"ನಿಜ."

"ಹಾಗಿದ್ದರೆ ಈ ಕೆಲಸ ಮಾಡಿಕೊಡಿ."

"ನನ್ನ ಹತ್ತಿರವೂ ಅಷ್ಟು ಹಣ ಇಲ್ಲ. ಎರಡು ಮೂರು ಕಡೆ ಜೋಡಿಸಬೇಕು. ಹೇಗೋ—ನಿನಗೋಸ್ಕರ ಏನು ಕಷ್ಟವಾದ್ರೂ ಅನುಭವಿಸುತ್ತೇನೆ. ಅದ್ರೆ ಸಮಯದಲ್ಲಿ ನನ್ನ ಮಾತ್ರ ಮರೀಬೇಡ."

"ಹಾಗೆ ಮರೆಯೋ ಹಾಗಿದ್ರೆ ನಿಮಗೇ ಯಾಕೆ ಹೇಳಿ ಕಳಿಸ್ತಾ ಇದ್ದೆ...."

"ಹಾಗಿದ್ರೆ ಸರಿ. ನಂಬಿಕೆ ಮಾತ್ರ ಕೆಡಿಸಿಕೋ ಬೇಡ. ಮಧ್ಯಾಹ್ನದ ಗುಂಡು ಹೊಡೆಯೋ ಹೊತ್ತಿಗೇ ಹಣ ನಿನಗೆ ತಲುಪಿಸುತ್ತೇನೆ."

—ಎಂದು ಹೇಳಿ, ನಾಗರತ್ನ ಕೊಟ್ಟ ಪದಕ, ಬಿಡಿ ಹರಳುಗಳನ್ನು ತೆಗೆದುಕೊಂಡು ಶೆಟ್ಟರು ಅವಳ ಮನೆಯನ್ನು ಬಿಟ್ಟರು.

ಶೆಟ್ಟರು ಅಲ್ಲಿಂದ ಹೋಗುತ್ತಿದ್ದ ಹಾಗೇ ಮೂಗುತಿ ನಾಗರತ್ನಳ ಪೆಠಾರಿಯನ್ನು ಸೇರಿ, ಚಂದ್ರಯ್ಯ—

'ಸ್ಸೈ, ಇನ್ನೇ? ಇವು ಯಾವ ಲೆಕ್ಕ ನಮ್ಮ ಯಜಮಾನರಿಗೆ. ಅಮ್ಮಾವರು ಕೊಟ್ಟು ಬೇಜಾರಾಗಿ ಬಿಸಾಕಿರೋವು ಇವು. ಇದರ ಅಪ್ಪನಂಥೋವು ಸಾವಿರ ಇವೆ ಅವರ ಮನೇಲಿ'

—ಎಂದ ಮಾತು ಅವಳ ಮಿದುಳಿನಲ್ಲಿ ನೂರಾರು ಭವ್ಯ ಸ್ವಪ್ನ ಸೌಧಗಳನ್ನು ನಿರ್ಮಿಸಿ, ಎಷ್ಟು ಹೊತ್ತಿಗೆ ಸಂಜೆಯಾದೀತೋ, ಎಷ್ಟು ಹೊತ್ತಿಗೆ ಚಂದ್ರಯ್ಯ ಮಾತು ಮುಗಿಸಲು ಬಂದಾನೋ ಎಂದು ಕಾಯ ತೊಡಗಿದಳು.

ಅವಳಿಗೆ ಚಂದ್ರಯ್ಯನನ್ನು ನೋಡಲು ಎಷ್ಟು ಆತುರವಿತ್ತೋ, ಚಂದ್ರಯ್ಯನಿಗೂ ಅವಳನ್ನು ನೋಡಲು ಅಷ್ಟೇ ಆತುರವಿತ್ತು.

ಕರೀಘಟ್ಟದಲ್ಲಿ ವೆಂಕಟರಮಣಸ್ವಾಮಿಯ ಸೇವೆ, ಊಟ, ನಿದ್ರೆಗಳನ್ನು ಮುಗಿಸಿದ ಚಂದ್ರಯ್ಯ, ನಾಗರತ್ನ ಹೇಳಿದ ಹಾಗೆ ದೀಪ ಹೊತ್ತಿಸುವ ಹೊತ್ತಿಗೆ ಸರಿಯಾಗಿ ಅವಳ ಮನೆ ಬಾಗಿಲಲ್ಲಿ ಹಾಜರಾದ.

ತಾನು ಬಂದಾಗ, ನಾಗರತ್ನ ಸ್ವಾಗತಿಸಿದ ಉತ್ಸಾಹಪೂರ್ಣ ನಗುಮೊಗದ ರೀತಿಯಿಂದಲೇ ಚಂದ್ರಯ್ಯನಿಗೆ ತನ್ನ ಕೆಲಸ ಆಗಿದೆ ಎಂಬುದು ಅರಿವಾಯಿತು. ಆದರೂ ಆ ಮಾತನ್ನು ಅವಳ ಬಾಯಿಂದಲೇ ಕೇಳುವ ಸಲುವಾಗಿ—

"ಕೆಲಸ ಏನಾಯಿತು ?"

—ಎಂದು ಕೇಳಿದ.

" ನಾನು ಕೈಯಿಟ್ಟ ಮೇಲೆ ಕೆಲಸ ಆಗದೆ ಉಳಿಯೋದುಂಟಾ ? ಆದರೂ ಭೋಶ್ರಮ ಆಯಿತು—ಶೆಟ್ಟರನ್ನು ಒಪ್ಪಿಸಲಿಕ್ಕೆ. ರಾಮ ರಾಮ ! ಏನೆಲ್ಲಾ ಪ್ರಶ್ನೆ ಕೇಳ್ತಾರೆ ; ಎಷ್ಟೆಲ್ಲಾ ಚರ್ಚೆ ಮಾಡ್ತಾರೆ ಈ ಜನ—ಸಣ್ಣ ವಸ್ತು ತಕೊಂಡು ಹಣ ಕೊಡೋಕೆ. ರಾಮಾಯಣ, ಮಹಾಭಾರತ ಎಲ್ಲಾ ಆಗಿ ಕೊನೆಗೆ ವ್ಯಾಪಾರ ಕುದುರಿಸಿದೆ. "

—ವ್ಯಾಪಾರದಿಂದ ಅತ್ಯಂತ ದಣಿದವಳಂತೆ ನಿಟ್ಟುಸಿರಿಟ್ಟು ಹೇಳಿದಳು ನಾಗರತ್ನ.

" ಹಾಗೆಲ್ಲಾ ಆಗುತ್ತೇಂತ ನನಗೂ ಗೊತ್ತು—ಹೋಗಲಿ, ಈಗ ಅದರಿಂದ ಎಷ್ಟು ಹುಟ್ಟಿತು, ಅದು ಹೇಳು."

" ನೀವು ಎಷ್ಟು ಬರಬಹುದೂಂತ ಇದ್ರಿ...."

" ಕೊನೇಪಕ್ಷ ನಾಲ್ಕೈದು ಸಾವಿರ ವರಹ...."

" ನಾನು ಆರು ಸಾವಿರಕ್ಕೆ ಇತ್ಯರ್ಥ ಮಾಡಿಸಿ ಹಣ ತರಿಸಿಟ್ಟಿದೀನಿ. ನನ್ನ ನಂಬಿದ್ದಕ್ಕೆ ನಿಮಗೇನೂ ಮೋಸ ಆಗಲಿಲ್ಲವಲ್ಲ....ಏನಣ್ಣಾ ? "

" ನಾವು ಅಂದುಕೊಂಡದ್ದಕ್ಕಿಂತಲೂ ಹೆಚ್ಚಿಗೆ ಹಣಕ್ಕೆ ನೀನು ವ್ಯಾಪಾರ ಕುದುರಿಸಿದ್ದಕ್ಕೆ ಅನ್ಯಾಯ ಆಯ್ತು ಅಂತ ನಾ ಯಾವ ಬಾಯಲ್ಲಿ ಹೇಳಲಿ. ನಿನ್ನಿಂದ ಭಾಳ ಉಪಕಾರ ಆಯ್ತು. ಈ ಕೆಲಸ ಮಾಡಿಕೊಟ್ಟಿದ್ದಕ್ಕೆ ನಿನಗೇನು ಪ್ರತಿಫಲ ಕೊಡಬೇಕು ಹೇಳು ?"

" ರಾಮ ರಾಮ ! ನಾನೇನು ಮನುಷ್ಯಳೂಂತ ತಿಳಕೊಂಡ್ರೋ ಮರಾಂತ ತಿಳುಕೊಂಡ್ರೋ— ಎರಡು ಮಾತಾಡಿದ್ದಕ್ಕೆಲ್ಲಾ ಕೂಲಿ ಕೊಡು ಅಂತ ಕೇಳೋಕೆ. ಇದೆಲ್ಲಾ ದುಡ್ಡಿಗೆ ಮಾಡೋ ಕೆಲಸಾನೇ ? ನೀವೂ ವಿಶ್ವಾಸವಾಗಿ ಇದೊಂದು ಕೆಲಸ ಮಾಡಿಕೊಡು ನಾಗರತ್ನ ಅಂದಿರಿ. ಅದೇ ವಿಶ್ವಾಸದಲ್ಲಿ ನಾನೂ ನನ್ನ ಕೈಲಾದ್ದು ಮಾಡಿದೆ, ಆಯ್ತು. ನನಗೆ ಇದಕ್ಕೆಲ್ಲಾ ಪ್ರತಿಫಲ ಗಿತಿಫಲ ಬೇಡ. ನಾನು ವಿಶ್ವಾಸಕ್ಕೆ ಅರ್ಹಳು ಅಂತ ನಿಮಗೆ ನಂಬಿಕೆಯಾಗಿದ್ರೆ ನಿಮ್ಮ ಧಣಿಗಳ ಮುಂದೆ ನನ್ನ ವಿಷಯದಲ್ಲಿ ಒಂದು ಮಾತು ಹೇಳಿ. ಅವರು ಸಂತೋಷಪಟ್ಟು, ತಗೋ ಅಂತ ಒಂದು ಸೀರೆ, ಖಣ ಕೊಟ್ಟರೆ ಅದೇ ಭಾಗ್ಯಾಂತ ಉಟ್ಕೋತೀನಿ ; ಅಷ್ಟೆ."

—ಎಂದಳು ನಾಗರತ್ನ, ಚಂದ್ರಯ್ಯನ ಪ್ರತಿಸಲದ ಮಾತು ಕೇಳಿ ಬೇಸರವಾದಂತೆ.

ಮುತ್ತಿನ ಮೂಗುತಿ, ನಾಗರತ್ನಳ ಪೆಠಾರಿಯಲ್ಲಿ ಗರ್ಭಗತವಾದ ವಿಷಯವನ್ನು ಅರಿಯದ ಚಂದ್ರಯ್ಯನಿಗೆ ನಾಗರತ್ನಳ ಮಾತು ಕೇಳಿ, ಅವಳ ಬಗ್ಗೆ ಅಪಾರ ವಿಶ್ವಾಸ ಮೂಡಿ—

“ನಿಮ್ಮ ಜಾತೀಲಿ ನಿನ್ನಂಥಾ ಹೆಂಗಸರು ಇರ್ತಾರೇಂತ ಯಾರಾದ್ರೂ ಆಣೆ-ಪ್ರಮಾಣ ಮಾಡಿ ಹೇಳಿದ್ರೂ ನಾನು ನಂಬ್ತಿರಲಿಲ್ಲ ನಾಗರತ್ನ. ನಿನ್ನಂಥವಳು ಭಾಳ ಅಪರೂಪ. ದೇವರಾಣೆಗೂ, ನಿನ್ನ ವಿಷಯ, ನೀನು ಮಾಡಿದ ಸಹಾಯ, ಎಲ್ಲಾ ಹೇಳಿ ನಮ್ಮ ಧಣಿಗಳಿಂದ ನಿನಗೆ ತಕ್ಕ ಉಡುಗೊರೆ ಕೊಡಿಸ್ತೀನಿ. ಅವರೂ ನಿನ್ನ ಉಪಕಾರ ಮರಿಯೊಲ್ಲ.”

—ಎಂದು ನಾಗರತ್ನಳನ್ನು ಬಾಯಿತುಂಬ ಹೊಗಳಿ ಹೇಳಿದ.

“ನಾನು ಕೇಳೋದೂ ಅಷ್ಟೆ—ಅವರು ನನ್ನನ್ನ ಮರೀದಿದ್ರೆ ಸಾಕು.”

—ಎಂದು ಆ ಮಾತನ್ನು ಅಲ್ಲಿಗೆ ಮುಗಿಸಿ—

“ಹಣ ಎಣಿಸಿಕೊಳ್ಳೋದಾಗಿದ್ರೆ ಎಣಿಸಿಕೊಂಡು ಬಿಡು ಅಣ್ಣ....”

—ಎಂದು ಶೆಟ್ಟರು ಕಳಿಸಿಕೊಟ್ಟಿದ್ದ ಚೀಲಗಳನ್ನು, ಪೆಠಾರಿಯಿಂದ ಒಂದೊಂದಾಗಿ ಎತ್ತಿ ಚಂದ್ರಯ್ಯನ ಮುಂದಿಟ್ಟಳು.

ನಾಗರತ್ನ ತನ್ನ ಮುಂದಿಟ್ಟ, ಒಂದೊಂದರಲ್ಲೂ ಐನೂರು ವರಹ ಇದ್ದ, ಹನ್ನೆರಡು ಚೀಲಗಳನ್ನು ನೋಡಿದ ಚಂದ್ರಯ್ಯ....

“ಎಣಿಸೋದು ಏನೂ ಬೇಡ. ಇವೆಲ್ಲಾ ಇಲ್ಲೇ ಇರಲಿ. ನಾನು ನಾಳೆ ಬೆಳಿಗ್ಗೆ ಅಯ್ಯಂಗಾರ್ ಸ್ವಾಮಿಗಳ ಜೊತೇಲಿ ಬಂದು, ಮಾತು ಮುಗಿಸಿ, ನಾವಿದ್ದು ಇಲ್ಲಿಂದ ಹೋಗುವಾಗ, ನಿನಗೆ ಕೊಡೋದು ಕೊಟ್ಟು, ಉಳಿದದ್ದು ತಗೊಂಡು ಹೋಗ್ತೀನಿ.”

—ಎಂದು ಹೇಳಿದ.

“ಹಾಗಾದ್ರೆ ಇವು ನನ್ನ ಹತ್ರಾನೇ ಇರಲಿ ಅಂತೀರಾ....”

“ಇರಲಿ.”

“ಆಯ್ತು—ಹಂಗೇ ಆಗ್ಲಿ. ನಿಮಗೆ ಹೆಂಗ ಬೇಕೋ ಹಂಗೆ ಮಾಡಿ.”

ಅಲ್ಲಿಗೆ ಅಂದು ತಾನು ಆಡಬೇಕಾದ ಮಾತು, ಮಾಡಬೇಕಾದ ಕೆಲಸ ಎಲ್ಲವೂ ಮುಗಿದಂತಾಗಿ, ಚಂದ್ರಯ್ಯ—

"ನಾನಿನ್ನು ಬರ್ತೀನಿ ನಾಗರತ್ನ, ನಾಳೆ ಬೆಳಿಗ್ಗೆ ಬಂದು ನಿನ್ನ ನೋಡ್ತೀನಿ"—ಎಂದ.

"ರಾತ್ರಿ ಎಲ್ಲಿರ್ತೀರಾ ?"

"ಎಲ್ಲೇನು ಬಂತು—ಊರಾಗೇನು ಛತ್ರಗಳಿಲ್ಲವೇ ? ಎಲ್ಲಾದರೂ ರಾತ್ರಿ ಕಳೆದು, ಬೆಳಿಗ್ಗೆ ಹೋಗಿ ಅಯ್ಯಂಗಾರ್ ಸ್ವಾಮಿಗಳನ್ನು ನೋಡ್ತೀನಿ."

"ಹಂಗಾಗೋಕಿಲ್ಲ...."

—ಖಚಿತವಾದ ಧ್ವನಿಯಲ್ಲಿ ಹೇಳಿದಳು ನಾಗರತ್ನ

"ಹಾಗಂದ್ರೇನು ನಾಗರತ್ನ...."

....ಅವಳ ಮಾತಿನ ಅರ್ಥ ತಿಳಿಯದೆ ಕೇಳಿದ ಚಂದ್ರಯ್ಯ.

"ನಮಗೂ ನಿಮಗೂ ಇಷ್ಟು ವಿಶ್ವಾಸ ಬೆಳೆದ ಮೇಲೂ, ನಿಮ್ಮನ್ನು ನಾನು ಗುಡಿಯಲ್ಲಿ, ಛತ್ರದ ನಿದ್ರೆಗೆ ಕಳಿಸಿದರೆ, ನೋಡಿದೋರು ನನ್ನ ಸೋಟೆ ತಿವಿಯೋಕಿಲ್ವೆ ? ಅಷ್ಟಕ್ಕೂ ಈಗ ಛತ್ರಕ್ಕೆ ಹೋಗೋ ಅಂಥಾ ದೇನು ಬಂದಿದೆ ? ನನ್ನ ಮನೆ ಏನು ಹರಿದು ಜೋಳಿಗೆ ಆಗಿದೆಯೋ ? ಅಥವಾ ನಿಮಗೆ ಒಪ್ಪತ್ತು ಅನ್ನ ಇಡೋಅಷ್ಟು ಯೋಗ್ಯತೆ ದೇವರು ನನಗೆ ಕೊಟ್ಟಿಲ್ವೆ ? ಅದೆಲ್ಲಾ ಆಗೋಕಿಲ್ಲಾ—ಇವತ್ತು ರಾತ್ರಿ ಏನಿದ್ರೂ ನೀವು ಇಲ್ಲೇ ಇರಬೇಕು. ನಾಳೆ ಬೆಳಕು ಹರಿದ ಮೇಲೆ ನಿಮಗೆ ಹಂಗೆ ಬೇಕೋ ಹಂಗೆ ಮಾಡಿಕೊಳ್ಳಿ."

—ಎಲ್ಲ ವಿಷಯದಲ್ಲೂ ತಾನಾಗಲೇ ಒಂದು ನಿರ್ಧಾರಕ್ಕೆ ಬಂದವ ಳಂತೆ ಹೇಳಿದಳು ನಾಗರತ್ನ.

ನಾಗರತ್ನಳ ಆಹ್ವಾನ ಚಂದ್ರಯ್ಯನಿಗೂ ಅಪ್ರಿಯವಾಗಿರಲಿಲ್ಲ. ಆದರೂ ಕೂಡಲೇ ಅದನ್ನು ಅಂಗೀಕರಿಸಲಾಗದೆ—

"ನಿನಗಿದೆಲ್ಲಾ ತೊಂದ್ರೆ ಯಾಕೆ ? ಈಗ ಕೊಟ್ಟಿರೊ ಅಷ್ಟೇ ತೊಂದ್ರೆ ಸಾಲದೋ...."

—ಎಂದು ಗೊಣಗಿದ.

"ಹಂಗಂತ ಅಂದು ನನಗೆ ಇನ್ನೊಂದ್ಸಲ ಅಪಮಾನ ಮಾಡಬೇಡ ಕಣಣ್ಣಾ. ನಿನಗೆ ಇದು ನಿನ್ನದೇ ಮನೆ ಅನ್ನೋ ವಿಶ್ವಾಸ ಇದ್ರೆ ಇರು. ಆ ವಿಶ್ವಾಸ ಇಲ್ಲಾಂದ್ರೆ ಇರಬೇಡ. ಅಷ್ಟೇ ಹೊರತು, ತೊಂದ್ರೆ ಗಿಂದ್ರೆ

ಅಂತ ಅನ್ನಬೇಡ. ನನ್ನ ಸ್ವಭಾವ ನೀನು ಕಾಣೆ ಕಣಣ್ಣ. ಒಂದು ಹೊತ್ತಿನ ಸ್ನೇಹ, ಒಪ್ಪತ್ತಿನ ವಿಶ್ವಾಸ ಅಂದ್ರೆ ನಂಗೆ ಆಗೊಲ್ಲ. ಒಂದ್ಸಲ ವಿಶ್ವಾಸ ಹುಟ್ಟಿತು, ಮನಸ್ಸು ಕಲೆತಿತು ಅಂದ್ರೆ ಸಾಯೋವರೆಗೆ ಅದೇ ಸ್ನೇಹ ವಿಶ್ವಾಸ ಇರಬೇಕು. ನೀನೂ ಹಂಗೇ ಇರಬೇಕೂಂತ ನನ್ನ ಇಷ್ಟ. ಏನು ಹೇಳ್ತಿ, ಹೇಳು? ಸ್ನೇಹ, ವಿಶ್ವಾಸ ಬೇಕು ಅಂದ್ರೆ ಇಲ್ಲಿರು; ಬ್ಯಾಡ, ವ್ಯಾಪಾರಕ್ಕೆ ಬಂದೆ, ಆಯ್ತು, ಹೋಗ್ತೀನಿ, ಅನ್ನೋ ಹಾಗಿದ್ರೆ ಛತ್ರಕ್ಕಾದರೂ ಹೋಗು, ಗುಡಿ, ಗುಂಡಾಂತರಕ್ಕಾದರೂ ಹೋಗು."

—ಚಂದ್ರಯ್ಯನ ಮಾತಿನಿಂದ ಅತ್ಯಂತ ಬೇಸರವಾದದವಳಂತೆ ಹೇಳಿದಳು ನಾಗರತ್ನ.

ಅವಳು ಅಷ್ಟು ಹೇಳಿದ ಬಳಿಕ ಬೇರೇನೂ ಹೇಳಲಾರದೆ ಚಂದ್ರಯ್ಯ—

"ನಿನ್ನ ವಿಶ್ವಾಸಕ್ಕೆ ನಾನ್ಯಾಕೆ ಬೇಡಾಂತ ಹೇಳಲಿ ಹೇಳು. ಇವತ್ತು ಇಲ್ಲೀ ಅನ್ನ ನೀರಿನ ಋಣ ಇದ್ರೆ ಇಲ್ಲೇ ಆಗಲಿ."

—ಎಂದು ಹೇಳಿ ಅದರಲ್ಲೂ ತನ್ನ ಒಪ್ಪಿಗೆಯನ್ನು ಸೂಚಿಸಿದ.

ಇದೇ ವಿಶ್ವಾಸದ ಕಡಿವಾಣವನ್ನು ಚಂದ್ರಯ್ಯನ ನಾಲಿಗೆಗೆ ಬಿಗಿದು, ಆತ ತನ್ನ ಯಾವ ಮಾತಿಗೂ ಬೇಡವೆನ್ನದಂತೆ ಮಾಡಿ, ವೈವಣಿಯ ಪಂತೆ, ತೈಲಾಂಭ್ಯಂಜನ ಮಾಡಿಸಿ, ಊಟಕ್ಕೆ ರಸಗವಳವಿಟ್ಟು, ಊಟ ಉಪಚಾರಗಳಿಂದ ಕಣ್ಣು ಎಳೆದುಕೊಂಡು ಹೋದಂತಾದಾಗ ಚಂದ್ರಯ್ಯನನ್ನು ಮಲಗಲು ಬಿಟ್ಟಳು.

ನಾಗರತ್ನ ಆ ದಿನ ತನ್ನಲ್ಲಿ ತೋರಿದ ವಿಶ್ವಾಸ, ಮಾಡಿದ ಉಪಚಾರಗಳಿಂದ ಸಂತುಷ್ಟನಾದ ಚಂದ್ರಯ್ಯನಿಗೆ, ಆಕೆ, ಆತ ಮಲಗಲು ಸಿದ್ಧಪಡಿಸಿದ ಹಾಸಿಗೆಯೂ ಅಷ್ಟೇ ಮೈಮರೆಸುವಂತಿತ್ತು.

ನಾಗರತ್ನ ಚಂದ್ರಯ್ಯನಿಗೆ ಒದಗಿಸಿದ ಮಲಗುವ ಮನೆ, ನಿದ್ರೆಗಿಂತ ಎಚ್ಚರವನ್ನೇ ಪ್ರೇರೇಪಿಸುವಂತಿತ್ತು.

ಆ ಕೋಣೆಯ ಭಿತ್ತಿಗಳನ್ನು ಅಲಂಕರಿಸಿದ ಬಗೆಬಗೆಯ ಶೃಂಗಾರ ಚಿತ್ರಗಳು, ನೆಲಕ್ಕೆ ಹಾಸಿದ ರತ್ನಗಂಬಳಿ, ಕೋಣೆಯ ಪಾರ್ಶ್ವದಲ್ಲಿದ್ದ ಇಬ್ಬದಿಯಲ್ಲೂ ನಿಲುಗನ್ನಡಿಗಳಿಂದ ಅಲಂಕೃತವಾದ ಕರಿಯಮರದ ವಿಶಾಲವಾದ ಮಂಚ, ಆ ಮಂಚದ ಮೇಲೆ ಹಾಸಿದ ಮೊಳಕ್ಕೆ ಎತ್ತರದ ಮೃದು

ನಾದ ಹಾಸಿಗೆ, ಅದರ ಮೇಲೆ ಹಾಸಿದ ಅಚ್ಚ ಬಿಳುಪು ಬಣ್ಣದ ಮೇಲ್ಹಾಸು, ಹೊದೆಯಲು ಇಟ್ಟ ಶಾಲು, ಅವೆಲ್ಲಕ್ಕೂ ಬಿಳಿ ತೆಳುನಾದ, ಪರಿಮಳಮಯವಾದ ಜವನಿಕೆಯನ್ನ ಕವಿಸಿದಂಥ ಆಗರುಬತ್ತಿಯ ಹೊಗೆ—

ಅದೆಲ್ಲವನ್ನೂ ನೋಡಿ, ಚಂದ್ರಯ್ಯನಿಗೆ, ತಾನು ತನಗೆ ಹೇಳಿದ ಕೋಣೆಗೇ ಬಂದಿರುವೆನೋ ಅಥವಾ ದಾರಿ ತಪ್ಪಿ ಮತ್ತಾರಿಗೋ ಸಿದ್ಧ ಪಡಿಸಲ್ಪಟ್ಟ ಕೋಣೆಗೆ ಬಂದಿರುವೆನೋ ಎಂಬ ದಿಗ್ಭ್ರಾಂತಿ ಮೂಡಿ, ಒಂದು ಗಳಿಗೆ ಹಾಗೇ ನಿಂತಲ್ಲಿಯೇ ನಿಂತ.

ಅವನು ಹಾಗೆ ನೋಡುತ್ತಾ ನಿಂತಿರುವಾಗಲೇ, ಅವನ ಬೆನ್ನ ಹಿಂದೆ ಕೋಣೆಯ ಬಾಗಿಲು ಹಾಕಿದ ಸದ್ದಾಗಿ, ಅದೇನು ಸಪ್ಪು ಎಂದು ಚಂದ್ರಯ್ಯ ತಿರುಗಿ ನೋಡಿದಾಗ ಕೋಣೆಯ ಬಾಗಿಲಲ್ಲಿ ಕಂಡು ಬಂದ ಇಪ್ಪತ್ತು—ಇಪ್ಪತ್ತೆರಡು ವರ್ಷಗಳ ಪ್ರಾಯದ ಅಲಂಕೃತಳಾದ, ಸಾಕಷ್ಟು ರೂಪವತಿಯಾದ ಯುವತಿಯನ್ನು ಕಂಡು ಆತನ ಅನುಮಾನ ಮತ್ತಷ್ಟು ದೃಢವಾಗಿ, ಮೈ ಬೆವರಿಟ್ಟು—

'ಕ್ಷ....ಕ್ಷ...ಮಿಸಿ.....ಯಾವ ಕೋಣೇಂತ ತಿಳೀದೆ ಇಲ್ಲಿಗೆ ಬಂದು ಬಿಟ್ಟೆ....'

—ಎಂದು ತೊದಲಿದ.

ಆತನ ಮಾತಿಗೆ ಆ ಯುವತಿ ಏನೂ ಉತ್ತರಕೊಡದೆ ಮುಗುಳುನಗೆ ನಕ್ಕು, ಕೈಯಲ್ಲಿದ್ದ ತಾಂಬೂಲ, ಹಾಲಿನ ಪಾತ್ರೆಯಿದ್ದ ಬೆಳ್ಳಿಯ ತಟ್ಟೆಯನ್ನು ಮಂಚದ ಬಳಿಯಿದ್ದ ಪೀಠದ ಮೇಲಿಟ್ಟು, ತಾನೂ ಮಂಚದ ಮೇಲೆ, ವಿಲಾಸವಾಗಿ, ದಿಂಬಿಗೆ ಮೈಯನ್ನು ಒರಗಿಸಿ ಕುಳಿತು, ಮತ್ತೊಮ್ಮೆ ಚಂದ್ರಯ್ಯನ ಕಡೆ ನೋಡಿ ಮುಗುಳ ನಗೆ ನಕ್ಕಳು.

ತನ್ನ ದೇಹದಲ್ಲಿ ಆಕೆಯ ನಗೆಯ ಮಿಂಚು ಹರಿದ ವೇಗವನ್ನು ಭರಿಸಲಾರದೆ ಚಂದ್ರಯ್ಯನ ಕಣ್ಣಿಗೆ ಕತ್ತಲು ಕವಿದಂತಾಗಿ, ಅಂಗೈ ಅಂಗಾಲುಗಳು ಬೆವತು, ಹಣೆಯಮೇಲೂ ಬೆವರಿನ ಹನಿಗಳು ಮೂಡಿ —

"ಇ—ಇ....ಇದೇ....ನನ್ನ.... ಕೋ ಣೇ ೦ ತ ತಿಳುಕೊಂಡೆ.... ತಪ್ಪಾಯ್ತು...."

—ಎಂದು ಮತ್ತೊಮ್ಮೆ ತೊದಲಿದ.

"ತಪ್ಪೇನೂ ಇಲ್ಲ....ಇದು ನಿಮ್ಮ ಕೋಣೇನೇ....ಬನ್ನಿ."

--ಎಂದು ಆ ಯುವತಿ ಮೆಲುನಗೆ ನಗುತ್ತಾ ಚಂದ್ರಯ್ಯನನ್ನು ಆಹ್ವಾನಿಸಿದಳು.

"ಮ....ಮ....ಮತ್ತೆ....ನೀ .. ವು ...?"

"ನಾನು ನಿಮ್ಮವಳೇ. ನಾಗರತ್ನಕ್ಕ ನಿಮಗೋಸ್ಕರವಾಗಿಯೇ ನನ್ನನ್ನು ಕಳಿಸಿದರು....ನನ್ನನ್ನು ಅದ್ಯಾಕೆ ಹಾಗೆ ನೋಡ್ತೀರ....ನಿಮ್ಮ ಮನಸ್ಸಿಗೆ ನಾನು ಒಪ್ಪಿಗೆ ಆಗಲಿಲ್ವೆ ?"

--ಎಂದು ಚಂದ್ರಯ್ಯನನ್ನು ಪ್ರಶ್ನೆ ಮಾಡುತ್ತಲೇ ಮಂಚದಿಂದ ವೈಯಾರವಾಗಿ ಎದ್ದು ಬಂದು, ಮೃದುವಾಗಿ ಚಂದ್ರಯ್ಯನ ತೋಳುಗಳನ್ನು ಹಿಡಿದು, ತನ್ನ ಸ್ಪರ್ಶದಿಂದ ಕೀಲುಗೊಂಬೆಯಂತಾದ ಆತನನ್ನು ಮಂಚದ ಬಳಿಗೆ ನಡೆಸಿ, ತನ್ನ ಪಕ್ಕದಲ್ಲಿ ಕೂಡಿಸಿಕೊಂಡು, ಅವನ ಮೈಗೆ ತನ್ನ ಮೈಯನ್ನು ಒರಗಿಸಿ—

'ವೀಳೆಯ ಹಾಕಿಕೊಳ್ಳುತ್ತೀರಾ ?'

—ಎಂದು ಕೇಳಿದಳು.

ಆಕೆಯ ಮೈ ಸೋಂಕಿನ ಕಾವಿಗೆ ಗಳಿಗೆಗಳಿಗೆಗೂ ಮಂಜುಗಡ್ಡೆ ಗೊಂಬೆಯಂತೆ ಕರಗುತ್ತಿದ್ದ ಚಂದ್ರಯ್ಯನಿಗೆ ಆಕೆಯ ಪ್ರಶ್ನೆಗೆ ಏನೂ ಉತ್ತರ ಕೊಡಲಾಗದೆ ಎರಕದ ಗೊಂಬೆಯಂತೆ ಸುಮ್ಮನೆ ಕುಳಿತಿದ್ದ.

ಅದನ್ನು ಕಂಡು, ಆತನಿಂದ ಉತ್ತರ, ಅಥವಾ ಯಾವುದೇ ಬಗೆಯ ಪ್ರತಿಕ್ರಿಯೆಯನ್ನು ನಿರೀಕ್ಷಿಸುವುದು ವ್ಯರ್ಥವೆಂದು ತಿಳಿದು, ತಾನೇ ಮಾತನ್ನು ಮುಂದುವರಿಸಿ—

"ನಿಮಗೆ ಹೇಳದೆ ಕೇಳದೆ ಅಕ್ಕಯ್ಯ ಇದೆಲ್ಲಾ ಏರ್ಪಾಟು ಮಾಡಿದ್ದಕ್ಕೆ ಲೂಂತ ಬೇಜಾರೆ ?"

—ಎಂದು ಅವನ ಕೆನ್ನೆಯನ್ನು ನೇವರಿಸುತ್ತಾ ಕೇಳಿದಳು.

'ಊ.....ಹೂ....'

'ಮತ್ತೆ....'

'ನ....ನ....ನ....ನನಗಿದೆಲ್ಲಾ....ಅಭ್ಯಾಸವಿಲ್ಲ....'

ತನ್ನ ಪ್ರಶ್ನೆಗೆ ಚಂದ್ರಯ್ಯ ಕೊಟ್ಟ ಉತ್ತರವನ್ನು ಕೇಳಿ, ಆಕೆ ಗಟ್ಟಿಯಾಗಿ ನಕ್ಕು—

"ಮೊದಲ ದಿನವೇ, ಯಾರಿಗೆ ಯಾವುದೂ ಅಭ್ಯಾಸ ಇರೊಲ್ಲ....."

ಅದಕ್ಕೆ ಯಾಕೆ ಇಷ್ಟು ಯೋಚನೆ? ನಾನು ಬಂದಿಗೋದೇ ನಿಮಗೆ ಅಭ್ಯಾಸ ಮಾಡಿಸಲಿಕ್ಕಲ್ವೇ ? '

—ಎಂದು, ಮಾತನಾಡುತ್ತಲೇ ಚಂದ್ರಯ್ಯನ ತಲೆಯನ್ನು ತನ್ನ ಎದೆಗೆ ಒತ್ತಿಕೊಂಡು, ಅವನ ಕೆನ್ನೆ ತುಟಿಗಳಿಗೆ ಮುತ್ತು ಕೊಟ್ಟಳು.

ಅಲ್ಲಿಗೆ ಚಂದ್ರಯ್ಯನ ಪ್ರತಿರೋಧವೆಲ್ಲಾ ಕರಗಿ ನೀರಾಗಿ, ತನ್ನನ್ನು ಅಪ್ಪಿದ ಹೆಣ್ಣು ದೇಹವನ್ನು ತಾನೂ ಆಲಿಂಗಿಸಿ ಸ್ವೀಕರಿಸಿದ.

ಆ ಅಮಲಿನಿಂದ ಚಂದ್ರಯ್ಯನಿಗೆ ಎಚ್ಚರವಾದಾಗ, ದೂರದಲ್ಲೆಲ್ಲೋ ಕೋಟೆಯ ಬುರುಜಿನಲ್ಲಿ ಕಾವಲಿನವರು ಮಧ್ಯರಾತ್ರಿಯ ಪಹರಿ ಕೂಗುವುದು ಕೇಳಿ, ಹೊತ್ತು ಎಷ್ಟಾಗಿದೆ ಎಂಬುದು ಅರಿವಾಗಿ, ಹಾಗೇ ತನ್ನ ಪಕ್ಕದಲ್ಲಿ ಅಪರಿಚಿತಳಾಗಿಯೂ ಅತಿಪರಿಚಿತಳಂತೆ ಮಲಗಿದ ಹೆಣ್ಣನ್ನು ನೋಡಿದ.

ಆ ಹೆಣ್ಣನ್ನು ನೋಡಿ ಚಂದ್ರಯ್ಯನ ಮೈ ಬೆವರಿಟ್ಟಿತು.

ತನ್ನ ನಲವತ್ತು ವರ್ಷದ ಪ್ರಾಯದಲ್ಲಿ ಚಂದ್ರಯ್ಯ ಜೀವನವನ್ನು ಸಾಕಷ್ಟು ನೋಡಿದ್ದರೂ, ಆಟದ ಹುಚ್ಚಿನಿಂದಾಗಿ ಎಷ್ಟೋ ವೇಶ್ಯಾಗೃಹಗಳಲ್ಲಿ ಓಡಾಡಿದ್ದರೂ, ಆತನೆಂದೂ ವೇಶ್ಯಾಸಂಗ ಮಾಡಿರಲಿಲ್ಲ.

ವೇಶ್ಯೆಯರೆಂದರೆ ಚಪಲವಿರುವುದಿರಲಿ—ಒಂದು ರೀತಿಯ ಭಯವೇ ಇತ್ತು. ಅವರ ಸಂಗ ಮಾಡಿದ ಬಳಿಕ ಸಂಸಾರಗಳು ಉಳಿಯುವುದಿಲ್ಲವೆಂಬ ಭೀತಿಯಾಯಿತು. ಆ ಭೀತಿಯೇ ಈಗಲೂ ಅವನ ಮೈ ಬೆವರುವಂತೆ ಮಾಡಿದುದು.

ಮೊದಮೊದಲು ನಾಗರತ್ನಳ ವಿಶ್ವಾಸ ಅಕಾರಣವಾದ ಸಹಜ ಸಜ್ಜನಿಕೆ ಎಂದು ಭಾವಿಸಿದ್ದ ಚಂದ್ರಯ್ಯನಿಗೆ, ತನ್ನ ಪಕ್ಕಕ್ಕೊಂದು ಹೆಣ್ಣು ಗ್ರಹ ಅಯಾಚಿತವಾಗಿ ಗಂಟುಬಿದ್ದದ್ದನ್ನು ಕಂಡು, ನಾಗರತ್ನಳ ಬಳಿಯಿದ್ದ ಮಾಧವರಾಯನ ಹಣವನ್ನು ಎತ್ತಿಹಾಕುವುದಕ್ಕೆ ಈ ಉಪಾಯವಿರಬಹುದೇ ಎಂಬ ಚಿಂತೆ ಮೂಡಿ, ಹಾಗೇನಾದರೂ ಆದರೆ ತನ್ನ ಗತಿ ಏನು ಎಂಬ ದಿಗಿಲು ಆವರಿಸಿ, ಅವನ ಕಣ್ಣಿನಿಂದ ನಿದ್ರೆ ಹಾರಿಹೋಗಿ, ಉಳಿದ ಇರುಳನ್ನು ಆ ಚಿಂತೆಯ ಸಂಗದಲ್ಲೇ ಕಳೆದ.

ಈ ಹಾಳು ರಾತ್ರಿ ಕಳೆದು ಹಗಲಾಗುವುದೇ ಎಂಬಷ್ಟು ಕಾಡಿಸಿ, ಅಂತೂ ಬೆಳಗಾಯಿತು.

ಮುಂಜಾವಿನ ಕೋಳಿ ಕೂಗಿ, ಮನೆಯೊಳಗೆ ಜನರು ಎದ್ದು ಓಡಾಡುವ ಸಪ್ಪಳ ಕೇಳುತ್ತಿದ್ದ ಹಾಗೇ ಚಂದ್ರಯ್ಯ ತಾನೂ ಎದ್ದು ಹೊರಗೆ ಬಂದ.

ನಾಗರತ್ನ ಅವನಿಗಿಂತ ಮುಂಚಿತವಾಗಿಯೇ ಎದ್ದು, ಚಂದ್ರಯ್ಯ ಎದ್ದು ಹೊರಬರುವುದನ್ನೇ ಕಾಯುತ್ತಾ ಕುಳಿತಿದ್ದಳು.

‘ ರಾತ್ರಿ ನಿದ್ರೆ ಚಂದಾಗಿ ಬಂತೇನಣ್ಣಾ ? ’

—ಚಂದ್ರಯ್ಯನ ಕೆಂಪೇರಿದ ಕಣ್ಣನ್ನು ನೋಡಿ, ಅರ್ಥಗರ್ಭಿತವಾದ ನಗು ನಗುತ್ತಾ ಕೇಳಿದಳು ನಾಗರತ್ನ. ಅವಳ ಮಾರ್ಮಿಕವಾದ ನಗು ಚಂದ್ರಯ್ಯನ ಪಾಲಿಗೆ ಸರ್ಪಸ್ಪರ್ಶನಂತಿತ್ತು. ಎಂತಲೇ ಅವಳ ಪ್ರಶ್ನೆಗೆ ನೇರವಾಗಿ ಉತ್ತರ ಕೊಡದೆ—

“ ನಾನು ಹೊಳೆ ದಂಡೆಗೆ ಹೋಗಿ, ಬೆಳಗಿನ ಕೆಲಸ ತೀರಿಸಿಕೊಂಡು ಹಾಗೇ ಅಯ್ಯಂಗಾರ್ ಸ್ವಾಮಿಗಳನ್ನು ಕಂಡು ಬರುತ್ತೇನೆ. ಎಲ್ಲಾ ಮಾತು ಮುಗಿಸಿಕೊಂಡು, ನಾನಿವತ್ತು ಮಧ್ಯಾಹ್ನಾನೇ ಊರಿಗೆ ಹೋಗಲು ಗಾಡಿ ಕಟ್ಟಿಸಬೇಕು. ಇಲ್ಲೀ ಮಾತೆಲ್ಲಾ ಮುಗಿದ್ರೆ, ಅಲ್ಲಿ ಮಾಡಬೇಕಾದ ಕೆಲಸ ಬ್ರಹ್ಮಾಂಡದಷ್ಟಿದೆ. ”

—ಎಂದು ಆತುರಾತುರನಾಗಿ ಹೇಳಿದ.

ಚಂದ್ರಯ್ಯನ ಮಾತು ಕೇಳಿ ನಾಗರತ್ನ ಮುಸಿನಗೆ ನಕ್ಕು ಹೇಳಿದಳು,

‘ ಆಯ್ತು, ನಿಮ್ಮ ಕೆಲಸ ಎಲ್ಲಾ ತೀರಿಸಿಕೊಂಡು ಬನ್ನಿ’

‘ ಹಣದ ವಿಷಯ ಜೋಪಾನ....’

‘ ಅದೇನೂ ಆಗೊಲ್ಲ. ನಾನೂ ಎಲ್ಲೂ ಓಡಿ ಹೋಗಲ್ಲ. ಏನೂ ಯೋಚನೆ ಮಾಡಬೇಡ ಕಣಣ್ಣಾ ’

—ಎಂದು ಹೇಳಿದಳು ನಾಗರತ್ನ.

ನಾಗರತ್ನ ಅಷ್ಟು ಹೇಳಿದರೂ ಚಂದ್ರಯ್ಯನನ್ನು ಮಾತ್ರ ಆತನನ್ನು ಆವರಿಸಿದ ಭೀತಿ ಬಿಡಲಿಲ್ಲ. ಅವಸರವಸರನಾಗಿ ತನ್ನ ಬೆಳಗಿನ ನಿತ್ಯ ನೈಮಿತ್ತಿಕ ಕಾರ್ಯವನ್ನೆಲ್ಲಾ ಮುಗಿಸಿಕೊಂಡು, ಛತ್ರದ ಬಳಿ ಬಿಟ್ಟಿದ್ದ ಗಾಡಿಯವನ ಯೋಗಕ್ಷೇಮ ವಿಚಾರಿಸಿಕೊಂಡು, ಅಯ್ಯಂಗಾರ್ಯರ ಮನೆಗೆ

ಹೋಗಿ, ಅವರಿಗೆ ತಾನು ಎಲ್ಲಾ ಏರ್ಪಾಡು ಮಾಡಿಕೊಂಡು ಬಂದಿರುವ ವಿಷಯ ತಿಳಿಸಿ, ಆಗಲೇ ನಾಗರತ್ನಳನ್ನು ಕಾಣಲು ಹೋಗಿ ಮಾತುಕಥೆ ಮುಗಿಸಬೇಕು' ಎಂದು ಆತುರಪಡಿಸಿದ. ಅವರು—

"ಈಗತಾನೇ ದಣಿದು ಬಂದಿದ್ದೀಯಾ. ಇಷ್ಟು ಆತುರವೇನು ?"

—ಎಂದು ಹೇಳಿದರೂ ಕೇಳದೆ, ಬಲವಂತವಾಗಿ ಅವರನ್ನು ಮನೆಯಿಂದ ಹೊರಡಿಸಿಕೊಂಡು ಮತ್ತೆ ನಾಗರತ್ನಳ ಮನೆಗೆ ಬಂದ.

ಮನೆಬಾಗಿಲಿಗೆ ಬಂದ ಚಂದ್ರಯ್ಯನನ್ನು ನಾಗರತ್ನ ಆಗತಾನೇ ಕಂಡವಳಂತೆ —

'ಊರಿಗೆ ಯಾವಾಗ ಬಂದ್ರಿ ಅಣ್ಣಾ....ನಿಮ್ಮ ದಣಿಗಳು ಕ್ಷೇಮವೇ'

—ಎಂದು ವಿಚಾರಿಸಿ, ಅದಕ್ಕೆ ಚಂದ್ರಯ್ಯ ಸೂಕ್ತವಾಗಿ ಉತ್ತರ ಕೊಟ್ಟ ಬಳಿಕ—

'ಹೋದ ಕೆಲಸ ಏನಾಯ್ತು ?'

—ಎಂದು ಕೇಳಿದಳು.

'ನನ್ನ ಧಣಿಗಳು ಹಾಗೆಲ್ಲಾ ಹಿಂದೆ ಮುಂದೆ ನೋಡೋರಲ್ಲ. ಬೇಕಾದ ಖರ್ಚಾಗಲಿ ಕರಸು ಅಂತ ಹೇಳಿದರು. ಹಾಗಂತ ನೀನೂ ಬಹಳ ದುಬಾರಿ ಮಾಡಬೇಡ'

—ಎಂದ ಚಂದ್ರಯ್ಯ.

ಆತನೊಂದಿಗೆ ಅಯ್ಯಂಗಾರ್ಯರೂ ತಮ್ಮ ಧ್ವನಿ ಕೂಡಿಸಿದರು.

ಹಿಗ್ಗಾಮುಗ್ಗಾ ಎಲ್ಲರೂ ಎಳೆದಾಡಿದ ಬಳಿಕ, ಮಾಧವರಾಯ, ನಾಗರತ್ನ ಕಳಿಸುವ ಹುಡುಗಿಯರಿಗೆ ಒಟ್ಟು ಎರಡುಸಾವಿರ ವರಹ ಸಂಭಾವನೆ ಕೊಡುವುದೆಂದೂ, ಊಟ ಉಪಚಾರ ಪ್ರಯಾಣದ ಖರ್ಚಿನ್ನೆಲ್ಲಾವನ್ನೂ ಆತನೇ ವಹಿಸಬೇಕೆಂದೂ ಒಪ್ಪಂದವಾಯಿತು.

ಮಾತು ಆ ನಿಲುಗಡೆಗೆ ಬಂದ ಬಳಿಕ, ಅಯ್ಯಂಗಾರ್ಯರು- -

'ನೀನು ಕೇಳಿದಷ್ಟು ಹಣ ಕೊಡಲಿಲ್ಲ ಅಂತ ಕಳಪೆ ಜನಾನ ಕಳಿಸಬೇಡ. ಒಂದು ಸಲ ಕರೆದೋರು ಇನ್ನೂ ಹತ್ತು ಸಲ ಕರೀಬೇಕು ಹಾಗೆ ಮಾಡಿಕೋ. ನೀನು ಎಲ್ಲಾ ಸರಿಯಾಗಿ ಏರ್ಪಾಟು ಮಾಡಿದರೆ. ನಾನೂ ರಾಯರಿಗೆ ನಿನ್ನ ವಿಷಯ ಶಿಫಾರಸು ಮಾಡುತ್ತೇನೆ.'

-ಎಂದು ಆಶ್ವಾಸನ ಕೊಟ್ಟರು.

"ನಿಮ್ಮದು ಚಂದ್ರಣ್ಣನ್ನೋರದು ನಂಬಿಕೆ ಇರೋ ಹೊತ್ತಿಗೇ ನಾನು ಒಪ್ಪಿಕೊಂಡದ್ದು. ಒಂದು ಸಲ ಒಪ್ಪಿಕೊಂಡ ಮೇಲೆ ನಾನು ಹೇಗೆ ಕೆಲ್ಸ ಮಾಡ್ತೀನೀಂತ ನಿಮಗೇ ತಿಳೀತದೆ. ವ್ಯವಹಾರದ ಮಾತು ಮುಗಿದ ಮೇಲೆ ಉಳಿದದ್ದೆಲ್ಲಾ ವಿಶ್ವಾಸ ಕೊಟ್ಟು ವಿಶ್ವಾಸ ಪಡೆಯೋ ಮಾತು. ಅದರಲ್ಲಿ ನಾನು ಅಲ್ಲಾಂತ ಅನ್ನಿಸಿಕೊಳ್ಳೋಲ್ಲ.

—ಎಂದು ನಾಗರತ್ನಳೂ ತನ್ನ ಪಾಲಿನ ಭರವಸೆ ಕೊಟ್ಟಳು.

ಆ ಮಾತುಗಳೆಲ್ಲಾ ಮುಗಿದಬಳಿಕ ಚಂದ್ರಯ್ಯ ಆದಿನ ಮಧ್ಯಾಹ್ನವೇ ನಾಗರತ್ನಳಿಗೆ ಮುಂಗಡವಾಗಿ ಕೊಡುವ ಹಣ ಕೊಟ್ಟು, ಊರಿಗೆ ಹೋಗಿ ಇಲ್ಲಿಯವರು ಅಲ್ಲಿಗೆ ಬರಬೇಕಾದ ದಿನ ತಿಳಿಸುತ್ತೇನೆ—ಎಂದು ಹೇಳಿ, ನಾಗರತ್ನ ತರಿಸಿಕೊಟ್ಟ ಹಾಲು ಕುಡಿದು, ಅಯ್ಯಂಗಾರ್ಯರೊಂದಿಗೆ ಅಲ್ಲಿಂದ ಹೊರಬಿದ್ದ.

ಇಷ್ಟೆಲ್ಲಾ ಮಾತಾದರೂ ಚಂದ್ರಯ್ಯನಿಗೆ ನಾಗರತ್ನಳ ಬಳಿ ಇದ್ದ ಹಣ ತನ್ನ ಕೈಗೆ ಬರುವವರೆಗೂ ಧೈರ್ಯವಿರಲಿಲ್ಲ. ಎಂತಲೇ ಅಯ್ಯಂಗಾರ್ಯರನ್ನು ಅವರ ಮನೆ ಬಾಗಿಲಿಗೆ ತಲುಪಿಸಿ, ಅವರ ಪರವಾಗಿ ಮಾಧವರಾಯನಿಗೆ ಹೇಳಬೇಕಾದ ಮಾತುಗಳನ್ನೆಲ್ಲಾ ಕೇಳಿಕೊಂಡು—

"ರಾಯರ ಹತ್ತಿರ ಮಾತಾಡಿ, ನಿಮಗೂ ದಿನ ತಿಳಿಸುತ್ತೇನೆ, ಹೊರಟು ಬರಬೇಕು."

—ಎಂದು ಹೇಳಿದ.

"ಇಲ್ಲೇ ಇದ್ದು ಊಟ ಮಾಡಿಕೊಂಡು ಹೋಗು."

—ಎಂದು ಅವರು ಎಷ್ಟು ಬಲವಂತ ಮಾಡಿದರೂ ಕೇಳದೆ, ಅಲ್ಲಿಂದ ಹೊರಟು, ಛತ್ರದ ಬಳಿ ಬಂದು, ತನಗಾಗಿ ಕಾದಿದ್ದ ಆಳನೊಂದಿಗೆ ಗಾಡಿ ಹೊಡಿಸಿಕೊಂಡು ಮತ್ತೆ ಷಹರ್ ಗಂಜಾಂನ ದಾರಿ ಹಿಡಿದ.

ಹಾಗೆ ಹೋದ ಹಾಗೆ ಮಾಡಿ ಮತ್ತೆ ಹೇಗೆ ಬಂದಂತೆ. ಅಲ್ಲಿಂದ ಹೋದ ಒಂದು ಗಂಟೆಯೊಳಗಾಗಿ ಮತ್ತೆ ಮನೆಗೆ ಬಂದ ಚಂದ್ರಯ್ಯನನ್ನು ಕಂಡು ನಾಗರತ್ನಳಿಗೆ ನಗು ತಡೆಯುವುದಾಗಲಿಲ್ಲ.

"ಬೆಳಗ್ನಿಂದ ಅಣ್ಣಾವರಿಗೆ ಏನೋ ಭಯ ಹುಟ್ಟಿದ ಹಾಗಿದೆ. ನಾನೇನಾರ ನಿಮ್ಮ ದುಡ್ಡು ಎತ್ತಿಕೊಂಡು ಹೋಗ್ತೇನೀಂತ ದಿಗಿಲೇ?"

—ಎಂದು ನಗುತ್ತಲೇ ಕೇಳಿದಳು.

ಛೆ....ಛೆ....ನಿನ್ನ ವಿಷಯದಲ್ಲಿ ಅಂಥ ಭಯ ಏನು ಬಂತು.... ರಾಯರು ಇವತ್ತೇ ಇಲ್ಲಿಂದ ಹೊರಟು ಬರಬೇಕೂಂತ ಅಪ್ಪಣೆ ಮಾಡಿದ್ದರು ಅದಕ್ಕಿಷ್ಟು ಧಾವಂತ.

"ಹಂಗಿದ್ರೆ ಮೊದಲು ಈ ಧಾವಂತದ ಮಾತು ಮುಗಿದು ಹೋಗ್ಲಿ... ಆಮೇಲೆ ಹೊತ್ತಿದ್ರೆ ಬ್ಯಾರೆ ಮಾತಾಡೋಣ."

—ಎಂದು ಹೇಳಿ ನಾಗರತ್ನ ಒಳಗೆ ಹೋಗಿ, ಒಂದೊಂದಾಗಿ ಹಣದ ಚೀಲಗಳನ್ನು ತಂದು ಚಂದ್ರಯ್ಯನ ಮುಂದಿರಿಸಿ -

"ಒಂದಷ್ಟು ಹೊತ್ತು ತಡಾ ಆದರೂ ಚಿಂತೆ ಇಲ್ಲ, ಹಣ ಎಲ್ಲಾ ಒಂದ್ಸಲ ಸರಿಯಾಗಿ ಎಣಿಸಿಕೊಂಡುಬಿಡಿ. ಇದು ಅಪ್ಪ ಮಕ್ಕಳನ್ನು ಅಗಲಿಸೋ ಇಬ್ಬಂದಿ ಮುಂಡೇದು. ಇದರ ವ್ಯವಹಾರದಾಗೆ ಎಳ್ಳುಕಾಯಿ ಮುಳ್ಳು ಮನೆಯಷ್ಟೂ ಅನುಮಾನ ಇರಬಾರದು."

ಎಂದು ಹೇಳಿದಳು.

ನಾಗರತ್ನ ಒಂದೊಂದಾಗಿ ಹಣದ ಚೀಲಗಳನ್ನು ತಂದಿಡುತ್ತಿದ್ದ ಹಾಗೆ, ಅದರ ಬಾಯಿನ ಕಟ್ಟು, ತೂಕವನ್ನು ನೋಡಿ, ಅದನ್ನು ಯಾರೂ ಬಿಚ್ಚಿಲ್ಲವೆಂದು ಮನಸ್ಸಿಗೆ ನಂಬಿಕೆಯಾದರೂ—

'ನೀನು ಹೇಳೋದು ನಿಜ ನಾಗರತ್ನ. ಅದ್ಯಾಗೂ ಕಂಡೋರ ಹಣ ಅಂದ್ರೆ ಕಾರ್ಕೋಟಿಕ ವಿಷ ಇದ್ದಹಾಗೆ. ಒಂದೇ ಹನಿ ಸಾಕು ಕೊಲ್ಲೋಕೆ. ನಮ್ಮ ರಾಯರು ಚೆಲ್ಲೋದಾಗ ದುಡ್ಡನ್ನ ನೀರಿನ ಹಾಗೆ ಚೆಲ್ಲಿದರೂ, ಲೆಕ್ಕಾಚಾರದ ವಿಷಯದಲ್ಲಿ ಮಾತ್ರ ಕರಾರುವಾಕು.'

—ಎಂದು ತನ್ನ ಅಪನಂಬಿಕೆ, ಭಯವನ್ನು ಮಾಧವರಾಯನ ಮೇಲೆ ಹಾಕಿ, ಒಂದೊಂದಾಗಿ ಚೀಲವನ್ನು ಬಿಚ್ಚಿ ಅದರಲ್ಲಿದ್ದ ಹಣವನ್ನು ಎಣಿಸಿದ.

ನಾಗರತ್ನ ಹೇಳಿದಹಾಗೆ ಒಟ್ಟು ಆರುಸಾವಿರ ವರಹ ಇತ್ತು, ಒಂದು ವರಹ ಕೂಡಾ ಕಡಮೆ ಇರಲಿಲ್ಲ. ಆ ಭೀತಿ ತೊಲಗಿದ ಬಳಿಕ, ಚಂದ್ರಯ್ಯ ನಿಗೆ ತನ್ನ ವಿಪರೀತ ಜಾಗರೂಕತೆಗಾಗಿ ತನಗೆ ನಾಚಿಕೆಯಾಗಿ—

'ನೀನು ಇಷ್ಟು ವಿಶ್ವಾಸದಿಂದ ನಮ್ಮ ಕೆಲಸ ಮಾಡಿಕೊಟ್ಟರೂ ಅಪನಂಬಿಕೆ ಪಟ್ಟೇಂತ ಅಂದುಕೋಬೇಡ ನಾಗರತ್ನ....ದೊಡ್ಡೋರ ಕೆಲಸ ಮಾಡೋವಾಗ ಹಾವಿನ ಸ್ನೇಹ ಮಾಡಿದಷ್ಟು ಹುಷಾರಾಗಿರಬೇಕು.

ಹಾಗಂತ ನಾನು ವಿಶ್ವಾಸ ಮರೆಯೋ ಕೃತಘ್ನ ಅಲ್ಲ. ನಿನ್ನೆ ನೀನು ಮಾಡಿದ ಉಪಕಾರಾನ ನಾನು ಈ ಜನ್ಮದಲ್ಲಿ ಮರೆಯೊಲ್ಲ. ಅದು ದುಡ್ಡು ಕೊಟ್ಟು ತೀರಿಸೋ ಅಂಥ ಉಪಕಾರವಲ್ಲ. ಆದರೂ ನಮ್ಮ ಧರ್ಮ ನಾವು ಬಿಡಬಾರದು. ಅದಕ್ಕೋಸ್ಕರ ಕೇಳ್ತೀನಿ—ನೀನು ಬೇರೆ ಏನೂ ತಿಳಿದುಕೋಬೇಡ. ನೀನು ನಮ್ಮ ಕೆಲಸ ಮಾಡಿಕೊಟ್ಟದ್ದಕ್ಕೆ ಎಷ್ಟು ಕೊಡಬೇಕು ಹೇಳು ? '

—ಎಂದು ಕೇಳಿದ.

' ನಾನಾಗಲೇ ಹೇಳಿದೆನಲ್ಲಾ—ಇದು ವಿಶ್ವಾಸಕ್ಕೆ ಮಾಡಿದ ಕೆಲಸ. ಅದಕ್ಕೋಸ್ಕರ ನನಗೊಂದು ಚಿಕ್ಕಾಸೂ ಕೊಡಬೇಕಾಗಿಲ್ಲ. '

' ಹಾಗಂದ್ರೆ ಹ್ಯಾಗಾಗುತ್ತೆ ನಾಗರತ್ನ . . . .'

'ನಾನೇನು ಒಡವೆ ಮಾರಿ, ದಳ್ಳಾಳಿ ತಗೊಂಡು ಜೀವನ ಮಾಡ್ತೋಳೇ ? ಆ ಮಾತೇ ನನ್ನ ಹತ್ತಿರ ಎತ್ತಬೇಡ. ಅಷ್ಟು ಮೀರಿ ನಿಮಗೆ ನನಗೆ ಉಪಕಾರ ಮಾಡಬೇಕೂಂತಾ ಇದ್ರೆ, ಒಂದು ಕೆಲಸ ಮಾಡಿಕೊಡಿ."

'ಏನು ಹೇಳು ?'

'ಈಗ ನಿಮ್ಮೂರಿಗೆ ಹುಡುಗೇರನ್ನು ಕಳಿಸ್ತೀನಲ್ಲಾ, ಅವರ ಜೊತೇಲಿ, ನಮ್ಮ ಹುಡುಗೀನೂ ಕಳಿಸಬೇಕೂಂತ ಮಾಡಿದೀನಿ....'

" ಯಾರು ? ನಿನ್ನೆ "

— —ನಾಗರತ್ನ ಹೇಳುತ್ತಿದ್ದ ಹುಡುಗಿ ಹಿಂದಿನ ರಾತ್ರಿ ತನ್ನ ಶಯ್ಯೆಯ ಸಹಚರಿಯಾಗಿದ್ದವಳೇನೋ ಎಂದು ಊಹಿಸಿ ಕೇಳಿದ ಚಂದ್ರಯ್ಯ.

' ಊಹೂ, ಅವಳಲ್ಲ. ಅವಳು ನನ್ನ ಚಿಕ್ಕಮ್ಮನ ಮಗಳು. ನಾನು ಹೇಳಿದ್ದು ನನ್ನ ಮಗಳು ನೀಲಾ ಸುದ್ದಿ. '

'ನಿನ್ನ ಮಗಳನ್ನು ಕಳಿಸೋಕೆ ನನ್ನ ಕೇಳೋದೇನಿದೆ ? ಖಂಡಿತ ವಾಗಿಯೂ ಕಳಿಸು.'

'ನನ್ನ ಮಗಳೂಂತ ಅಷ್ಟು ಸಲಿಗೆ ತಗೊಳ್ಳೋದುಂಟೆ ? ಒಂದ್ಸಲ ನೀವೇ ಅವಳನ್ನ ಕಣ್ಣಾರೆ ನೋಡಿ. ನೀವು ಕಳಿಸು ಅಂದ್ರೆ ಕಳಿಸ್ತೀನಿ. ಅವಳು ನಿಮಗೆ ಒಪ್ಪಿಗೆಯಾಗಿ, ಅಲ್ಲಿಗೆ ಬಂದ್ರೆ, ಒಂದು ಕೆಲಸ ಮಾಡಿ ಕೊಡಬೇಕು.'

" ಏನು ? "

" ನಿಮ್ಮದೆಲ್ಲಾ ಮುಗಿದ ಮೇಲೆ ಒಂದು ದಿನ ಧಣಿಗಳ ಇದಿರಿನಲ್ಲಿ ನನ್ನ ಮಗಳ ತಾಫೆ ಇಡಿಸಿ, ನನಗೆ ಕೊಡಬೇಕೂಂತ ಇರೋದನ್ನೆಲ್ಲಾ ಯಜಮಾನರ ಕೈಲಿ ಈ ಮಗೂಗೆ ಕೊಡಿಸಿ. ಅಷ್ಟೇ ನಾನು ನಿಮ್ಮನ್ನ ಕೇಳೋದು. "

" ನಿನ್ನ ಮಗಳ ಕೈಲಿ ನಾಟ್ಯ ಮಾಡಿಸಿ ದುಡ್ಡು ಕೊಡಿಸಿದರೆ, ಅದರಲ್ಲಿ ನನ್ನ ಉಪಕಾರ ಏನು ಬಂತು ? "

"ನಿಮ್ಮಿಂದ ನನ್ನ ಮಗಳಿಗೆ ದೊಡ್ಡೋರ ಆಶೀರ್ವಾದ ಆಗೋ ಭಾಗ್ಯಾನೇ ಸಾಕು....."

—ಎಂದು ಹೇಳಿ ನಾಗರತ್ನ, ತನ್ನ ಧ್ವನಿಯನ್ನು ಎತ್ತರಿಸಿ - -

"ನೀಲಾ....ನೀಲಕ್ಕಾ....ಒಂದು ಗಳಿಗೆ ಹಿಂಗೆ ಬಂದು ಹೋಗವ್ವ. ಅಣ್ಣಾವರು ನಿನ್ನ ನೋಡಬೇಕೂಂತಾರೆ '

—ಎಂದು ಕೂಗಿ ಹೇಳಿದಳು.

ನಾಗರತ್ನಳ ಕೂಗು ಕರಗುತ್ತಿದ್ದ ಹಾಗೇ, ಒಳಮನೆಯಿಂದ—

''ಬಂದೆ ಕಣವ್ವಾ"

—ಎಂದು ಕೋಮಲ ಕಂಠದಿಂದ ಉತ್ತರ ಕೇಳಬಂದು, ಆ ಧ್ವನಿಯನ್ನು ಹಿಂಬಾಲಿಸಿದಂತೆ ನಾಗರತ್ನಳ ಮಗಳು ನೀಲಾ ಹಜಾರಕ್ಕೆ ಬಂದು ಓರೆನೋಟದಿಂದ ಚಂದ್ರಯ್ಯನನ್ನು ನೋಡಿ, ತಲೆ ತಗ್ಗಿಸಿ ನಿಂತಳು.

'ಹಿಂಗೆ ಬಂದು ಪಕ್ಕದಾಗೆ ಕುಂತುಕೋ ಬಾ, ಅಣ್ಣಾವರು ಹೊರಗಿನೋರಲ್ಲ, ನಮ್ಮೋರೇ. ಅವರ ಕಾಲಿಗೆ ನಮಸ್ಕಾರ ಮಾಡಿ ಆಶಿರ್ವಾದ ತಗೋ.'

—ಎಂದು ಮಗಳಿಗೆ ಹೇಳಿದಳು ನಾಗರತ್ನ.

ನೀಲಾ ತಾಯಿ ಹೇಳಿದಂತೆ ಮಾಡಿ, ಬಳಿಕ ನಾಗರತ್ನಳ ಪಕ್ಕದಲ್ಲಿ ಕುಳಿತಳು.

"ನಮ್ಮ ನೀಲಾನ ನೋಡಿದ್ರಾ ಅಣ್ಣಾ....ನಿಮ್ಮೂರಿಗೆ ಬರೋಕೆ ಲಾಯಖ್ಖಾಗಿದಾಳೆ ಅನ್ನಿ್ತೀರಾ ?"

— ನಾಗರತ್ನಳೇ ಚಂದ್ರಯ್ಯನನ್ನು ಪ್ರಶ್ನೆ ಮಾಡಿದಳು.

ಆ ಮಾತು ಕೇಳಿ ಚಂದ್ರಯ್ಯ ನೀಲಳತ್ತ ತಲೆ ಎತ್ತಿ ನೋಡಿದ. ನೋಡುತ್ತಿದ್ದ ಹಾಗೇ, ಆಗತಾನೇ ಯೌವನದಲ್ಲಿ ಪದಾರ್ಪಣ ಮಾಡಿದ ನೀಲಳ ರೂಪರಾಶಿ, ಅವನ ಕಣ್ಣನ್ನು ತುಂಬಿ ಎದೆಯನ್ನು ಕೊಳ್ಳೆ ಹೊಡೆದು—

''ಇಂಥ ಅರಗಿಳಿಯನ ಕಳಿಸಬಹುದೇಂತ ನನ್ನ ಕೇಳ್ತೀಯಲ್ಲಾ ನಾಗ! ರತ್ನ, ಖಂಡಿತ ಕಳಿಸು. ಈಗ ನಿನ್ನ ಮಗಳನ್ನ ನೋಡಿದ ಮೇಲೆ ನೀನು ಕಳಿ ಸೋಲ್ಲಾಂದ್ರೂ ನಾನು ಬಿಡೋಲ್ಲ. ತಿಳೀತೇ ?"

—ಎಂದು ಹೃತ್ಪೂರ್ವಕವಾಗಿ ಹೇಳಿದ ಚಂದ್ರಯ್ಯ.

"ನೀವು ಅಷ್ಟು ಹೇಳಿದ್ರೆ ನಮ್ಮ ಹುಡುಗೀಗೆ ಅದೇ ದೊಡ್ಡ ಆಶೀ ರ್ವಾದ"—ಎಂದಳು ನಾಗರತ್ನ.

ಆ ಮಾತುಕಥೆಗಳು ಮುಗಿದ ಬಳಿಕ ಚಂದ್ರಯ್ಯ, ನಾಗರತ್ನ ಅವ ನನ್ನು ಇನ್ನೊಂದು ದಿನ ಇದ್ದು ಹೋಗಬೇಕೆಂದು ಎಷ್ಟು ಬಲವಂತ ಮಾಡಿ ದರೂ ನಿಲ್ಲದೆ,

"ಇದೆಲ್ಲಾ ಮುಗಿದುಹೋಗ್ಲಿ. ಆಮೇಲೆ ಇನ್ನೊಂದ್ಸಲ ನಿಧಾನವಾಗಿ ಬಂದು ನಿನಗೆ ಬೇಜಾರಾಗೋವಷ್ಟು ದಿನ ಇದ್ದು ಹೋಗ್ತೀನಿ. ಈಗ ನನಗೆ ಅಪ್ಪಣೆ ಕೊಡು."

—ಎಂದು ಚಂದ್ರಯ್ಯ ಹೊರಡಲು ಸಿದ್ಧನಾದ.

"ನೀವು ನನಗೆ ಹೇಳಿದ್ರೀ ನಾನು ಆ ಹುಡುಗೀಗೂ ಹೇಳ್ಲೀ ?"

—ಕೆಣಕು ನಗೆ ನಗುತ್ತಾ ಕೇಳಿದಳು ನಾಗರತ್ನ.

"ಯಾರಿಗೆ?"

"ನಿನ್ನೆ ನಿಮ್ಮ ಜೊತೇಲಿ ಇದ್ದಳಲ್ಲಾ ...ಆ ಇಂದಿರಾಗೆ"

ನಾಗರತ್ನಳ ಮಾತು ಕೇಳಿ ಚಂದ್ರಯ್ಯನಿಗೂ ಹಿಂದಿನ ರಾತ್ರಿಯ ನೆನಪಾಗಿ—

"ಹೌ, ಹೇಳು. ಹಂಗೇ ನಾನು ಕೊಟ್ಟೇಂತ ಹೇಳಿ ಇದನ್ನು ಅವ ಳಿಗೆ ಕೊಟ್ಟುಬಿಡು. ಅದೂ ಭಾಳ ಒಳ್ಳೇ ಹುಡುಗಿ''

ಎಂದು ತನ್ನ ಖರ್ಚಿಗೆ ತಂದಿದ್ದ ಹಣದಲ್ಲಿ ಐವತ್ತು ವರಹ ನಾಗರತ್ನಳ ಕೈಗೆ ಹಾಕಿ, ಹಣದ ಚೀಲಗಳನ್ನೆಲ್ಲಾ ಗಾಡಿಯೊಳಗೆ ಜೋಪಾನವಾಗಿ

ಇರಿಸಿ, ಚಂದ್ರಯ್ಯ ಷಹರ್ ಗಂಜಾಂ ಬಿಟ್ಟು ನಾಗರವಳ್ಳಿಯ ಹಾದಿ ಹಿಡಿದ.

ಗಾಡಿ ನಾಗರವಳ್ಳಿಯ ಹಾದಿಯಲ್ಲಿ ನಿಧಾನವಾಗಿ ನಡೆಯುತ್ತಿತ್ತು ; ಚಂದ್ರಯ್ಯನ ಮನಸ್ಸು ಮಾತ್ರ ಷಹರ್‌ಗಂಜಾಂನ ಕಡೆಗೇ ತುಯ್ಯುತಿತ್ತು.

೮

ನಾಗರವಳ್ಳಿಗೆ ಹಿಂತಿರುಗಿದ ಚಂದ್ರಯ್ಯ, ಅಲ್ಲಿ ನಡೆದುದನ್ನೆಲ್ಲಾ ಮಾಧವರಾಯನಿಗೆ ತಿಳಿಸಿ, ನಾಗರತ್ನಳ ನೀತಿ, ನಿಯತ್ತು, ಒಳ್ಳೆಯತನ, ಅವಳ ಮಗಳ ರೂಪಲಾವಣ್ಯ ಎಲ್ಲವನ್ನೂ ಸವಿವರವಾಗಿ ವಿವರಿಸಿ, ನಾಗ ರತ್ನಳ ಮುಖವನ್ನು ನೋಡದಿದ್ದ ಮಾಧವರಾಯನೂ—

"ನೀನು ಹೇಳೋದು ನಿಜ. ಆ ಜಾತೀಲಿ ಅಂಥ ಜನ ಅಪರೂಪ"

—ಎಂದು ನಾಗರತ್ನಳನ್ನು ಹೊಗಳುವಂತೆ ಮಾಡಿದ.

ಆಭರಣಗಳ ಮಾರಾಟದಿಂದ ತಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಾಗಿ ಹಣ ಬಂದಿದ್ದರಿಂದ ಮಾಧವರಾಯನ ಚಿಂತೆಯೂ ದೂರವಾಗಿ ಮಾರಾಟ ದಿಂದ ಬಂದ ಹಣವೆಲ್ಲಾ ಖರ್ಚಾದರೂ ಸರಿಯೇ, ಎಲ್ಲಾ ಅದ್ಧೂರಿಯಾಗಿ ನಡೆಸಿಬಿಡಬೇಕು'' ಎಂದು ತೀರ್ಮಾನಿಸಿದ.

ಆ ಕೆಲಸದಲ್ಲಿ ಮಾಧವರಾಯನಿಗೆ ನೆರವಾಗಲೆಂದು, ಚಂದ್ರಯ್ಯನೂ ಅಮರಾಪುರಕ್ಕೆ ಈ ಕೆಲಸ ಮುಗಿಸಿಕೊಂಡು ಬರುವುದಾಗಿ ತನ್ನ ಮನೆಗೆ ಚೀಟಿ, ಅವನ ಮನವಾರೆ ಖರ್ಚಿಗಾಗಿ ಅಷ್ಟು ಹಣ ಕಳಿಸಿ, ನಾಗರವಳ್ಳಿ ಯಲ್ಲಿಯೇ ನಿಂತ.

ಮಾರನೆಯ ದಿನದಿಂದಲೇ, ಮದುವೆಯ ಸಿದ್ಧತೆಯ ಸಡಗರದಿಂದ ಚದುರಂಗದಾಟದ ಉತ್ಸವಕ್ಕೆ ಸಿದ್ಧತೆಗಳು ನಡೆದವು.

ಆಟವನ್ನು ನೋಡಲು ನೂರಾರು ಜನ ಕಲೆಯಬಹುದೆಂಬ ನಿರೀಕ್ಷೆ ಯಿದ್ದುದರಿಂದ, ಮನೆಯಲ್ಲಿ ಏರ್ಪಡಿಸಿದರೆ ಬಹು ಜನಕ್ಕೆ ನಿರಾಶೆಯಾಗ ಬಹುದು ಎಂದು, ಗ್ರಾಮದ ಹಿರಿಯರ ಒಪ್ಪಿಗೆ ಪಡೆದು, ಶಂಕರ ನಾರಾಯಣಸ್ವಾಮಿ ದೇವಾಲಯದ ಮುಂದಿನ ವಿಶಾಲವಾದ ತೋಪಿನ ಬಯಲಿನಲ್ಲೇ ಚದುರಂಗದಾಟದ ಚಪ್ಪರಹಾಕಿಸುವುದೆಂದು ಮಾಧವರಾಯ ತೀರ್ಮಾನಿಸಿದ. ಒಬ್ಬರು ನಿಷ್ಠುರ ಸಂಪ್ರದಾಯವಾದಿಗಳು, ದೇವಾ

ಲಯದ ಇದುರಿನಲ್ಲಿ ಇವೆಲ್ಲಾ ಏಕೆ ಎಂದು ಆಕ್ಷೇಪಿಸಿದರೂ, ನಾಗರವಳ್ಳಿಯ ಇತಿಹಾಸದಲ್ಲೇ ' ನ ಭೂತೋ ನ ಭವಿಷ್ಯತಿ ' ಯಾದ ಈ ಕಾರ್ಯ ದೇವರ ಸನ್ನಿಧಿಯಲ್ಲೇ ನಡೆಯುವುದು ಸೂಕ್ತವೆಂದು ವಾದಿಸಿ, ಬಹು ಜನ, ದೇವಾಲಯದ ಇದುರಿನಲ್ಲೇ ಚಪ್ಪರ ಹಾಕಿಸಲು ಒಪ್ಪಿದರು.

ತನ್ನ ಕಾರ್ಯಕ್ಕೆ ಗ್ರಾಮದ ಹಿರಿಯರ ಸಮ್ಮತಿ ದೊರಕಿದ ಬಳಿಕ, ಮಾಧವರಾಯ ಚಪ್ಪರ ನಿರ್ಮಾಣದಲ್ಲಿ ಕುಶಲರಾದವರನ್ನು ಕರೆಸಿ, ಅವರಿಗೆ ತನ್ನ ಉದ್ದೇಶವನ್ನು ವಿವರಿಸಿ ಹೇಳಿ, ಚಪ್ಪರದ ವಿಸ್ತೀರ್ಣ ಎಷ್ಟಿರಬೇಕು ಎಂದು ತೀರ್ಮಾನಿಸಿದ. ಚಪ್ಪರ ಸುಮಾರು ಇನ್ನೂರು ಮೊಳ ಚಚ್ಚೌಕವಾಗಿರಬೇಕೆಂದೂ, ಆ ಚಪ್ಪರದ ಮಧ್ಯಭಾಗದಲ್ಲಿ, ಸುತ್ತ ಕುಳಿತವರೆಲ್ಲರಿಗೂ ಕಾಣುವಂತೆ, ಎರಡು ಮೊಳ ಎತ್ತರ, ಅರವತ್ತು ಮೊಳ ಉದ್ದ, ಅರವತ್ತು ಮೊಳ ಅಗಲದ ಚದುರಂಗದಾಟದ ವೇದಿಕೆಯನ್ನು ನಿರ್ಮಾಣ ಮಾಡಬೇಕೆಂದೂ ತೀರ್ಮಾನವಾಗಿ, ಒಂದು ಒಳ್ಳೆಯ ದಿನ ಶುಭ ಮುಹೂರ್ತದಲ್ಲಿ 'ಗುದ್ದಲಿಪೂಜೆ' ನಡೆದು ಮಣ್ಣುಗೆಲಸದ ವಡ್ಡರು, ಚಪ್ಪರ ನಿರ್ಮಾಣದ ಜಾಗವನ್ನು ಏರುತಗ್ಗು ಇಲ್ಲದಂತೆ ಸರಿಪಡಿಸತೊಡಗಿದರು.

ಆ ಕಾರ್ಯ ಆರಂಭವಾಗುತ್ತಿದ್ದ ಹಾಗೇ, ಮಾಧವರಾಯನಿಗೆ ಅನಿರೀಕ್ಷಿತವಾಗಿ, ಅನಪೇಕ್ಷಿತವಾಗಿ ಬಗೆಬಗೆಯ ಸಹಾಯದ ಭರವಸೆಗಳು ಬರತೊಡಗಿದವು.

ಉತ್ಸವದ ಸಕಲ ವೆಚ್ಚವನ್ನೂ ತಾನೊಬ್ಬನೇ ಭರಿಸಲು ಮಾಧವರಾಯ ನಿರ್ಧರಿಸಿದ್ದ. ಸಾವಿರಾರು ಜನಕ್ಕೆ ನೇತ್ರೋತ್ಸವವಾಗಿ, ನಾಗರವಳ್ಳಿಯ ಹೆಸರನ್ನು ಚಿರಕಾಲ ವ್ಯಾಪಿಸುವಂತೆ ಮಾಡುವ ಈ ಕೆಲಸದ ಭಾರವನ್ನು ಸಂಪೂರ್ಣವಾಗಿ ಆತನ ಮೇಲೇ ಬಿಡುವುದು ನ್ಯಾಯವಲ್ಲವೆಂಬ ಕಾರಣದಿಂದ ಆ ಕಾರ್ಯದಲ್ಲಿ ತಾವೂ ತಮ್ಮಿಂದ ಆದಷ್ಟು ಮಟ್ಟಿಗೆ ಸಹಕರಿಸಬೇಕೆಂದು, ಗ್ರಾಮದ ಹಿರಿಯರೆಲ್ಲರೂ, ತಾವಾಗಿಯೇ ದೇವಾಲಯದಲ್ಲಿ ಸಭೆ ಸೇರಿ ನಿರ್ಧರಿಸಿದರು.

ಆ ನಿರ್ಧಾರದಂತೆ, ಒಂದು ಸೋಮವಾರದ ದಿನ ನಲವತ್ತು-ಐವತ್ತು ಮಂದಿ ರೈತರು. ಗಾಡಿಗಳನ್ನು ಕಟ್ಟಿಕೊಂಡು ಕಾಡಿಗೆ ಹೋಗಿ, ಚಪ್ಪರ ಕಟ್ಟಲು ಬೇಕಾದ ಬೊಂಬು, ಗಳಗಳನ್ನು ಕಾಡಿನಿಂದ ಕಡಿದು ತಂದು,

ದೇವಾಲಯದ ಮುಂದೆ ರಾಶಿಯಾಗಿ ಒಟ್ಟಿದರು. ನಾಗರವಳ್ಳಿಯಲ್ಲಿ ಅಷ್ಟೇ ಅಲ್ಲ, ಸುತ್ತ ಮುತ್ತಲ ಹಳ್ಳಿಗಳಲ್ಲೂ ತೋಟಗಳಿದ್ದವರು, ಚಪ್ಪರಕ್ಕೆ ಬೇಕಾಗುವಷ್ಟು ತೆಂಗಿನ ಗರಿ, ಅಡಿಕೆಯ ಕಂಭ, ಅಲಂಕಾರಕ್ಕೆ ಬೇಕಾದ ಬಾಳೆಯ ಕಂದು, ಅಡಿಕೆಯ ಸಿಂಗಾರಗಳನ್ನು ಉಚಿತವಾಗಿ, ತಾವೇ ತಂದು ಒದಗಿಸಿದರು.

ಚಪ್ಪರದ ಮೇಲುಭಾಗಕ್ಕೆ ಕಟ್ಟಲು ಬೇಕಾದ ಗುಡಾರಗಳನ್ನು ಒಂದು ಹಳ್ಳಿಯವರು ಒದಗಿಸಿದರೆ, ಮತ್ತೊಂದು ಹಳ್ಳಿಯವರು ಚಪ್ಪರದ ಪಕ್ಕಗಳನ್ನು ಅಲಂಕರಿಸಲು, ತಮ್ಮ ಸುತ್ತಮುತ್ತಲ ಹಳ್ಳಿಗಳಲ್ಲಿದ್ದ ನಾಟಕದ ಪರದೆಗಳನ್ನೆಲ್ಲಾ ಸಂಗ್ರಹಿಸಿ, ನಾಗರವಳ್ಳಿಗೆ ತಂದು ರಾಶಿ ಹಾಕಿದರು.

ಶ್ರೀಮಂತರಾದವರ ಮನೆಗಳಲ್ಲಿದ್ದ 'ಗುಳೋಪು' ಗಳು ಮಣಿ ಚಪ್ಪರಗಳು, ತೂಗುದೀಪಗಳ ಗೊಂಚಲುಗಳು, ಸುಂದರವಾದ ಆಸನಗಳು, ಅಲಂಕಾರ ಸಾಮಗ್ರಿಗಳು, ರಾಶಿ ರಾಶಿಯಾಗಿ ಬಂದು, ಯಾವುದು ಯಾರ ಸಾಮಾನು, ಎಷ್ಟು ಸಾಮಾನು ಬಂದಿದೆ ಎಂಬುದನ್ನು ಲೆಕ್ಕ ಇಡುವುದೇ ಇಬ್ಬರು ಮೂವರಿಗೆ ಕೆಲಸವಾಯಿತು.

ಒಂದು ಕಡೆ ಈ ಕೆಲಸ ನಡೆದಿದ್ದರೆ, ಮತ್ತೊಂದು ಕಡೆ ಬಂದು ಹೋಗುವವರ, ಅತಿಥಿ ಅಭ್ಯಾಗತರ ಊಟೋಪಚಾರಕ್ಕೆ ಬೇಕಾದ ಸಾಮಗ್ರಿಗಳನ್ನು ಹೊಂದಿಸುವ ಸಲುವಾಗಿ ಕೆಲಸ ನಡೆದಿತ್ತು.

ನೂರಾರು ಜನಕ್ಕೆ ಬೇಕಾಗುವಷ್ಟು ಅಕ್ಕಿ, ಬೇಳೆ, ಗೋಧಿ, ಬೆಲ್ಲ ಮೊದಲಾದ ಆಹಾರಗಳನ್ನು ಎರಡು ಮನೆಗಳಲ್ಲಿ ತುಂಬಲಾಗಿತ್ತು. ಹಾಲ್ಕು ಮೊಸರಿಗೆ ಅನಾನುಕೂಲವಾಗದಿರಲೆಂದು, ಸುತ್ತ ಮುತ್ತಲ ಹಳ್ಳಿಗಳಲ್ಲೇ ಚೆನ್ನಾಗಿ ಕರೆಯುವ ರಾಸುಗಳೆಂದು ಹೆಸರಾದ ಐವತ್ತು-ಅರವತ್ತು ಎಮ್ಮೆ, ಹಸುಗಳನ್ನು ಕರೆತರಿಸಿ, ಹೊಳೆಯ ದಂಡೆಯಲ್ಲಿ ಅವುಗಳಿಗೆಂದು ಪ್ರತ್ಯೇಕವಾದ ಗೋಶಾಲೆಯೊಂದನ್ನೇ ನಿರ್ಮಿಸಿ, ಅಲ್ಲೇ ಅದನ್ನು ಮೇಯಿಸುವವರು, ನೀರು-ನಿಡಿ ಕೊಡುವವರು, ಕಾವಲು ಕಾಯುವವರಿಗೆ ಇರಲು ವ್ಯವಸ್ಥೆ ಮಾಡಲಾಗಿತ್ತು.

ಪಟ್ಟಣದಿಂದ ಬರಲಿದ್ದ ಹುಡುಗಿಯರು, ಅವರ ಪರಿವಾರಗಳು ಇಳಿದುಕೊಳ್ಳಲು, ನಾಲ್ಕಾರು ಮನೆಗಳನ್ನು ತೆರವು ಮಾಡಿಸಿ, ಅದಕ್ಕೆ ಸುಣ್ಣ

ಯಾವುದೇ ಒಂದು ಸಣ್ಣ ಅಗತ್ಯಕ್ಕೂ ಕೊರತೆಯಾಗಿ 'ಇದೆಂಥ ಕೊಂಪೆಗೆ ಬಂದೆವು' ಎಂದು ಬೇಸರಪಟ್ಟುಕೊಳ್ಳದಿರುವಂತೆ, ಅವರಿಗೆ ಬೇಕಾದ ವಸ್ತುಗಳೆಲ್ಲವನ್ನೂ ಸಂಗ್ರಹಿಸಿ, ಅವನ್ನು ಆ ಮನೆಗಳಲ್ಲಿ ಓರಣವಾಗಿ ಜೋಡಿಸಿ ಇಡಲಾಯಿತು.

ಒಂದೊಂದು ಕೆಲಸಕ್ಕೆ ನಾಲ್ಕು ನಾಲ್ಕು ಜನದಂತೆ ನಿಂತು ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು.

ಕೂಲಿಯ ಕೆಲಸದವರು, ಖುಷಿಗೆ ಕೆಲಸಕ್ಕೆ ಬಂದವರು, ಹೀಗೆ ಬಗೆಬಗೆಯ ಜನ ಸೇರಿ, ನೂರಾರು ಜನ ಹಗಲೂ ಇರುಳೂ ದುಡಿದು ಚಪ್ಪರವನ್ನು ಕಟ್ಟುತ್ತಿದ್ದರು.

ಕೆಲಸ ನಡೆಯುತ್ತಿದ್ದ ರೀತಿಯನ್ನು ನೋಡಿ ಮಾಧರಾಯನಿಗೆ ತನ್ನ ಕಣ್ಣನ್ನೇ ತಾನು ನಂಬದಂತಾಗಿದ್ದರೆ, ಇವೆಲ್ಲಕ್ಕೂ ಮೂಲಭೂತ ಕಾರಣನಾದ ಚಂದ್ರಯ್ಯನಂತೂ ಸ್ವಪ್ನ ಲೋಕದಲ್ಲಿದ್ದವನಂತಿದ್ದ. ಯಾವುದೇ ಕೆಲಸ ಮಾಡುತ್ತಿದ್ದರೂ, ಗಳಿಗೆಗೊಮ್ಮೆ ಅವನ ಮೈ ರೋಮ ನಿಮಿರಿ ಕಣ್ಣಲ್ಲಿ ಕಂಬನಿ ಹರಿಯುತ್ತಿತ್ತು. ದಿನಕ್ಕೆ ಎಷ್ಟು ಬಾರಿ ಚಂದ್ರಯ್ಯ—

"ಎಷ್ಟು ಜನ್ಮದಲ್ಲಿ ಮಗನಾಗಿ ಹುಟ್ಟಿ ನಿಮ್ಮ ಈ ಋಣ ತೀರಿಸಬೇಕೋ"

—ಎಂದು ಹೇಳುತ್ತಿದ್ದನೆಂಬುದು, ಅವನಿಗಾಗಲೀ, ಮಾಧವರಾಯನಿಗಾಗಲೀ ಲೆಕ್ಕವಿರಲಿಲ್ಲ.

ಬರೀ ಮಾತುಗಳದೇನು! ಊಟ, ತಿಂಡಿ, ನಿದ್ರೆ ಯಾವುದರ ಪರಿವೆಯೂ ಇಲ್ಲದೆ, ಮಹದ್ವೇಗದಿಂದ ಸುತ್ತುವ 'ರಾಟಿಲೆ' ಗೆ ಸಿಲುಕಿದ ಗೊಂಬೆಗಳಂತೆ ಅವರಿಬ್ಬರೂ ಸುತ್ತುತ್ತಿದ್ದರು;

ಅವರಿಗೆ ಆ ಕೆಲಸವಾದರೆ, ಮನೆಯಲ್ಲಿ ಶಂಕರಮ್ಮನಿಗೂ ಒಂದು ಗಳಿಗೆಯ ಬಿಡುವಿರಲಿಲ್ಲ.

ಚಪ್ಪರದ ಕೆಲಸ ಆರಂಭವಾದ ದಿನದಿಂದ ಶಂಕರಮ್ಮ ಅಡಿಗೆಯ ಮನೆಯ ಗಾಣಕ್ಕೆ ಕಟ್ಟಿದ ಎತ್ತಾಗಿದ್ದಳು. ನೂರಾರು ಜನಕ್ಕೆ ಊಟ, ತಿಂಡಿ, ಹಾಲು ಪಾನಕ, ಕಸ ಮುಸರೆ, ಸಾಮಾನು ತರಿಸುವುದು, ತೆಗೆದು ಕೊಡುವುದು—ಈ ಸಾಲುಗೆಲಸದಲ್ಲಿ, ಹತ್ತು ಜನ ನೆರೆ ಹೊರೆಯವರು

ನೆರವಾದರೂ, ಆಕೆಗೆ ನಿದ್ರೆಗಿರಲಿ, ಒಂದು ಗಳಿಗೆ ಉಸಿರು ತಿರುಗಿಸಿ ಕೊಳ್ಳಲೂ ಕೂಡಾ ಬಿಡುವಿರಲಿಲ್ಲ.

ಆಕೆ ಯಂತ್ರದ ಹಾಗೆ ದುಡಿಯುವುದನ್ನು ಕಂಡು, ಪುರೋಹಿತ ಶ್ರೀಕಂಠ ಜೋಯಿಸರ ತಾಯಿ ಸುಭದ್ರಮ್ಮ—

"ಇದೇನೇ ಶಂಕರಮ್ಮ, ಹೀಗೆ ದುಡಿದರೆ ಮೈ ಏತಕ್ಕೆ ಬಂದೀತು. ನಿನ್ನ ಗಂಡ ಇಷ್ಟು ಖರ್ಚುಮಾಡ್ತಾ ಇದಾನೆ. ದುಡ್ಡು ಹೊಳೆನೀರಿಗಿಂತ ಅಗ್ಗವಾಗಿ ಹೋಗಿದೆ. ಹಾಗಿರೋವಾಗ ಆತನಿಗೆ ಹೇಳಿ ಎಲ್ಲಿಂದಾದರೂ ಒಂದು ಹತ್ತು ಜನ ಅಡಿಗೆಯವರನ್ನ ಕರೆಸಿಕೊಂಡು, ನೀನು ಮೇಲುಸ್ತುವಾರಿ ನೋಡಿ ಕೊಳ್ಳೋದು ಬಿಟ್ಟು, ಎಲ್ಲಾದಕ್ಕೂ ನೀನೇ ನೀಸಿದರೆ ಹೇಗೆ? ಇದೆಲ್ಲಾ ಸರೀಗಿಲ್ಲ ಬಿಡು, ಈ ಮಾತ್ನ ಗಂಡನ ಎದುರಿಗೆ ಹೇಳೋಕೆ ನಿನಗೆ ಸಂಕೋಚವಾದರೆ ಬಿಡು, ನಾನೇ ಹೇಳ್ತೀನಿ—'ಏನಪ್ಪಾ ಮಾಧವರಾಯ ನೀನೇನು ಊರಿಗೆ ಚಪ್ಪರ ಕಟ್ಟಿಸ್ತಿದೀಯೋ, ನಿನ್ನ ಹೆಂಡತಿಗೆ ಚಟ್ಟ ಕಟ್ಟಿಸ್ತಿದೀಯೋ ಅಂತ"

—ಎಂದು ಹೇಳಿದಾಗ, ಶಂಕರಮ್ಮನೇ—

"ಸದ್ಯ ನಿಮ್ಮ ಪುಣ್ಯ, ಅವರ ಮುಂದೆ ಈ ಮಾತಾಡೋದಿರಲಿ, ಅಪ್ಪಿ ತಪ್ಪಿ ಇನ್ನೊಬ್ಬರ ಮುಂದಾದರೂ ಆಡೀರ. ಧರ್ಮರಾಯರಂಥ ಗಂಡ! ಅವರು ನನಗೆ ಯಾವತ್ತು—ಯಾವುದಕ್ಕೆ ಕಡಮೆ ಮಾಡಿದಾರೆ. ಜೀವಮಾನ ದಲ್ಲಿ ಒಂದು ಸಲ ಆದ್ರೂ ಅವರ ಮನಸ್ಸು ಒಪ್ಪೋ ಹಾಗೆ ದುಡಿದು, ಅವರ ಕೈ ಹಿಡಿದದ್ದು ಸಾರ್ಥಕ ಮಾಡಿಕೋತೀನಿ. ನಾಲ್ಕು ದಿನ ದುಡಿತ, ಆ ಮೇಲಿದ್ದೇ ಇದೆ, ಹಾಯಾಗಿ ಕಾಲು ಚಾಚಿಕೊಂಡು ಮಲಗೋದು."

—ಎಂದು ಹೇಳಿ ಆಕೆಯ ಬಾಯಿ ಮುಚ್ಚಿಸಿದ್ದಳು.

"ನೀನಿಂಥ ಧರ್ಮಗೊಡ್ಡಾಗಿರೋ ಹೊತ್ತಿಗೇ ನಿನ್ನ ಗಂಡ ಮನೇನ ಛತ್ರ ಮಾಡಿರೋದು. ಚೆನ್ನಾಗಿ ಸೇರಿದೀರ ನೀವಿಬ್ಬರೂ. ನಿನ್ನ ಗಂಡನಿಗೆ ಆಕಾಶಕ್ಕೆ ಹೊದಿಕೆ ಹೊದಿಸೋ ರೋಗ, ನೀನೋ ನಾಲಿಗೆ ಸನ್ಯಾಸಿ. ಇಬ್ಬರೂ ಹೀಗಾದ್ರೆ ಈ ಸಂಸಾರನ ದೇವರೇ ಕಾಪಾಡಬೇಕು. ಇಷ್ಟಕ್ಕೂ ನಾನ್ಯಾಕೆ ಮಾತಾಡಿ ಕೆಟ್ಟೋಳಾಗಲಿ. ನಾಳೆ ಮಕ್ಕಳು ಮರಿ ಅಂತಾಗಿ, ತಲೆ ತಾಕಿದಾಗ ನಿಮಗೇ ಬುದ್ಧಿ ಬರುತ್ತೆ. ಏನಾದ್ರೂ, ಹೀಗೆ ಗಂಡಸರು

ಹೋದ ಹಾಗೆ ಹೋಗ್ಲಿ ಅಂತ ಹರೀ ಬಿಡೋದು ಒಳ್ಳೇದಲ್ಲ. ಆ ಸೂಕ್ಷ್ಮ ನೀನು ತಿಳುಕೊಂಡಿರೋದು ಒಳ್ಳೇದು."

—ಎಂದು ಹೇಳಿ ಸುಭದ್ರಮ್ಮ ತನ್ನ ಹಿತೋಪದೇಶ ಮುಗಿಸಿದ್ದಳು, ಶಂಕರಮ್ಮನ ಬುದ್ಧಿಯನ್ನು ತನ್ನ ದಾರಿಗೆ ತಿದ್ದಿ ಕೊಳ್ಳಲಾಗದೆ.

ಸುಭದ್ರಮ್ಮ ಬಾಯಿಬಿಟ್ಟು ಆಡಿದ ಮಾತನ್ನ ಎಷ್ಟೋ ಜನ ಹೆಂಗಸರು ತಮ್ಮ ತಮ್ಮಲ್ಲೇ ಎಷ್ಟೋ ಸಲ ಆಡಿಕೊಂಡಿದ್ದರು—

"ಶಂಕರಮ್ಮನಾದರೂ ಬಿಗಿಮಾಡದೆ ಹೋದರೆ, ಈ ಸಂಸಾರ ಬಹಳ ದಿನ ನಡಿಯೋದಿಲ್ಲ"

ಸಂಸಾರದ ಬಗ್ಗೆ ಯಾರುತಾನೆ ಏನು ಆಡಿಕೊಂಡರೂ, ಶಂಕರಮ್ಮನ ಬಗ್ಗೆ ಮಾತ್ರ ಯಾರಿಗೂ ಭಿನ್ನಾಭಿಪ್ರಾಯವಿರಲಿಲ್ಲ, ಎಲ್ಲರ ದೃಷ್ಟಿಯಲ್ಲೂ ಆಕೆ—

"ದೇವರಂಥ ಹೆಂಗಸು ; ಅವಳ ಪುಣ್ಯಾನೇ ಅವಳ ಆ ಸಂಸಾರಾನ ಹೀಗೆ ನಡಸ್ತಾ ಇದೆ. ಆಕೆ ಯಾವತ್ತಾದ್ರೂ 'ಟೊಕ್' ಅಂದ್ರೆ ಅವತ್ತು ಮಾಧವರಾಯನ ಬದುಕು ಬಟಾಬಯಲಾಗುತ್ತೆ."

ಇಂಥ ಮಾತು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ತನ್ನ ಕಿವಿಗೆ ಬಿದ್ದಾಗ, ಒಮ್ಮೊಮ್ಮೆ ಶಂಕರಮ್ಮನಿಗೂ ಭಯವಾಗಿ, ತನ್ನ ಗಂಡನಿಗೆ ಬುದ್ಧಿವಾದ ಹೇಳಬೇಕು ಎನಿಸುತ್ತಿತ್ತು. ಆದರೆ ಮರುಗಳಿಗೆಯೇ—

"ಈ ಸಂಸಾರದಲ್ಲಿ ನನ್ನದು ಅನ್ನುವುದಕ್ಕೆ ಒಂದು ಒಡಕುಪಾತ್ರೆಯೂ ಇಲ್ಲ. ಏನೂ ಇಲ್ಲದೆ ನಿರ್ಗತಿಕಳಾಗಿ, ವಯಸ್ಸಿಗೆ ಬಂದಾಗ ಮದುವೆಯೂ ಇಲ್ಲದೆ ಕಣ್ಣು ಕಟ್ಟಿಸಿಕೊಂಡು ಕಾಡಿಗೆ ಹೋಗಬೇಕಾಗಿದ್ದಂಥ ನಿರ್ಭಾಗ್ಯೆಯನ್ನು ಕೈ ಹಿಡಿದು, ನಾಲ್ಕು ಜನರ ಕಣ್ಣಲ್ಲಿ ನನ್ನನ್ನೂ ಒಬ್ಬ ಹೆಣ್ಣಾಗಿ ಮಾಡಿದರು ಮಹಾರಾಯರು. ಈಗತಾನೇ ಅವರು ನನಗೆ ಯಾವುದಕ್ಕೂ ಕಡಿಮೆ ಮಾಡಿದ್ದಾರೆ ? ದುಡಿದು ಹಾಕೋಕೆ ಅವರು ಗಟ್ಟಿಯಾಗಿರೋವಾಗ ಹೆಣ್ಣಾಗಿ ಹುಟ್ಟಿ, ಅವರು ತಂದುಹಾಕಿದ್ದನ್ನು ಮಾಡಿಹಾಕಲು ಅಳಲೇ ? ಅವರು ದುಡಿದದ್ದನ್ನು ಅವರು ಖರ್ಚು ಮಾಡೋಕೆ ಅಡ್ಡಿಯಾಗಿ ಆ ಪಾಪ ಕಟ್ಟಿಕೊಳ್ಳಲೇ ? ನನಗೇಕೆ ಆ ಕರ್ಮ ?"

—ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡು ಸುಮ್ಮನಾಗಿದ್ದಳು.

ಆಕೆಯ ಅದೇ ಬುದ್ಧಿಯೇ ಈ ಬಾರಿಯೂ ಮಾಧವರಾಯ ಚಂದ್ರಯ್ಯನ ಚಪಲಕ್ಕೆ ತನ್ನ ಚಪಲವನ್ನು ಜೋಡುಕುದುರೆಯಾಗಿ

"ಶಂಕರಿ, ಹೀಗೆ ಮಾಡಬೇಕೂಂತ ಇದೀನಿ."

—ಎಂದಾಗ

"ಹೊಳೆ ನೀರಿಗೆ ದೊಣೆನಾಯಕನ ಅಪ್ಪಣೆಯೇ? ನಿಮಗೆ ಹೇಗೆ ಬೇಕೋ ಹಾಗೆ ಮಾಡಿ."

— ಎಂದು ಹೇಳುವಂತೆ ಮಾಡಿತ್ತು.

"ಇದರಿಂದ ನಿನಗೆ ತುಂಬಾ ಕಷ್ಟವಾಗುತ್ತೇನೋ?"

—ಎಂದು ಮಾಧವರಾಯ ಹೇಳಿದಾಗ—

''ನೀವು ನಿಮ್ಮ ಸಂತೋಷಕ್ಕಾಗಿ ಮಾಡೋ ಕೆಲಸ ನನಗೆ ಯಾವತ್ತೂ ಕಷ್ಟಾಂತ ಕಾಣಿಸೊಲ್ಲ. ನಾನು ಕಷ್ಟಪಡೋದು ತಾನೇ ಏನಿದೆ? ಹತ್ತು ಜನಕ್ಕೆ ಅಡಿಗೆ ಮಾಡೋ ಕೈಲಿ ಇನ್ನೂ ನೂರು ಜನಕ್ಕೆ ಮಾಡಿ ಬಡಿಸೋದುತಾನೇ. ಆ ಕೆಲಸಾನ ಕಷ್ಟ ಅಂದರೆ ನಾನು ಹೆಂಗಸಾಗಿ ಹುಟ್ಟಿದ್ದಕ್ಕೆ ಏನು ಸಾರ್ಥಕ?''

—ಎಂದು ಹೇಳಿ ಮಾಧವರಾಯನ ಕುಣಿಯುವ ಕಾಲಿಗೆ ಗೆಜ್ಜೆ ಕಟ್ಟಿನಂತೆ ಮಾಡಿತ್ತು.

ಗಂಡನಿಗೆ ಕೊಟ್ಟ ಆ ಮಾತನ್ನು ಉಳಿಸಿಕೊಳ್ಳುವ ಸಲುವಾಗಿ, ಶಂಕರಮ್ಮ ಅಡಿಗೆಯ ಮನೆಯಲ್ಲಿ ಬೇಯುತ್ತಲೇ ಸಾಯಲೂ ಸಿದ್ಧವಾಗಿದ್ದಳು.

ಆಕೆಯಲ್ಲಿ ಆ ನಿಷ್ಠೆ ಇತ್ತು ಎಂತಲೇ ಯಾರಾದರೂ ಬರಲಿ, ಎಷ್ಟು ಜನವಾದರೂ ಬರಲಿ, ಅಡಿಗೆ ಮನೆಯ ಯೋಚನೆಯಿಲ್ಲದೆ, ಮಾಧವರಾಯನ ಛತ್ರ ನಿರಾತಂಕವಾಗಿ ನಡೆದಿತ್ತು.

ಹೀಗೆ—

ನೂರಾರು ಜನರ ಉತ್ಸಾಹ, ಸಹಕಾರ, ಶ್ರಮಗಳ ಫಲವಾಗಿ ಹದಿನೈದು ದಿನಗಳಲ್ಲಿ ಚದುರಂಗದ ಚಪ್ಪರ ಸುಂದರವಾಗಿ, ಬೃಹದಾಕಾರವಾಗಿ ನಿರ್ಮಿತವಾಗಿ ನಿಂತಿತು.

ಮುಖ್ಯವಾದ ಕೆಲಸಗಳೆಲ್ಲವೂ ಮುಗಿದು, ಓರೆ ಕೋರೆಗಳನ್ನು ತಿದ್ದಿ

ಹಸರುವಾಣಿಯ ಅಲಂಕಾರ ಮಾಡುವ ಕಾರ್ಯವಷ್ಟು ಮಿಕ್ಕು ಅದೂ ಇನ್ನೆರಡು ದಿನಗಳಲ್ಲಿ ಮುಗಿದುಹೋಗುತ್ತದೆ ಎಂದು ಮನಸ್ಸಿಗೆ ಖಚಿತವಾದ ಬಳಿಕ,ಶ್ರೀರಂಗಪಟ್ಟಣದ ಜನಕ್ಕೆ ಇಂಥ ದಿನ ಹೊರಟು ಬರಬೇಕು ಎಂದು ಮಾಧವರಾಯ ಓಲೆ ಕಳಿಸಿದ.

೬

ಅತ್ತ ನಾಗದವಳ್ಳಿಯಲ್ಲಿ ಮಾಧವರಾಯ ಚದುರಂಗದಾಟದ ಉತ್ಸವಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಂತೆಯೇ, ಇತ್ತ ಗಂಜಾಂನಲ್ಲಿ ನಾಗರತ್ನಳೂ ತಾನು ಒಪ್ಪಿಕೊಂಡ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸಲು ಬೇಕಾದ ಸಿದ್ಧತೆಗಳಲ್ಲಿ ತೊಡಗಿದ್ದಳು.

ಚಂದ್ರಯ್ಯನ ಮೂಲಕ ಬಂದ ಮಾಧವರಾಯನ ಆಹ್ವಾನ ಅವಳ ಪಾಲಿಗೆ ಒಂದು ರೀತಿಯ ಸವಾಲಿನಂತಾಗಿತ್ತು.

ಹಿಂದೆ ಎಂದೂ ಅವಳ ಜೀವನದಲ್ಲಿ ಇಂಥ ಪ್ರಸಂಗ ಒದಗಿ ಬಂದಿರಲಿಲ್ಲ

ಆಕೆ ಎಷ್ಟೋ ಮದುವೆಗಳಿಗೆ, ಹಬ್ಬಹರಿದಿನಗಳಿಗೆ, ವಿಶೇಷ ಉತ್ಸವಗಳಿಗೆ ನರ್ತಕಿಯರನ್ನು ಕೂಡಿಸಿ ಕಳಿಸಿದ್ದಳು. ಅಂಥ ಸಂದರ್ಭಗಳಲ್ಲಿ ಬಗೆಬಗೆಯ, ಭಿನ್ನ ಅಭಿರುಚಿಯ ರಸಿಕರನ್ನು ತಣಿಸಿ, ಅವರಿಂದ ಶಹಭಾಸುಗಿರಿಯನ್ನೂ ಉಡುಗೊರೆಗಳನ್ನೂ ಪಡೆದಿದ್ದಳು. ಆಕೆಯ ಮನೆ ರಸಿಕರು, ಕಲಾಭಿಮಾನಿಗಳ ಪಾಲಿಗೆ ತೃಪ್ತಿಯ ಭರವಸೆಯಾಗಿತ್ತು.

ಆದರೆ ಆಕೆ ಅವಳ ನಲವತ್ತೈದು—ಐವತ್ತು ವರ್ಷಗಳ ಜೀವನದಲ್ಲಿ ಎಷ್ಟೋ ಬಗೆಯ ಪ್ರಸಂಗಗಳನ್ನು ಎದುರಿಸಿ ಯಶಸ್ವಿಯಾಗಿ ಪಾರಾಗಿದ್ದರೂ, ಇಂಥ ಪ್ರಸಂಗ ಮಾತ್ರ ಅವಳ ಜೀವನದಲ್ಲಿಯೇ ಎಂದೂ ಬಂದಿರಲಿಲ್ಲ.

ಚದುರಂಗದಾಟಕ್ಕೆ ಮೂವತ್ತೆರಡು ಜನ ಸಮಪ್ರಾಯ, ಸಮರೂಪದ ಹುಡುಗಿಯರನ್ನು ಕೂಡಿಸುವುದು ಷಹರ್‌ಗಂಜಾಂನ ಅತ್ಯಂತ ಪ್ರಖ್ಯಾತ ವೇಶ್ಯೆಯರ ಮನೆಗೆ ಸೇರಿದ ಆ ವೃತ್ತಿಯ ಜನರಲ್ಲಿ ಪ್ರಭಾವಶಾಲಿಯಾದ ನಾಗರತ್ನಳಿಗೂ ಸುಲಭವಾದ ಕೆಲಸವಾಗಿರಲಿಲ್ಲ. ನೂರಾರು ವೇಶ್ಯಾಗೃಹಗಳಿದ್ದ ಷಹರ್‌ಗಂಜಾಂ ಎಲ್ಲಾ ಜಾಲಾಡಿದರೂ ಅವಳ ಮನಸ್ಸಿಗೆ

ಒಪ್ಪಿಗೆಯಾಗುವಂಥ ಹುಡುಗಿಯರು ಹದಿನೈದಕ್ಕಿಂತ ಹೆಚ್ಚಾಗಿ ಸಿಗಲಿಲ್ಲ. ಹಾಗಾಗಿ ಆಕೆ, ತನ್ನ ಕಡೆಯ ಜನರನ್ನು ಮದ್ದೂರು, ಮಳವಳ್ಳಿ, ಮೂಗೂರು, ನಾಗಮಂಗಲ, ತಲಕಾಡು, ತಿ ರು ಮ ಕೂ ಡ ಲು— ಹೀಗೆ ಹತ್ತಾರು ಊರುಗಳಲ್ಲಿ ಓಡಾಡಿಸಿ, ಸಂಪೂರ್ಣ ತೃಪ್ತಿಯಾಗದಿದ್ದರೂ, ಅವರಿಗಿಂತಲೂ ಉತ್ತಮರಾದವರು ಇನ್ನು ಸಿಗುವುದಿಲ್ಲ ಎಂದು ಖಚಿತವಾಗಿ ಗೊತ್ತಾದ ಬಳಿಕ, ಆ ಊರುಗಳಲ್ಲಿ ದೊರೆತ ಒಬ್ಬಿಬ್ಬರು ಹುಡುಗಿಯರನ್ನು ಕರೆಸಿಕೊಂಡು, ಮೂವತ್ತೆರಡು ಜನ ಹುಡುಗಿಯರನ್ನು ಕಲೆ ಹಾಕಿದ್ದಳು.

ಆ ಸಂದರ್ಭದಲ್ಲಿ ಅವಳು ಯಾರ ಮನೆಗೆ ಹೋಗಲಿ, ಎಲ್ಲರೂ ಕೇಳುತ್ತಿದ್ದ ಮಾತು ಒಂದೇ—

"ಹಾಡಿಲ್ಲ, ಕುಣಿತ ಇಲ್ಲ. ಅಲ್ಹೋಗಿ ನಮ್ಮ ಹುಡುಗಿ ಮಾಡ ಬೇಕಾದ್ದೇನು? ಸುಮ್ನೆ ಗೊಂಬೆ ಹಂಗೆ ನಿಂತುಕೊಂಡು ಬರೋಕೆ, ಇಷ್ಟು ದೂರ ಹೋಗಬೇಕಾ? ಇದೇನು ಸೋಜಿಗ? ಆ ನಾಗರಪಳ್ಳಿ ಸಾಹುಕಾರ ನಿಗೆಲ್ಲೋ ತಲೆ ಕೆಟ್ಟದೆ ಅಂತ ಕಾಣ್ತದೆ."

ಅವರೆಲ್ಲರೂ ಬಾಯಿಬಿಟ್ಟು ಆಡುತ್ತಿದ್ದ ಮಾತೇ ನಾಗರತ್ನಳ ಮನ ದಲ್ಲಿಯೂ ಮಿಡಿಯುತ್ತಿತ್ತು.

ಎಷ್ಟೋ ಬಾರಿ, ಮಾಧವರಾಯನ ಈ ಹುಚ್ಚಿನಲ್ಲಿ ತಾನೂ ಪಾಲು ಗಾರಳಾಗಿ, ಸರೀಕರಲ್ಲಿ ನಗೆಪಾಟಲಿಗೆ ಗುರಿಯಾಗುವುದಕ್ಕಿಂತ "ಈ ಕೆಲಸ ನನ್ನಿಂದ ಆಗೊಲ್ಲ" ಎಂದು ಹೇಳಿ, ಕೈ ತೊಳೆದುಕೊಳ್ಳಬೇಕು ಎನಿಸು ತ್ತಿತ್ತು.

ಆದರೆ ಹಾಗೆನಿಸಿದಾಗಲೆಲ್ಲಾ ದಿನಕ್ಕೊನ್ನೆಯಾದರೂ ಅವಳು ಕದ್ದು ನೋಡುತ್ತಿದ್ದ ಅಮೂಲ್ಯವಾದ ಮುತ್ತಿನ ಮೂಗುತಿ, ಅವಳ ಕಣ್ಣನ್ನು ಕೋರೈಸಿ—

"ಏನಾದ್ರೂ ಆಗಲಿ, ಇಂಥ ಸಾಹುಕಾರರ ಸ್ನೇಹ ಆಗುವ ಅವಕಾಶ ಬಿಡಬಾರದು. ನಮ್ಮ ಅದೃಷ್ಟ ಚೆನ್ನಾಗಿದ್ರೆ ಇದು ಬಂಗಾರದ ಗಣಿ." ಎಂಬ ಭಾವನೆ ಮೂಡಿ, ಅವರಲ್ಲಿ ತನ್ನ ಉಳಿದ ಅಳುಕನ್ನೆಲ್ಲಾ ಮರೆತು, ಮುಂದಿನ ಸನ್ನಾಹದಲ್ಲಿ ತೊಡಗಿದ್ದಳು.

ಅಂತೂ ಮಾಧವರಾಯ ಅವಳ ಪಾಲಿಗೆ ಅತ್ಯಂತ ಜಟಿಲವಾದ ಸಮಸ್ಯೆಯನ್ನು ತಂದು ಒಡ್ಡಿದ್ದ.

ಆ ಜಟಿಲತೆಯೇ ಹೇಗಾದರೂ ಇದರಲ್ಲಿ ಗೆಲ್ಲಲೇ ಬೇಕು ಎಂಬ ಹುರುಪನ್ನು ನಾಗರತ್ನಳ ಹೃದಯದಲ್ಲಿ ಮೂಡಿಸಿತ್ತು.

"ಚದುರಂಗ ಕೇಸರಿ" ಎಂಬ ಬಿರುದು ಪಡೆದ ಶಾಮಯ್ಯಂಗಾರ‍್ಯರ ಶಾಶ್ವತ ಉಪಪತ್ನಿಯಾದ ನಾಗರತ್ನಳಿಗೆ ಅವರ ಸಹವಾಸದಲ್ಲಿ ಚದುರಂಗ ದಾಟದ ವಿಷಯ ಅಷ್ಟಿಷ್ಟು ತಿಳಿದಿತ್ತು. ಕಾಯಿ ಹೂಡುವುದು ಹೇಗೆ, ಯಾವ ಕಾಯಿಗಳು ಹೇಗೆ ನಡೆಯುತ್ತವ, ಒಂದೊಂದಕ್ಕೂ ಯಾವ ಮಾರ್ಗದಲ್ಲಿ ಎಷ್ಟು ಮನೆ ನಡೆಯಲು ಅಧಿಕಾರ ಎಂಬುದು ಗೊತ್ತಿತ್ತು.

ಚದುರಂಗದ ಆಟದ ಬಗ್ಗೆ ತನಗಿದ್ದ ಅಷ್ಟು ಪರಿಚಯದ ಆಧಾರದ ಮೇಲೆ, ಆ ಆಟದ ಗತಿಯನ್ನು ನೃತ್ಯಕ್ಕೆ ಹೇಗೆ ಅಳವಡಿಸಿಕೊಳ್ಳು ವುದು ಎಂದು ಆಲೋಚಿಸಿದಳು. ಅದಕ್ಕೆ ಹಿಂದಿನ ಭರತಶಾಸ್ತ್ರಗಳಲ್ಲಿ ಏನಾದರೂ ಸುಳಿವು–ಸೂಚನೆ ದೊರೆಯುತ್ತದೆಯೇನೋ ಎಂದು, ಆ ಶಾಸ್ತ್ರದ ಆಳವಾದ ಪರಿಚಯವಿದ್ದ ಪಂಡಿತರು, ಅನುಭವಸ್ಥರು, ಹಿರಿಯರನ್ನು ವಿಚಾರಿಸಿದಳು. ಒಬ್ಬಿಬ್ಬರು ಅವಳಿಗೆ—

"ಅಕ್ಬರ್ ಚಕ್ರವರ್ತಿ ಹೀಗೆ ನರ್ತಕಿಯರನ್ನಿಟ್ಟುಕೊಂಡು ಚದುರಂಗ ಆಡ್ತಾ ಇದ್ದ ಅಂತ ನಾವೂ ಕೇಳಿದ್ದೇವೆಯೇ ಹೊರತು, ಅದಕ್ಕೆ ಆ ಕಾಲದ ಜನ ಹೇಗೆ ನರ್ತಿಸುತ್ತಿದ್ದರು ಅಂತ ಹೇಳೋಕೆ ಯಾವ ಆಧಾರವೂ ಇಲ್ಲ. ನಮ್ಮ ಶಾಸ್ತ್ರಗಳಲ್ಲಂತೂ ನೀನು ಹೇಳೋ ವಿಷಯದ ಸುದ್ದಿಯೇ ಇಲ್ಲ."

—ಎಂದು ಹೇಳಿ ಅವಳಲ್ಲಿ ಮತ್ತಷ್ಟು ಅಧೈರ್ಯ ಮೂಡಿಸಿದರೇ ಹೊರತು, ಯಾರೊಬ್ಬರೂ ಅವಳಿಗೆ 'ಹೀಗೆ ಮಾಡು' ಎಂದು ಹೇಳ ಮಾರ್ಗ ನಿರ್ದೇಶನ ಮಾಡಲಿಲ್ಲ.

ಹೀಗೆ ಮಾರ್ಗ ಕಠಿಣವಾದಷ್ಟೂ, ನಾಗರತ್ನಳ ಹಟ ತಗ್ಗದೆ, ಹುರುಪು ಹೆಚ್ಚಿತು.

ಏನೇನೋ ನೂರೆಂಟು ಯೋಚನೆ ಮಾಡಿ ಕೊನೆಗೆ, ಅತಿ ಅನಿರೀಕ್ಷಿತ ವಾದ, ಅನಿಶ್ಚಿತವಾದ, ಆಟಗಾರರ ಚಿತ್ತಾವಲಂಬಿಯಾದ ಆಟದ ಮಧ್ಯ ದಲ್ಲಿ ಯಾವ ಬಗೆಯ ನರ್ತನಕ್ಕೂ ಅವಕಾಶವಿರುವುದಿಲ್ಲವೆಂದು ಊಹಿಸಿ, ಅದರ ಆರಂಭದಲ್ಲಿ ರಂಗಪ್ರವೇಶ ಮಾಡುವಾಗ, ಮತ್ತು ಆಟದ ಕೊನೆಯಲ್ಲಿ ರಂಗದಿಂದ ನಿರ್ಗಮಿಸುವಾಗ, ಸಾಮೂಹಿಕವಾಗಿ ರಾಸಲೀಲೆಯ ನೃತ್ಯ

ಮಾಡುವುದೆಂದೂ, ಆಟದ ಮಧ್ಯಭಾಗದಲ್ಲಿ ಕಾಯಿಗಳಾಗಿ ನಡೆಯುವಾಗ ಆ ನಡೆಯ ಭಾವವನ್ನು ಸೂಚಿಸುವಂಥ ಅಭಿನಯವನ್ನು ಮಾಡುವುದೆಂದೂ, ಒಂದು ಕಾಯಿ ನಡೆಯುವಾಗ, ಆಟ ಆಟಗಾರರ ಆಲೋಚನೆಗಾಗಿ ನಿಂತಾಗ, ರಂಗದಲ್ಲಿದ್ದವರು ಸುಮ್ಮನೆ ನಿಲ್ಲದೆ ಭಂಗಿಯನ್ನು ಆಗಾಗ ಬದಲಿಸುತ್ತಾ, ಹೂವಿನ ಚೆಂಡುಗಳನ್ನು ಆಡುತ್ತಿರಬೇಕೆಂದು ನಿಶ್ಚಯಿಸಿ, ಮನೆಯಿಂದ ಮನೆಗೆ ನಡೆವಾಗ ಹೆಜ್ಜೆಗಳನ್ನು ಹೇಗೆ ಹಾಕಬೇಕೆಂದು, ತಾನೇ ಹುಡುಗಿಯರಿಗೆಲ್ಲಾ ಕಲಿಸಿದಳು.

ನಾಗರತ್ನಳಿಂದ ಅವಳ ಯೋಜನೆಯನ್ನರಿತ ಅಯ್ಯಂಗಾರ್ಯರು, ಅಷ್ಟಕ್ಕಿಂತ ಹೆಚ್ಚಾಗಿ, ಬೇರೇನೂ ಮಾಡಲು ಸಾಧ್ಯವಿಲ್ಲವೆಂದು ಹೇಳಿ, ಅವಳ ಯೋಜನೆಯನ್ನೇ ಒಪ್ಪಿಕೊಂಡರು.

ಇದಾದ ಬಳಿಕ, ಇಬ್ಬಣದ ರಾಜ, ಮಂತ್ರಿ, ಆನೆ, ಕುದುರೆ, ಒಂಟೆ, ಕಾಲಾಳುಗಳಿಗೆ, ಅವರವರ ಸ್ಥಾನಕ್ಕೆ ಉಚಿತವಾದ ಉಡುಪು, ಅಲಂಕಾರ ಹೇಗಿರಬೇಕೆಂದು ಯೋಚಿಸಿ, ಅದಕ್ಕನುಗುಣವಾಗಿ ಎಲ್ಲವನ್ನೂ ಸಿದ್ಧಪಡಿಸಿಕೊಂಡು, ಈ ಪ್ರಯೋಗದ ಪರಿಣಾಮ ಜನರ ಮೇಲೆ ಹೇಗಾದೀತೋ ಎಂದು ಕಾತುರಪಡುತ್ತಾ, ಮಾಧವರಾಯನಿಂದ ಕರೆಯೋಲೆ ಬರುವುದನ್ನೇ ಕಾಯುತ್ತಿದ್ದಳು.

ಅವಳ ನಿರೀಕ್ಷೆಯಂತೆ ಒಂದು ದಿನ ಮಾಧವರಾಯನ ಆಳು ಬಂದು ಆತನ ಕರೆಯೋಲೆಯನ್ನು ಅಯ್ಯಂಗಾರ್ಯರಿಗೂ, ನಾಗರತ್ನಳಿಗೂ ತಲುಪಿಸಿದ.

ಅಯ್ಯಂಗಾರ್ಯರು, ನಾಗರತ್ನ, ಅವಳ ಗುಂಪು, ಒಂದು ಪ್ರತ್ಯೇಕವಾದ ಪೆಟ್ಟಿಗೆ ಗಾಡಿಯಲ್ಲಿ ಹೊರಟರು.

ಉಳಿದವರು ಕುಳಿತ ಸುಮಾರು ಹದಿನೈದು ಪೆಟ್ಟಿಗೆ ಗಾಡಿಗಳು ಆ ಗಾಡಿಯನ್ನು ಹಿಂಬಾಲಿಸಿದವು.

ಅವುಗಳ ಹಿಂದೆ, ನಾಗರವಳ್ಳಿಯ ಚದುರಂಗದ ಉತ್ಸವದ ವಿಷಯ ತಿಳಿದ ರಸಿಕರ ಗಾಡಿಗಳು ಹೊರಟವು.

ಆ ಗಾಡಿಗಳು ಹೋದ ದಾರಿಯಲ್ಲೆಲ್ಲಾ, ನಾಗರವಳ್ಳಿಯ ಸ್ಪರ್ಧೆಯ ವಾರ್ತೆ ಹಬ್ಬಿ, ಊರು ಊರಿನ ಉತ್ಸಾಹೀ ರಸಿಕರು, ಅಪರೂಪವಾದ ಈ ಉತ್ಸವವನ್ನು ನೋಡುವ ಅವಕಾಶ ಕಳೆದುಕೊಳ್ಳಬಾರದೆಂದು, ತಾವೂ ಕುದುರೆಗಾಡಿಗಳು, ಎತ್ತಿನ ಗಾಡಿಗಳು, ಕುದುರೆಗಳು, ಕೊನೆಗೆ ಕಾಲು

ನಡಗೆ–ಹೇಗಾದರೆ ಹಾಗೆ, ಆ ಪಟ್ಟಣದಿಂದ ಹೊರಟ ಗಾಡಿಗಳ ಗುಂಪಿನೊಂದಿಗೆ ಕಲೆತುಕೊಂಡರು. ಹೀಗೆ, ಒಂದೊಂದು ಹಳ್ಳಿಯಿಂದಲೂ ಎರಡು ಮೂರು ಗಾಡಿಗಳು ಕಲೆತು, ಪಟ್ಟಣದ ಗಾಡಿಗಳು ನಾಗರವಳ್ಳಿಯನ್ನು ತಲುಪುವ ವೇಳೆಗೆ, ನಾಗರವಳ್ಳಿಯ ದಾರಿ ನೂರಾರು ಬಗೆಯ ವಾಹನಗಳು ಹರಿಯುವ ಪ್ರವಾಹವಾಗಿತ್ತು. ಒಂದು ಮೈಲಿ ದೂರಕ್ಕೆ ಕೇಳುವಂತಿತ್ತು ಆ ಗಾಡಿಗಳ ಎತ್ತು, ಕುದುರೆಗಳ ಗೆಜ್ಜೆಯ ಸದ್ದು.

ಅರಮನೆಯ ಮದುವೆಯ ದಿಬ್ಬಣದಂತೆ ಸಂಭ್ರಮದಿಂದ ಬಂದ ಶ್ರೀರಂಗಪಟ್ಟಣದ ಗಾಡಿಗಳನ್ನು ಅವು ತಮ್ಮ ಹಳ್ಳಿಯ ಗಡಿಯನ್ನು ತಲುಪಿದಾಗ ಅಷ್ಟೇ ಸಂಭ್ರಮದಿಂದ ಎದುರುಗೊಂಡರು.

ಗಾಡಿಗಳು ಇನ್ನೂ ಅಷ್ಟು ದೂರದಲ್ಲಿವೆ ಎನ್ನುವಾಗಲೇ, ಅವುಗಳ ಸದ್ದು ಕೇಳಿ, ಹತ್ತಿಪ್ಪತ್ತು ಕಹಳೆಗಳು ಕೂಗಿ, ನಗಾರಿಗಳು ಮೊರೆದವು. ಗಾಡಿಗಳು ನಾಗರವಳ್ಳಿಯ ಗಡಿಗೆ ಬರುತ್ತಿದ್ದ ಹಾಗೇ ಗಡಿಯ ಬಳಿ ಹಾಕಿದ ಹಸಿರುವಾಣಿ ಚಪ್ಪರದಲ್ಲಿ ಚಂದ್ರಯ್ಯ, ನಾಗರವಳ್ಳಿಯ ಮುಖಂಡರು ಅವರನ್ನು ಇದಿರುಗೊಂಡು, ಕುಶಲಪ್ರಶ್ನೆ ವಿಚಾರಿಸಿದ ಬಳಿಕ, ಪ್ರಯಾಣದಿಂದ ಬಳಲಿ ಬಂದವರೆಲ್ಲರಿಗೂ, ಇವರು ಅತಿಥಿಗಳು ಇತರರು ಎಂದು ಲೆಕ್ಕಿಸದೆ, ಎಳನೀರು, ಪಾನಕ, ನೀರುಮಜ್ಜಿಗೆಯ ಸಮಾರಾಧನೆಯಾಗಿ, ದಣಿದು ಬಂದವರೂ ಕ್ಷಣಕಾಲ ವಿಶ್ರಾಂತಿ ಪಡೆದ ಬಳಿಕ, ಉದ್ದಕ್ಕೂ ತಳಿರು ತೋರಣಗಳು ಕಟ್ಟಿದ ದಾರಿಯಲ್ಲಿ, ನಾಲ್ಕು ಜೊತೆ ಓಲಗಗಳ ಮರ್ಯಾದೆಯೊಂದಿಗೆ, ಊರಿನೊಳಗೆ ಕರೆದುಕೊಂಡು, ದೇವಾಲಯದ ಮುಂದೆ ಇಳಿಸಿದರು.

ತಮಗೆ ಈ ಬಗೆಯ ಸ್ವಾಗತ ದೊರೆಯಬಹುದೆಂದು ಕನಸುಮನಸಿನಲ್ಲಿಯೂ ನಿರೀಕ್ಷಿಸದ ನಾಗರತ್ನ, ಗಾಡಿಯಲ್ಲಿ ಕುಳಿತೇ ನಿಬ್ಬೆರಗು ತುಂಬಿದ ನೋಟದಿಂದ ಎಲ್ಲವನ್ನೂ ನೋಡುತ್ತಿರುವಾಗಲೇ, ಚಂದ್ರಯ್ಯ ಅವಳ ಬಳಿಗೆ ಬಂದು, ಮಾತನಾಡಿಸಿ, ಅವಳ ಗಾಡಿಯೊಂದನ್ನು ಮಾತ್ರ ನೆಟ್ಟಗೆ ಮಾಧವರಾಯನ ಮನೆಯ ಬಳಿಗೆ ಹೊಡೆಸಿಕೊಂಡು ಹೋದ.

ಅಂದಿನ ಪರಿಸ್ಥಿತಿಗೆ ತಕ್ಕಂತೆ ಶ್ರೀಮಂತೋಚಿತವಾದ ರೀತಿಯಲ್ಲಿ ಅಲಂಕೃತವಾದ ತನ್ನ ಮನೆಯ ಹಜಾರದಲ್ಲಿ ಕುಳಿತು ಮಾಧವರಾಯ ಅವರ ಬರವನ್ನೇ ನಿರೀಕ್ಷಿಸುತ್ತಿದ್ದ.

ಮಾಧವರಾಯನಿಗೆ ಪಟ್ಟಣದಿಂದ ಬಂದ ಶಾಮಯ್ಯಂಗಾರ್ಯರು, ನಾಗರತ್ನ ಮೊದಲಾದವರನ್ನು ನೋಡಲು ಎಷ್ಟು ಕುತೂಹಲವಿತ್ತೋ, ಅವರಿಗೂ ಮಾಧವರಾಯನನ್ನು ಕಾಣುವ ಬಗ್ಗೆ ಅಷ್ಟೇ ಆಸಕ್ತಿಯಿತ್ತು.

ಉಳಿದೆಲ್ಲರಿಗಿಂತ ಹೆಚ್ಚಾಗಿ ನಾಗರತ್ನ ಕಾತರಿಸುತ್ತಿದ್ದಳು.

ಚಂದ್ರಯ್ಯ ಮಾಧವರಾಯನಿಗೆ ಒಬ್ಬೊಬ್ಬರದಾಗಿ ಪರಿಚಯ ಮಾಡಿಸುತ್ತಿದ್ದಾಗ ನಾಗರತ್ನಳ ಕಣ್ಣುಗಳು ಮಾಧವರಾಯನನ್ನೇ ನೋಡುತ್ತಿದ್ದವು.

ಮಾಧವರಾಯನ ಸುಮಾರು ಆರು ಅಡಿ ಎತ್ತರವಾದ, ಸೇನೆಯ ಕಠಿಣ ಕವಾಯಿತಿನಿಂದ ಬಲಿಷ್ಠವಾಗಿ, ಈಚಿನ ಸುಖಜೀವನದ ಫಲವಾಗಿ ತುಂಬಿಕೊಂಡಿದ್ದ ಗೋಧಿಯ ಬಣ್ಣದ ಮೈ, ಉದ್ದಕ್ಕಿಂತಲೂ ಕೊಂಚ ಅಗಲ ಹೆಚ್ಚಾದ, ಮೊನೆಗಳು ತಿರುಚಿದ ಹುರಿಮೀಸೆಯನ್ನು ಪಡೆದ ಮುಖ, ತೊಟ್ಟ ಅಂಗರೇಖಿನಲ್ಲೂ ತುಂಬಿ ಕಾಣುತ್ತಿದ್ದ ವಿಶಾಲವಾದ ಎದೆ, ಕಣ್ಣುಗಳಲ್ಲಿದ್ದ ಅಧಿಕಾರದರ್ಪದ ಠೀವಿ ಇವನ್ನು ಕಂಡು ನಾಗರತ್ನಳ ನಿರೀಕ್ಷೆ ವಿಫಲವಾಗಲಿಲ್ಲ.

ಅದಕ್ಕೆ ಪ್ರತಿಯಾಗಿ ಶ್ರೀಮಂತರಿಗೆ ಸಹಜವಾದ ಬೊಜ್ಜು ಹೊಟ್ಟೆ, ಗಲ್ಲ ಮಾನೆಗಳಿಲ್ಲದಿದ್ದುದನ್ನು ನೋಡಿ ಒಂದು ರೀತಿಯಲ್ಲಿ, ಅವಳು ನಿರೀಕ್ಷಿಸಿದ್ದುದಕ್ಕಿಂತಲೂ ಹೆಚ್ಚಿನ ತೃಪ್ತಿಯೇ ಆಯಿತು.

ಮಾಧವರಾಯ, ಚಂದ್ರಯ್ಯ ಮೊದಲಾದವರು ಶಾಮಯ್ಯಂಗಾರ್ಯರೊಂದಿಗೆ ಮಾತನಾಡುವುದರಲ್ಲಿ ನಿರತರಾಗಿದ್ದುದರಿಂದ ಯಾರಿಗೂ ನಾಗರತ್ನಳ ಕಣ್ಣು ಮಾಡುತ್ತಿದ್ದ ಕೆಲಸ ಕಾಣಲಿಲ್ಲ.

ಅದು ಕಂಡುದು, ಅವಳಂತೆಯೇ, ತಲೆ ತಗ್ಗಿಸಿ, ಓರೆ ನೋಟದಿಂದ ನೋಡುತ್ತಿದ್ದ ನೀಲಾ ಒಬ್ಬಳಿಗೆ ಮಾತ್ರ. ಅತ್ಯಲ್ಪ ಕಾಲದಲ್ಲಿ ತನ್ನ ನೋಟದ ಕೆಲಸವನ್ನು ಮುಗಿಸಿಕೊಂಡ ನಾಗರತ್ನ ತನ್ನ ಮಗಳತ್ತ ಕಣ್ಣು ಹಾಯಿಸಿದಳು. ಅದೇ ಹೊತ್ತಿಗೆ ಮಗಳೂ ತಾಯಿಯತ್ತ ನೋಡಿದಳು. ನೀಲಾಳ ತುಟಿಯ ಮೇಲೆ ಮೂಡಿದ ಬಹು ನವಿರಾದ ಮಂದಹಾಸವನ್ನು ಕಂಡು ನಾಗರತ್ನಳಿಗೆ ಸಮಾಧಾನವಾಯಿತು.

ತಾಯಿ ಮಕ್ಕಳು ತಮ್ಮ ಕಣ್ಣುನೋಟದ ಮೂಲಕ ಪರಸ್ಪರ ಸಂದೇಶಗಳನ್ನು ಕಳಿಸುತ್ತಿರುವಾಗಲೇ, ಶಾಮಯ್ಯಂಗಾರ್ಯರೊಂದಿಗೆ ಮಾತು ಮುಗಿಸಿದ ಮಾಧವರಾಯ ನಾಗರತ್ನಳ ಕಡೆ ತಿರುಗಿ—

'ನಮ್ಮಿಂದ ನಿಮಗೆ ತುಂಬಾ ಶ್ರಮವಾಯಿತು. ನೀವು ಮಾಡಿದ ಉಪಕಾರವನ್ನು ನಾನೆಂದೂ ಮರೆಯುವುದಿಲ್ಲ. ಇಲ್ಲಿರುವಷ್ಟು ದಿನವೂ ನೀವು ಇದನ್ನು ನಿಮ್ಮದೇ ಮನೆ ಎಂದು ತಿಳಿದುಕೊಂಡು, ಯಾವುದಕ್ಕೂ ಸಂಕೋಚ ಪಟ್ಟುಕೊಳ್ಳದೆ ಸುಖವಾಗಿರಬೇಕು.'

—ಎಂದು ಹೇಳಿದ.

'ತಮ್ಮ ಆಶ್ರಯದಲ್ಲಿ ನಮಗೆ ಯಾವುದಕ್ಕೂ ಏನೂ ತೊಂದರೆಯಾಗುವುದಿಲ್ಲವೆಂಬ ನಂಬಿಕೆ ನನಗಿದೆ. ನಮ್ಮ ಸೇವೆಯಿಂದ ನಿಮಗೆ ತೃಪ್ತಿಯಾದರೇ ಅದೇ ನಮಗೆ ಮಹಧ್ಭಾಗ್ಯ.'

—ಎಂದು ಹೇಳಿ ನಾಗರತ್ನ ಕೈ ಮುಗಿದಳು.

'ಚಂದ್ರಯ್ಯ, ಇವರೆಲ್ಲರ ಯೋಗಕ್ಷೇಮ ನಿನ್ನ ಖಾಸಾ ಜವಾಬ್ದಾರಿ. ಯಾವುದಕ್ಕೂ ಕೊರತೆಯಾಗದ ಹಾಗೆ ನೋಡಿಕೋ. ಪ್ರಯಾಣದಿಂದ ನಿಮಗೆಲ್ಲಾ ತುಂಬಾ ದಣಿವಾಗಿರಬೇಕು. ಮಾತಿನಿಂದ ಆ ಆಯಾಸವನ್ನು ಮತ್ತಷ್ಟು ಹೆಚ್ಚಿಸಲು ನನಗೆ ಇಷ್ಟವಿಲ್ಲ. ಹೋಗಿ ವಿಶ್ರಾಂತಿ ತೆಗೆದುಕೊಳ್ಳಿ. ಚಂದ್ರಯ್ಯ, ಇವರೆಲ್ಲರಿಗೂ ಹಾಲು ತಂದು ಕೊಡಲು ಹೇಳು.'

—ಎಂದು ಹೇಳಿದ ಮಾಧವರಾಯ.

ಸದ್ಯಕ್ಕೆ ಮಾತುಕಥೆಯನ್ನು ಮುಗಿಸುವಂತಿದ್ದ ಮಾಧವರಾಯನ ಮಾತುಗಳನ್ನು ಕೇಳಿ, ಆತ ತನ್ನ ಮಗಳ ಕಡೆ ನೋಡದೆ, ಆಕೆಯ ಯೋಗಕ್ಷೇಮವನ್ನೂ ವಿಚಾರಿಸದಿದ್ದುದನ್ನು ಕಂಡು ನಾಗರತ್ನಳಿಗೆ ಕೊಂಚ ನಿರಾಶೆಯಾಯಿತು. ಆದರೂ, ಮಾಧವರಾಯನ ಕಣ್ಣು, ಸೀಲಳ ಪಕ್ಕದಲ್ಲಿದ್ದ ಇಂದಿರೆಯತ್ತಲೂ ಹೊರಳದಿದ್ದುದನ್ನು ಕಂಡು—

'ಹಾಗೆಲ್ಲಾ ಕಂಡ ಕಡೆ ಕಣ್ಣು ಹಾಯಿಸುವ ಜಾತಿಯಲ್ಲಾಂತ ಕಾಣುತ್ತೆ. ನೋಡೋಣ—ಈ ಬಿಗುಮಾನ ಎಷ್ಟು ದಿನ ಇರುತ್ತೆ.'

—ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಆದರೂ, ಅಷ್ಟರಿಂದಲೇ ಅವಳ ಮನಸ್ಸಿನ ತೃಪ್ತಿಯಾಗದೆ, ಹಾಲು ಕುಡಿದು, ನಮಸ್ಕಾರ ಹೇಳಿ ಅಲ್ಲಿಂದ ಹೊರಟ ಬಳಿಕ ತಮಗಾಗಿ ಗೊತ್ತು ಮಾಡಿದ್ದ ಬಿಡಾರಕ್ಕೆ ಹೋಗುವ ಹಾದಿಯಲ್ಲಿ, ತಮ್ಮೊಂದಿಗೆ ಬಂದ ಚಂದ್ರಯ್ಯನನ್ನು—

"ನಾನು ನಿನಗೆ ಗಂಜಾಂನಲ್ಲಿ ಹೇಳಿದ ವಿಷಯ ಅಣ್ಣಾವರಿಗೆ ಹೇಳಿದ್ಯಾ ಅಣ್ಣಾ ?"

—ಎಂದು ಕೇಳಿದಳು.

"ಯಾವ ವಿಷಯ ?"

"ನೀಲಾ ವಿಷಯ...."

"ಆ ವಿಷಯ ಹೇಳದೆ ಉಂಟೆ ? ನೀನು ಹೇಳಿದ ಯಾವ ಮಾತನ್ನೂ ಮರೆಯದ ಹಾಗೆ ಯಜಮಾನರ ಕಿವೀ ಮೇಲೆ ಹಾಕಿದೀನಿ."

—ಎಂದು ಚಂದ್ರಯ್ಯ ಅವಳಿಗೆ ಮತ್ತೊಮ್ಮೆ ಭರವಸೆ ಕೊಟ್ಟ.

"ಆ ಮಾತಿಗೆ ಏನು ಹೇಳಿದ್ರು ?"

"ಯಾವುದನ್ನೂ ಇಲ್ಲಾಂದು ಅಭ್ಯಾಸಾನೇ ಇಲ್ಲ ನಮ್ಮ ಯಜಮಾನರಿಗೆ"

—ಎಂದ ಚಂದ್ರಯ್ಯ.

"ಹಂಗಿದ್ರೆ ಅದು ನಮ್ಮ ಪುಣ್ಯ. ಇದ್ರೂ ನಿಮ್ಮ ಯಜಮಾನರಿಗೆ, ನಿಮ್ಮಂಗೆ ಈಗ ನೋಡಿದ್ದು ಇನ್ನೊಂದು ಗಳಿಗೇಲಿ ಮರೆಯೋ ಅಭ್ಯಾಸ ಇಲ್ಲ ತಾನೇ ?"

"ಅದ್ಯಾಕೆ ಹಾಗೆ ಹೇಳ್ತೀಯೆ, ನಾನು ಏನು ಅಂಥ ಮರೆವಿನ ಕೆಲಸ ಮಾಡಿದೆ ?"

"ಏನೊಂತ ಈಗಲೂ ನೆನಪಾಗಲಿಲ್ವಾ ?"

"ಊಹೂ....ಏನು ?...."

"ಇಲ್ಲಾ, ಇಂದಿರಾ ಯಾವಾಗ ನಿಮ್ಮನ್ನ ನೋಡ್ತೀನಿ ಅಂತ ಒದ್ದಾಡ್ತಾ ಇಲ್ಲಿಗೆ ಬಂದು, ಕಣ್ಣು ಒಡೆಯೋ ಹಂಗೆ ನಿಮ್ಮ ಕಡೇನೇ ನೋಡ್ತಾ ಇದ್ರೂ ಒಂದ್ಸಲಾನಾದ್ರೂ ಅವಳ ಕಡೆ ನೋಡಿದ್ರಾ? ಒಂದು ಮಾತಾದ್ರೂ ಆಡಿದ್ರಾ ? ಅದಕ್ಕೆ ಗಂಡಸಿನ ಜಾತಿಗೆ ಮರೆವು ಹುಟ್ಟುಗುಣ ಅನ್ನೋದು."

—ಎಂದಳು ನಾಗರತ್ನ ಕೆಣಕು ನಗೆ ನಗುತ್ತಾ.

ಆಕೆ ಹೇಳಿದ ಮಾತನ್ನು ಕೇಳಿ ಚಂದ್ರಯ್ಯನ ಮುಖ ಕೆಂಪೇರಿತು. ನಾಗರತ್ನಳ ಪ್ರಶ್ನೆಗೆ ಏನೊಂದೂ ಉತ್ತರ ಕೊಡದೆ ಸುಮ್ಮನೆ ತಲೆತಗ್ಗಿಸಿದ.

"ಇಂದಿರೆಯನ್ನು ಮರೆತಿಲ್ಲ" ಎಂದು ಚಂದ್ರಯ್ಯ ಬಾಯಿಬಿಟ್ಟು ಹೇಳಲಿಲ್ಲ.

ಆತನು ಹೇಳದಿದ್ದ ಮಾತನ್ನು ಅವನ ಮುಖದ ಬಣ್ಣವೇ ನಾಗರತ್ನಳಿಗೆ ಹೇಳಿತು.

"ಸಂಜೆ ಮನೆ ಕಡೆಗೆ ಬಂದು ಹೋಗಿ, ಮಾತಾಡೋ ವಿಷಯ ಇದೆ."

-ಎಂದಷ್ಟೇ ಹೇಳಿ ನಾಗರತ್ನ ಸುಮ್ಮನಾದಳು.

ಚಂದ್ರಯ್ಯ ಮಾತ್ರ ಗಾಡಿಯ ಒಂದು ಮೂಲೆಯಲ್ಲಿ ಕುಳಿತ ಅಯ್ಯಂಗಾರ್ಯರಿಗೆ ಈ ಮಾತೆಲ್ಲಾ ಎಲ್ಲಿ ಕೇಳಿಸಿತೋ ಎಂದು ಅವರ ಕಡೆ ಇಣುಕಿ ನೋಡಿದ. ಇರುಳು ಸರಿಯಾಗಿ ನಿದ್ರೆ ಮಾಡದ ಅಯ್ಯಂಗಾರ್ಯರು ತೂಕಡಿಸುತ್ತಾ ಅರ್ಧ ಮರ್ತ್ಯ ಲೋಕ ಅರ್ಧ ಸ್ವಪ್ನಲೋಕದಲ್ಲಿದ್ದರು.

ಅದನ್ನು ಕಂಡು ಅವರ ಮನಸ್ಸಿಗೆ ಸ್ವಲ್ಪ ತೃಪ್ತಿಯಾಯಿತು.

## ೧೦

ಮರುದಿನ ಪ್ರಾತಃಕಾಲ, ಶಂಕರನಾರಾಯಣಸ್ವಾಮಿಗೆ ಮಂಗಳಾರತಿಯಾದ ಬಳಿಕ ನಾಗರವಳ್ಳಿಯ ಜನತೆ ಬಹು ಕುತೂಹಲದಿಂದ ನಿರೀಕ್ಷಿಸುತ್ತಿದ್ದ ಚದುರಂಗದಾಟ, ಕಹಳೆ ನಗಾರಿಗಳ ಘೋಷದೊಂದಿಗೆ ಆರಂಭವಾಯಿತು.

ಕಹಳೆ, ನಗಾರಿಗಳು ಮೊಳಗುತ್ತಿದ್ದ ಹಾಗೇ, ಆಟಗಾರರಾದ ರಾಮಯ್ಯಂಗಾರ್ಯರು, ಚಂದ್ರಯ್ಯ ಇಬ್ಬರೂ ತಾವು ಕುಳಿತಲ್ಲಿಂದ ಎದ್ದು ಸಭೆಗೆ ವಂದನೆ ಮಾಡಿ, ತಮತಮಗೆಂದು ಗೊತ್ತುಮಾಡಲ್ಪಟ್ಟ, ವೇದಿಕೆಯ ಪಾರ್ಶ್ವದ ಆಸನಗಳಲ್ಲಿ ಮಂಡಿಸಿದರು.

ಅವರಿಬ್ಬರೂ ಆಸನಾಸೀನರಾಗುತ್ತಿದ್ದ ಹಾಗೇ, ತಾಳ, ವೇಣು, ವೀಣೆ, ಮದ್ದಳೆಗಳ ವಾದನದೊಂದಿಗೆ ಚದುರಂಗದಾಟದಲ್ಲಿ ಪೇದೆಗಳಾಗಬೇಕಾದ ಹದಿನಾರು ಜನ ಹುಡುಗಿಯರು ಹೊರಬಂದು, ರಂಗಪೂಜೆಯ ನೃತ್ಯವನ್ನು ಸೂಕ್ಷ್ಮವಾಗಿ ಅಭಿನಯಿಸಿ, ತೆರೆಯ ಮರೆಯೊಳಗಿದ್ದ ರಾಜರನ್ನು ರಂಗಕ್ಕೆ ಬರುವಂತೆ ಆಹ್ವಾನಿಸಿ, ನೃತ್ಯಗತಿಯಲ್ಲೇ ತಮ್ಮ ತಮ್ಮ ಸ್ಥಾನಗಳಿಗೆ ಹೋಗಿ ನಿಂತರು. ಆ ಕಾಲ್ಬಲವನ್ನು ಹಿಂಬಾಲಿಸಿ ಬಂದ ಸೇನಾ ಬಲದಂತೆ ಆನೆ, ಕುದುರೆ, ಒಂಟೆಗಳ ಪಾತ್ರಧಾರಿಗಳು ಬಂದು ತಮ್ಮ ತಮ್ಮ ಸ್ಥಾನಕ್ಕೆ ಹೋದ ಬಳಿಕ, ಸಚಿವರು ಬಂದು ತಮ್ಮ ಸ್ಥಾನ

ವನ್ನು ಅಲಂಕರಿಸಿದರು. ಆ ಬಳಿಕ ಕ್ಷಣಕಾಲ ನೋಡುಗರಲ್ಲಿ ನಿರೀಕ್ಷೆಯನ್ನು ಕೆರಳಿಸುವಂಥ ನಿಶ್ಶಬ್ದತೆ ವ್ಯಾಪಿಸಿ, ಬಳಿಕ ಆ ಇಬ್ಬಣದ ರಾಜರ ವೇಷವನ್ನು ಧರಿಸಿದ ನೀಲಾ ಮತ್ತು ಮೂಗೂರಿನ ತಾಯಮ್ಮ ಇಬ್ಬರೂ, ರಂಗಪ್ರವೇಶ ಮಾಡಿ, 'ಅಲರಿಪು' ವನ್ನು ಅಭಿನಯಿಸಿ, ಸಭೆಗೆ ಪುಷ್ಪಾಂಜಲಿಯನ್ನೆರಚಿ, ತಮ್ಮ ಸ್ಥಾನಗಳಿಗೆ ತೆರಳಿದರು.

ಒಬ್ಬೊಬ್ಬರ ರಂಗಪ್ರವೇಶವನ್ನೂ ಕರತಾಡನ, ಹರ್ಷಧ್ವನಿಗಳಿಂದ ಸ್ವಾಗತಿಸಿದ ಸಭೆ, ರಾಜರ ಪಾತ್ರಧಾರಿಗಳ ಆಗಮನದ ಸಮಯದಲ್ಲಂತೂ ಹುಚ್ಚಾಗಿ ಕರತಾಡನ ಮಾಡಿತು.

ನಿಜಕ್ಕೂ ನೋಡುವವರಿಗೆ ಹುಚ್ಚು ಹಿಡಿಸುವಂತಿದ್ದರು, ಆ ಪಾತ್ರ ಧಾರಿಗಳಿಬ್ಬರು. ಸಮಯೌವನ, ಸಮಲಾವಣ್ಯವತಿಯರಾದ ಆ ಇಬ್ಬರಲ್ಲೂ ನೀಲಾಳ ರೂಪ ಕಂಡ ಕಣ್ಣಿಗೆ ಕಳ್ಳು ಕುಡಿಸುವಂತಿತ್ತು.

ಸಭೆಗೆ ಸಭೆಯೇ ಆಟವನ್ನು ಮರೆತು, ತಮ್ಮ ಕಣ್ಣೆದುರಿಗೆ ಸಾಲಾಗಿ ನಿಂತ ರೂಪವತಿಯರಾದ ತರುಣಿಯರನ್ನು ನೋಡುತ್ತಾ, ಗಳಿಗೆಗೊಮ್ಮೆ ಕರತಾಡನ ಮಾಡುತ್ತಾ, ಹರ್ಷಧ್ವನಿ ಘೋಷಿಸುತ್ತಾ, ಅದಕ್ಕಾಗಿಯೇ ತಾವು ನೆರೆದಿದುವಂತೆ ವರ್ತಿಸುತ್ತಿತ್ತು.

ಅದನ್ನು ಕಂಡ ಶಾಮಯ್ಯಂಗಾರ್ಯರಿಗೆ ಸಭಿಕರು ಮುಖ್ಯರಾದ ಆಟಗಾರರಿಗಿಂತಲೂ ನರ್ತಕಿಯರಿಗೇ ಹೆಚ್ಚು ಗಮನ ಕೊಡುತ್ತಿರುವುದನ್ನು ನೋಡಿ, ಬೇಸರಗೊಂಡು—

"ಸದ್ದು...."

—ಎಂದು ಕೂಗಿ ಹೇಳಿ, ಸಭೆಯಲ್ಲ ಮೌನ ವ್ಯಾಪಿಸಿದ ಬಳಿಕ

"ನಾವಿನ್ನು ಆಟ ಆರಂಭಿಸಲು ಸಭೆ ಅಪ್ಪಣೆ ಕೊಡಬೇಕು."

—ಎಂದು ಪ್ರಾರ್ಥಿಸಿದರು.

ಅವರು ಆ ಮಾತನ್ನು ಆಡುತ್ತಿದ್ದ ಹಾಗೇ, ಮಾಧವರಾಯ ತಾನು ಕುಳಿತ ಆಸನದಿಂದ ಎದ್ದು ನಿಂತು, ಎಲ್ಲರಿಗೂ ನಮಸ್ಕರಿಸಿ, ಶ್ರೀರಂಗಪಟ್ಟಣದ ಶಾಮಯ್ಯಂಗಾರ್ಯರ ಪರಿಚಯವನ್ನು ಸಭೆಗೆ ಮಾಡಿಕೊಟ್ಟು, ಆಟಗಾರರಿಬ್ಬರಿಗೂ ಹೂವಿನ ಹಾರ ಹಾಕಿ, ಆಟವನ್ನು ಆರಂಭಿಸುವಂತೆ ಕೋರಿದ.

ಆ ಬಳಿಕ, ಶಾಮಯ್ಯಂಗಾರ್ಯರು, ಚಿನ್ನದ ತೋಡಾ ಧರಿಸಿದ

ತಮ್ಮ ಬಲ ಕೈಯನ್ನು ಎಲ್ಲರಿಗೂ ಕಾಣುವಂತೆ ಮೇಲೆತ್ತಿ, ಒಂದು ಚಿಟಕಿ ನಸ್ಯವನ್ನು ಸಶಬ್ದವಾಗಿ ಮೂಗಿಗೆ ಏರಿಸಿ, ಹೊದ್ದ ಜರತಾರಿಯ ಶಾಲಿನ ತುದಿಯಿಂದಲೇ ಮೂಗು ಒರಸಿಕೊಂಡು—

"ಚಂದ್ರಯ್ಯ ಮೊದಲು ಯಾರು ನಡೆಸೋದು ?"

—ಎಂದು ಕೇಳಿದರು.

"ವಯಸ್ಸಿನಲ್ಲಿ ತಾವೇ ಹಿರಿಯರು. ತಾವು ಮುಂದೆ, ನಾನು ಹಿಂದೆ."

—ಎಂದ ಚಂದ್ರಯ್ಯ.

"ಅದು ನಿನ್ನ ಹಣೆಯ ಬರಹ !"

—ಎಂದು ಶಾಮಯ್ಯಂಗಾರ್ಯರು ಪದ್ಧತಿಯಂತೆ ಪದಾತಿಯನ್ನು ಮುಂದೆ ದೂಡಿ, ಆಟವನ್ನು ಆರಂಭಿಸಿದರು.

ಅದಕ್ಕೆ ಇದಿರು ನಡೆಯಾಗಿ ಚಂದ್ರಯ್ಯನೂ ತನ್ನ ಪದಾತಿಯನ್ನು ಮುಂದೆ ದೂಡಿದ.

ತಟಕ್ಕನೆ ಸಭೆಯಲ್ಲಿದ್ದವರ ಕಣ್ಣುಗಳೆಲ್ಲವೂ ನರ್ತಕಿಯರತ್ತಣಿಂದ ಸರಿದು ಆಟಗಾರರಲ್ಲಿ ಕೇಂದ್ರೀಕೃತವಾದವು.

ಅಯ್ಯಂಗಾರ್ಯರ ಖ್ಯಾತಿಯನ್ನು ಕೇಳಿದ್ದ ಚಂದ್ರಯ್ಯನಂತೂ ಮೈಯೆಲ್ಲಾ ಕಣ್ಣಾಗಿದ್ದ.

ಮೊದಲಿನ, ಇಬ್ಬರ ಹತ್ತು ಹನ್ನೆರಡು ನಡೆಗಳು, ತೀರಾ ಸಾಮಾನ್ಯವಾಗಿದ್ದು, ಆಡುವವರು, ನೋಡುವವರು ಇಬ್ಬರಿಗೂ ಅತ್ಯಂತ ಸಪ್ಪೆಯಾಗಿದ್ದವು. ಉಳಿದೆಲ್ಲರಿಗಿಂತ ಹೆಚ್ಚಾಗಿ, ಅಯ್ಯಂಗಾರ್ಯರಿಂದ ಅಸಾಮಾನ್ಯ ನಡೆಗಳನ್ನು ನಿರೀಕ್ಷಿಸಿದ್ದ ಚಂದ್ರಯ್ಯನಿಗಂತೂ, ಅವರ ನಡೆಗಳ ಸಾಮಾನ್ಯತನವನ್ನು ಕಂಡು—

"ಬಹಳ ವರ್ಷ ಆಟ ಬಿಟ್ಟು, ಅಯ್ಯಂಗಾರ್‌ಸ್ವಾಮಿಗಳಿಗೆ ಆಟದ ಅಭ್ಯಾಸ ತಪ್ಪಿಹೋಗಿದೆಯೇನೋ" ಎನಿಸಿ, ನಿರಾಶೆಯೇ ಆಯಿತು.

ಆದರೂ ಚದುರಂಗದಾಟದಲ್ಲಿ ಮೈಮರೆವು ಅಪಾಯಕಾರಿ ಎಂಬ ಸೂತ್ರವನ್ನು ಚೆನ್ನಾಗಿ ತಿಳಿದಿದ್ದ ಆತ ಮೊದಲ ನಡೆಗಳ ಸಾಮಾನ್ಯತೆ ತನ್ನಲ್ಲಿ ಮೈಮರೆವನ್ನು ಮೂಡಿಸದಂತೆ ಎಚ್ಚರವಾಗಿದ್ದ.

ಅವರು ಚದುರಂಗವನ್ನು ಆಡುತ್ತಿದ್ದುದು ಅತಿ ವಿಶಾಲವಾದ ವೇದಿಕೆಯ ಮೇಲಾದುದರಿಂದ, ಕಾಯಿಗಳಾಗಿ ನಿಂತ ಹುಡುಗಿಯರು ಆಟಗಾರ

ರಿಗೆ ಅಡ್ಡವಾಗಿ ಅದರಿಂದ ಆಟವಾಡಲು ಅವರಿಗೆ ತೊಂದರೆಯಾಗದಂತೆ ಇಬ್ಬರು ಆಟಗಾರರ ಪಕ್ಕದಲ್ಲೂ, ಒಬ್ಬೊಬ್ಬರನ್ನು ನಿಜವಾದ ಚದುರಂಗದ ಮಣೆ, ಕಾಯಿಗಳೊಂದಿಗೆ ಕೂಡಿಸಿ, ಆಟಗಾರರು ಹೇಳಿದ ರೀತಿಯಲ್ಲಿ ಕಾಯಿಗಳನ್ನು ನಡೆಸುವಂತೆ ಹೇಳಲಾಗಿತ್ತು. ಅದರಿಂದ ಇಬ್ಬರು ಆಟಗಾರರಿಗೂ ತಮ್ಮ ಕಾಯಿಗಳು ಎಲ್ಲಿವೆ. ಇದಿರಾಳಿಯ ನಡೆಯ ಪರಿಣಾಮ ಹೇಗೆ ಎಂದು ತಿಳಿಯಲು ಅನುಕೂಲವಾಗಿತ್ತು.

ಸಭೆಯ ಕಣ್ಣು, ಆಟಗಾರರ ಇಚ್ಛೆಯಂತೆ ಚಲಿಸುತ್ತಿದ್ದ ನರ್ತಕಿಯರ ಮೇಲಿದ್ದರೆ, ಆಟಗಾರರ ಕಣ್ಣು ಮಾತ್ರ ಸಭೆ ನರ್ತಕಿಯರು ಎಲ್ಲವನ್ನೂ ಮರೆತು ತಮ್ಮ ಪಕ್ಕದಲ್ಲಿದ್ದ ಚದುರಂಗದ ಮಣೆಯಲ್ಲಿ ಮಗ್ನವಾಗಿತ್ತು.

ಅಂದೇ ಸುಮಾರು ಮೂರು ಗಂಟೆಗಳ ಕಾಲ ಆಟ ಮುಂದುವರಿಯಿತು.

ಆ ಅವಧಿಯಲ್ಲಿ ಅಯ್ಯಂಗಾರ್ಯರ ಮೂರು ಕಾಲಾಳುಗಳೇ ಅಲ್ಲದೆ, ಒಂದು ಕುದುರೆ, ಒಂದು ಆನೆ ವಧೆಯಾಗಿ, ಅದಕ್ಕೆ ಪ್ರತಿಯಾಗಿ ತನ್ನ ಆರು ಕಾಲಾಳು, ಒಂದು ಒಂಟೆಯನ್ನು ಬಲಿಯಾಗಿ ಒಪ್ಪಿಸಿದ್ದ. ಆದರೂ ಆಟದ ರೀತಿಯನ್ನು ನೋಡಿದರೆ ಚಂದ್ರಯ್ಯನ ಕೈಯೇ ಮೇಲಾಗಿರುವಂತಿತ್ತು.

ಅದನ್ನು ಕಂಡ ಚಂದ್ರಯ್ಯನ ಪೋಷಕನಾದ ಮಾಧವರಾಯನಿಗೆ ಅವನ ಬಗ್ಗೆ ಹೆಮ್ಮೆ ಎನಿಸಿತು. ಆದರೆ, ಆಟದ ಕಾಲದಲ್ಲಿ ಸಭಿಕರು ಯಾವ ಮಾತನ್ನೂ ಆಡಕೂಡದು ಎಂದು ಕಟ್ಟಾಗಿದ್ದುದರಿಂದ ಆತ ಏನೊಂದೂ ಮಾತನಾಡದೆ, ಕಡೆದ ವಿಗ್ರಹದಂತೆ ಕುಳಿತು ಆಟವನ್ನು ನೋಡುತ್ತಿದ್ದ. ಹಾಗೆ ಆಟವನ್ನು ನೋಡುತ್ತಿದ್ದಾಗ, ನೋಡಿದುದನ್ನೇ ನೋಡಿ ಬಳಲಿದ ಆತನ ಕಣ್ಣು ಅತ್ತಿತ್ತ ಚಲಿಸುತ್ತಾ ಚಂದ್ರಯ್ಯನ ಕಡೆಯ ರಾಜನಾಗಿ ನಿಂತ ನೀಲಳ ಮೇಲೆ ಬಿತ್ತು. ತನ್ನ ಕಡೆ ಮಾಧವರಾಯನ ದೃಷ್ಟಿ ಯಾವಾಗ ಬೀಳುವುದೋ ಎಂದು ನಿರೀಕ್ಷಿಸುತ್ತಿದ್ದ ನೀಲಳ ನೋಟವೂ ಮಾಧವರಾಯನ ನೋಟದೊಂದಿಗೆ ಕಲೆತು, ಆ ನೋಟಗಳ ಸಂಗಮದಿಂದ ಏನೋ ಒಂದು ಬಗೆಯ ಮಿಂಚು ಮೂಡಿದಂತಾಗಿ, ಮಾಧವರಾಯ

ಕಟಕ್ಕನೆ ತನ್ನ ನೋಟವನ್ನು ಗೀರೆಯ ಕಡೆ ಹೊರಳಿಸಿ, ತನ್ನ ಕಣ್ಣನ್ನು ಆಟದಲ್ಲಿ ಕೀಲಿಸಲು ಯತ್ನಿಸಿದ.

ಆಟ ಎಷ್ಟೇ ಚಿತ್ತಾಕರ್ಷಕವಾಗಿದ್ದರೂ, ನೀಲಳ ನೇತ್ರದಿಂದ ಸಮ್ಮೋಹಿತನಾದ ಮಾಧವರಾಯನ ಕಣ್ಣುಗಳು, ಬಹುಕಾಲ ಆಟದಲ್ಲಿ ಉಳಿಯಲಾಗದೆ, ಮತ್ತೊಮ್ಮೆ ಅವಳತ್ತ ಹರಿದವು.

ಈ ಬಾರಿ ನೋಟಗಳು ಕಲೆತಾಗ, ನೀಲಳ ತುಟಿಗಳು, ಹೂವಾಗುವ ಮುನ್ನ ಬಿರಿಯುವ ಮೊಗ್ಗಿನಂತೆ ತುಸು ಅರಳಿ, ಅವಳ ಕೆಂದುಟಿಗಳ ಮೇಲೆ ನಸುನಗೆ ಮಿಂಚಿನಂತೆ ಸುಳಿದು ಮಾಯವಾಗಿ, ಮಾಧವರಾಯನ ಹೃದಯವನ್ನು ಬಲವಾಗಿ ಒತ್ತಿ ಹಿಂಡಿದಂತಾಯಿತು. ಆ ನೋವನ್ನು ಪರಿಹರಿಸಿಕೊಳ್ಳಲು ದೀರ್ಘವಾದ ನಿಟ್ಟುಸಿರಿಟ್ಟು, ಕಣ್ಣನ್ನು ಅವಳತ್ತಣಿಂದ ಸೆಳೆದುಕೊಳ್ಳಲು ಯತ್ನಿಸದೆ, ಒಂದು ಬಾರಿ ಸಂಪೂರ್ಣವಾಗಿ ನೋಡುವವನಂತೆ, ಅವಳನ್ನು ನೋಡಿದ. ನೋಡ ನೋಡುತ್ತಾ, ಅವನ ಮನಸ್ಸು ತನಗೆ ತಾನೇ ಹೇಳಿಕೊಂಡಿತು—

" ಇವಳು ಯಾರೋ ಅಪ್ಸರ ಕನ್ಯೆ ! "

ಅಪ್ಸರ ಕನ್ಯೆ, ನಿಜ, ನಾಗರತ್ನ ಎಚ್ಚರವಿಟ್ಟು ಅಲಂಕರಿಸಿದ ನೀಲಾ ಅಪ್ಸರ ಕನ್ಯೆಯಂತೆಯೇ ಇದ್ದಳು.

ಆ ದಿನ ರಾಜರಂತೆ ಅಭಿನಯಿಸಬೇಕಾಗಿದ್ದ ಇಬ್ಬರಿಗೂ, ಬಣ್ಣ ಬೇರೆಯಾದರೂ, ಒಂದೇ ರೀತಿಯ ಉಡುಪು, ಅಲಂಕಾರಗಳನ್ನು ಹಾಕಿದ್ದಳು ನಾಗರತ್ನ. ಅವರು ಧರಿಸಿದ್ದ ಉಡುಪು ಮುಸ್ಲಿಂ ರಾಜ ಪುರುಷರು ಧರಿಸುವಂಥದು. ಮೈಗೆ ಅಂಗ ರೇಖೆ, ಕೆಳಭಾಗಕ್ಕೆ ಸೊಂಟದ ಬಳಿ ಕೊಂಚ ಸಡಿಲವಾಗಿದ್ದು, ಪಾದ ಭಾಗಕ್ಕೆ ಬರುತ್ತಾ ಬಿಗಿಯಾಗಿ, ಪಾದಗಳ ಮಣಿಗಂಟುಗಳನ್ನು ಹಿಡಿದ 'ಸುರ್ವಾಲ್'; ತಲೆಗೆ ತುರಾಯಿಯಿಂದ ಅಲಂಕೃತವಾದ ರುಮಾಲು, ಕಾಲುಗಳಿಗೆ ಮಣಿಗೆಲಸದಿಂದ ಅಲಂಕೃತವಾಗಿ, ಮುಂಭಾಗದತ್ತ ಹೆಡೆ ಎತ್ತಿದ ಸರ್ಪಾಕಾರವನ್ನುಳ್ಳ ಮಖಮಲಿನ ಜೋಡು; ಸೊಂಟಕ್ಕೆ ಮುತ್ತಿನ ಸರ, ನಾಭಿ ಭಾಗದಲ್ಲಿ ಅಗಲವಾದ ಪದಕಗಳಿಂದ ಕೂಡಿದ ಬಿಗಿಯಾದ 'ಕಮರ್ ಬಂದ್', ಇದು ಅವರು ಧರಿಸಿದ ಉಡುಪು. ಆ ಉಡುಪಿನ ಮೇಲೆ ಮುಂಗೈಗೆ ಕಂಕಣ, ವಕ್ಷಸ್ಥಳಕ್ಕೊಂದು ಪದಕಸಹಿತವಾದ ನಾಲ್ಕು ಎಳೆಯ ಮುತ್ತಿನ ಮಾಲೆ—ಅಷ್ಟೇ ಅಲಂಕಾರ,

ಒಟ್ಟಿನ ಮೇಲೆ ಸರಳವಾಗಿ ರಾಜಪುರುಷರ ಗಾಂಭೀರ್ಯವನ್ನು ಎತ್ತಿ ತೋರಿಸುವಂಥ ಉಡುಪು, ಮಿತವಾದ ಅಲಂಕಾರ. ಅದರಲ್ಲಿ ಎಳ್ಳಷ್ಟೂ ಆಡಂಬರವಿರಲಿಲ್ಲ.

ಆದರೆ ಈ ಸರಳವಾದ ಪೋಷಾಕು, ಅಲ್ಪಾಭರಣಗಳನ್ನು ತನ್ನ ಮಗಳಿಗೆ ತೊಡಿಸುವ ರೀತಿಯಲ್ಲಿ ನಾಗರತ್ನ ಕಲೆಗಾರಿಕೆಯನ್ನೆಲ್ಲ ಮೆರೆದಿದ್ದಳು. ಮೇಲೆ ತೊಟ್ಟ, ಬಗಲುಗಸೆಯ ಅಂಗರೇಖು ನೀಲಳ ವಕ್ಷಸ್ಥಲದ ಅಂದವನ್ನು ಎತ್ತಿ ತೋರಿಸಿದಂತೆಯೇ, ಅದರ ಮೇಲೆ ಮಲಗಿದ ಮುತ್ತಿನ ಮಾಲೆ, ಅವುಗಳ ಗಾತ್ರವನ್ನು ಸಾಧಿಸಿ ತೋರುವಂತೆ ಏಡಿದೆತ್ತಿ, ಶಿರದಲ್ಲಿ ಧರಿಸಿದ ರುಮಾಲು ಅವಳ ಫಾಲದ ವಿಶಾಲತೆಗಿಟ್ಟ ಕಿರೀಟದಂತೆ ರಂಜಿಸಿದರೆ, ಕಮ್ಮರ್ ಬಂದ್, ನೀಲಳ ಬಡನಡುವಿನ ಭಾಗ್ಯಕ್ಕೆ ತೋರು ಬೆರಳಾಗಿತ್ತು. ಬಿಗಿಯೊದ ಸುರ್ವಾಲು ನೀಲಳ ತುಂಬುತೊಡೆಗಳಿಗೆ ತಾನು ಅಲಂಕಾರವಾಗದೆ, ತಾನೇ ಅವನ್ನು ಆಶ್ರಯಿಸಿ ಕಾಂತಿಯನ್ನು ಪಡೆದಿತ್ತು. ಅವಳು ಧರಿಸಿದ ಚಡಾವುಗಳ ಮುಂಭಾಗದಲ್ಲಿದ್ದ ಹೆಡೆಯೆತ್ತಿದ ಸುವರ್ಣ ಸರ್ಪಾಕೃತಿ, ಕಾಲತ್ತ ಸರಿದ ದೃಷ್ಟಿಯನ್ನು, ಇಲ್ಲಿ ನೋಡುವುದೇನೂ ಇಲ್ಲ ಮೇಲೆ ನೋಡು, ಎಂದು ಹೇಳುವಂತಿತ್ತು.

ಅದಕ್ಕಿಂತಲೂ ಹೆಚ್ಚಾಗಿ, ಅಂಗರೇಖು, ಸುರ್ವಾಲುಗಳ ಬಟ್ಟೆಯು, ಬಹು ತೆಳುವಾದ ಅಪರಂಜಿಯ ಛಾಯೆಯನ್ನುಳ್ಳ ಬಿಳಿವರ್ಣ, ನೀಲಳ ಮೈಬಣ್ಣದೊಂದಿಗೆ ಬೆರೆತು ಉಡುಪು ಅವಳು ಧರಿಸಿರುವಂತೆ ಕಾಣದೆ ಅದೇ ಅವಳ ಸಹಜಾವಸ್ಥೆಯೇನೋ ಎಂಬ ಭ್ರಾಂತಿ ಬರುವಂತೆ ಮಾಡುತ್ತಿತ್ತು.

ಈ ಬಗೆಯ ಉಡುಗೆ–ತೊಡಿಗೆಗಳಿಂದಾಗಿ, ನೀಲಳ ಸಹಜ ಸೌಂದರ್ಯಕ್ಕೆ ಸಾಣೆ ಇಟ್ಟಂತಾಗಿ, ನೋಡಿದವರ ಕಣ್ಣನ್ನೇ ಅಲ್ಲದೆ ಹೃದಯವನ್ನು ತುಂಬುವ ಅಪೂರ್ವ ರೂಪವತಿಯಾಗಿದ್ದಳು.

ನೀಲಳು ಲಾವಣ್ಯಾಸ್ವಾದನೆಯಲ್ಲಿ ಮಗ್ನನಾಗಿದ್ದ ಮಾಧವರಾಯ, ಇದ್ದಕ್ಕಿದ್ದ ಹಾಗೇ ಅಯ್ಯಂಗಾರ‍್ಯರು ಎಲ್ಲರಿಗೂ ಕೇಳಿಸುವಂತೆ 'ಷಾ' ಎಂದು ಹೇಳಿದುದನ್ನು ಕೇಳಿ, ಬೆಚ್ಚಿಬಿದ್ದಂತಾಗಿ ತನ್ನ ನೋಟವನ್ನು ಆಟದತ್ತ ಹೊರಳಿಸಿ, ಏನಾಯಿತೆಂದು ನೋಡಿದ—

ಅಯ್ಯಂಗಾರ‍್ಯರ ಒಂದು ಆನೆ, ಕುದುರೆ, ಒಂದು ಒಂಟೆ, ಸಚಿವ

ಬೆಂಬಲವನ್ನು ಪಡೆದು, ಚಂದ್ರಯ್ಯನ ರಾಜ, ಮಂತ್ರಿ ಇಬ್ಬರನ್ನೂ ಕಬಳಿಸಲು ವ್ಯೂಹ ರಚಿಸಿದ್ದವು.

ತನ್ನ ಸಚಿವರನ್ನೂ ಬಲಿಕೊಟ್ಟು ರಾಜನನ್ನೂ ಉಳಿಸಿಕೊಳ್ಳಲಾಗದ ಚಂದ್ರಯ್ಯ ಸೋಲು ಒಪ್ಪಿಕೊಳ್ಳಲೇಬೇಕಾಯಿತು.

ಸಭಿಕರ ಪ್ರಚಂಡ ಕರತಾಡನದೊಂದಿಗೆ ಮೊದಲ ಆಟ, ಅಯ್ಯಂಗಾರ್ಯರ ಗೆಲುವಿನಲ್ಲಿ ಮುಕ್ತಾಯವಾಯಿತು.

ರಂಗದ ಮೇಲಿದ್ದ ನರ್ತಕಿಯರೆಲ್ಲರೂ ತೆರೆಯ ಮರೆಗೆ ಸರಿದ ಬಳಿಕ, ಮಾಧವರಾಯ, ಸೋತು, ತುಂಬಿದ ಬೆವರನ್ನು ಒರಸಿಕೊಳ್ಳುತ್ತಿದ್ದ ಚಂದ್ರಯ್ಯನನ್ನು—

"ಇಷ್ಟು ಬೇಗ ಹೇಗೆ ಸೋತು ಬಿಟ್ಟೆ ಚಂದ್ರಯ್ಯ ?"

—ಎಂದು ಪ್ರಶ್ನೆ ಮಾಡಿದ.

"ಅಯ್ಯಂಗಾರ್ ಸ್ವಾಮಿಗಳು ಅದೇನು ನೋಡಿ ಮಾಡಿದರೋ ನನಗೂ ಅರ್ಥವಾಗಲಿಲ್ಲ. ನಾನೂ ಮೈಯೆಲ್ಲಾ ಕಣ್ಣಾಗಿದ್ದೆ. ಆದ್ರೆ ಯಾವ ಮಾಯದಾಗೋ ಅವರ ಒಂಟೆ, ಕುದುರೆ ನುಗ್ಗಿಸಿಬಿಟ್ಟರು, ಕಾಲಾಳು ನಿಂತದ್ದೇ ಲಾಭ ಆಯ್ತು."

—ಎಂದ ಚಂದ್ರಯ್ಯ ತನ್ನ ಬಳಿಯಿದ್ದ ಚದುರಂಗದ ಮಣೆಯನ್ನೇ "ಇದು ಹೇಗಾಯಿತು" ಎಂದು ಪರೀಕ್ಷಿಸುವ ದೃಷ್ಟಿಯಿಂದ ನೋಡುತ್ತಾ.

"ಆಯ್ತು, ಈ ಸಲವಾದರೂ ಹುಷಾರಾಗಿರು; ಹೇಗೂ ಇದು ಮೂರಾಟದ ಪಂದ್ಯ, ಒಂದರಲ್ಲಿ ಸೋತರೆ ಪರವಾ ಇಲ್ಲ."

—ಎಂದು ಚಂದ್ರಯ್ಯನಿಗೆ ಎಚ್ಚರಿಸಿ ಹೇಳಿದ ಮಾಧವರಾಯ.

"ಈ ಸಲಾನೆ— ಅದು ಹೆಂಗಾಗುತ್ತೋ ನೀವೇ ನೋಡ್ತಾ ಇರಿ."

—ಎಂದ ಚಂದ್ರಯ್ಯ—

"ಏನಾದರೂ ಹೀಗಾಗಲು ಬಿಡಬಾರದು."

—ಎಂದು ತನ್ನ ಮನಸ್ಸಿನಲ್ಲೇ ಶಪಥತೊಟ್ಟು.

ಆ ವೇಳೆ ಅಪರಾಹ್ನವಾಗಿ ಊಟದ ವೇಳೆಯಾದುದರಿಂದ, ಮತ್ತೆ ಮಧ್ಯಾಹ್ನ ಭೋಜನಾನಂತರ ಆಟ ಮುಂದುವರಿಸುವುದೆಂಬ ನಿರ್ಧಾರದೊಡನೆ ಸಭೆ ಚದುರಿತು.

ಮಧ್ಯಾಹ್ನ ಎರಡನೆಯ ಆಟ ಆರಂಭಿಸುವಾಗ ಚಂದ್ರಯ್ಯ—

"ಬೆಳಿಗ್ಗೆ ಹೇಗೋ ಬಿಟ್ಟೆ. ಆದ್ರೂ ಈ ಸಲ, ಈ ಪೆದ್ದ ಅದೇನು ಚಾಲೂಕಿ ತೋರಿಸ್ತಾರೊ ತೋರಿಸಲಿ. ಮೂರು ಮೂರು ದಿನ ಹೆಣಗಿಸ ದಿದ್ರೆ ನನ್ನ ಹೆಸರು ಚಂದ್ರಯ್ಯನೇ ಅಲ್ಲ."

—ಎಂಬ ಹಟದಿಂದ ಆಟಕ್ಕೆ ಕುಳಿತ.

ಆ ಹಟದಿಂದ ಬಿರುಸಾದ ಚಂದ್ರಯ್ಯನ ಮುಖವನ್ನು ನೋಡಿ ಅಯ್ಯಂಗಾರ್ಯರು ನಗುತ್ತಾ—

"ಮುದುಕನ ಮೇಲೆ ಕರುಣೆ ಇರಲಿ ಚಂದ್ರಯ್ಯ. ಒಂದೇ ಸಲಕ್ಕೆ ನುಂಗಿ ನೀರು ಕುಡಿದು ಬಿಡಬೇಡ."

—ಎಂದು ಹೇಳಿ ಸಭೆಯನ್ನು ತಮ್ಮ ಮಾತಿನಿಂದ ನಗಿಸಿ—

"ಈ ಸಲ ನಿನ್ನ ಸರದಿ. ಅದೇನು ಬ್ರಹ್ಮಾಸ್ತ್ರ ಬಿಡ್ತೀಯೋ ಬಿಡು."

—ಎಂದು ಹೇಳಿದರು.

ಮೊದಲ ಆಟದಲ್ಲಿ ಅಯ್ಯಂಗಾರ್ಯರ ನಡೆಯ ರೀತಿಗಳನ್ನು ಕೊಂಚ ಅರ್ಥಮಾಡಿಕೊಂಡಿದ್ದ ಚಂದ್ರಯ್ಯ ಯಾವ ಬಗೆಯ ಅಳುಕು, ಭೀತಿ ಯನ್ನೂ ತೋರ್ಪಡಿಸದೆ, ತನ್ನ ಕಾಲಾಳನ್ನು ನಡೆಸಿದ.

ಅದಕ್ಕೆ ಉತ್ತರವಾಗಿ ಅಯ್ಯಂಗಾರ್ಯರು, ಚಂದ್ರಯ್ಯನ ಕಾಲಾಳಿಗೆ ತಮ್ಮ ಕಾಲಾಳನ್ನು ಆಹುತಿ ಕೊಡಲೆಂಬಂತೆ ತಮ್ಮ ಕಾಲಾಳನ್ನು ನಡೆ ಸಿದರು.

ಆಟ ಆರಂಭವಾಗುತ್ತಿದ್ದ ಹಾಗೇ, ಚಂದ್ರಯ್ಯನ ಸೋಲು–ಗೆಲವು ಗಳಲ್ಲಿ ವೈಯಕ್ತಿಕ ಆಸಕ್ತಿ ವಹಿಸಿದ್ದ ಮಾಧವರಾಯ, ಬೆಳಗಿನ ಸೆಳೆತಕ್ಕೆ ತನ್ನ ಚಿತ್ತವನ್ನು ಸೋಲಲು ಬಿಡದೆ, ಆಟಕ್ಕೆ ಮಾಸಲು ಮಾಡಿದ.

ಹುರುಡಿನಿಂದ ಆಟಕ್ಕೆ ಕುಳಿತು, ಅದಕ್ಕಿಂತ ಜಾಗ್ರತೆಯಿಂದ ತನ್ನ ಕಾಯಿಗಳನ್ನು ನಡೆಸುತ್ತಿದ್ದ ಚಂದ್ರಯ್ಯನೂ, ಅಯ್ಯಂಗಾರ್ಯರ ನಡೆಗಳ ಸಂಧಾನ, ಅನುಸಂಧಾನ, ಉಪಸಂಹಾರ ಚತುರತೆಯನ್ನು ಮೆಚ್ಚಿ, ಹಲವು ಬಾರಿ ತಾನೇ ಶಹಭಾಸ್ ಎಂದು ಹೇಳಬೇಕಾಯಿತು. ಆದರೂ ಆ ಮೆಚ್ಚಿಗೆ ಯಲ್ಲಿ ಮೈಮರೆಯದೆ ಎಚ್ಚರದಿಂದ ಆಡತೊಡಗಿದ. ಈ ಆಟದಲ್ಲಿ ಸೋತರೆ ಸ್ಪರ್ಧೆಯಲ್ಲೇ ಸೋತ ಹಾಗೆ ಎಂಬ ಅರಿವು ಇದ್ದುದರಿಂದ ಚಂದ್ರಯ್ಯ, ಒಂದೊಂದು ಕಾಯನ್ನು ನಡೆಸುವಾಗಲೂ ನೂರು ಬಾರಿ ಯೋಚಿಸಿ ನಡೆಸ ತೊಡಗಿದ.

ಚಂದ್ರಯ್ಯ ಮೊದಲ ಆಟದಲ್ಲಿ ವ್ಯಕ್ತಪಡಿಸಿದ ಕೊಲ್ಲುವ ಮನೋಭಾವವನ್ನು ಬದಲಾಯಿಸಿದುದನ್ನು ನೋಡಿ ಅಯ್ಯಂಗಾರ್ಯರೂ ಅಷ್ಟೇ ಎಚ್ಚರವಾಗಿ ಆಡತೊಡಗಿದರು.

ಆದರೂ ಅವರು ಆಟವಾಡುತ್ತಿದ್ದ ರೀತಿಯನ್ನು ನೋಡಿದರೆ, ಆದಷ್ಟು ಬೇಗ ಈ ಆಟ ಮುಗಿಸೋಣ, ಈ ಆಟದಲ್ಲಿ ಸೋತರೂ ಮುಂದಿನ ಆಟದಲ್ಲಿ ಗೆದ್ದರಾಯಿತು' ಎಂಬ ಉದಾಸೀನದ ಧೋರಣೆಯಿಂದ ಆಟವಾಡುತ್ತಿರುವಂತಿತ್ತು — ಅವರು 'ಕಡಿತ'ವಾಗುವ ರೀತಿಯಲ್ಲೇ ಕಾಯಿಗಳನ್ನು ನಡೆಸುತ್ತಿದ್ದುದನ್ನು ನೋಡಿದರೆ.

ಉಳಿದವರಿಗೆ ಅವರ ಆಟ ಹಾಗೆ ಕಾಣುತ್ತಿದ್ದರೂ, ಅಯ್ಯಂಗಾರ್ಯರು ಮೈಮರೆತಾಗಲೀ, ಉದಾಸೀನ ಭಾವದಿಂದಲಾಗಲೀ ಆಟವಾಡುತ್ತಿರಲಿಲ್ಲ. ತಮ್ಮ ಕಾಯನ್ನು 'ಕಡಿತ'ಕ್ಕೇ ಒಡ್ಡುತ್ತಿದ್ದ ನಡೆಯಲ್ಲಿ 'ಕೊಲ್ಲು' ಇಲ್ಲವಾದರೆ ನೀನು ಸಾಯುತ್ತೀಯ' ಎಂಬ ಭಯೋತ್ಪಾದಕವಾದ ಸವಾಲು ಅಡಗಿತ್ತು. ಹಾಗೆ ಅವರ ಕಾಯನ್ನು ಕೊಲ್ಲಲು ಯತ್ನಿಸಿ, ಮುಂದೆ ಹಾಯ್ದರೆ ತನ್ನ ರಕ್ಷಣಾ ವ್ಯೂಹ ಸಡಿಲವಾಗುತ್ತದೆ, ಆ ಬಿರುಕಿನ ಮೂಲಕ ಅವರ ಪ್ರಧಾನ ಕಾಯಿಗಳು ತನ್ನ ಪಡೆಯ ಮೇಲೆ ಧಾಳಿ ಮಾಡುತ್ತವೆ, ಎಂಬುದನ್ನು ಅರ್ಥಮಾಡಿಕೊಂಡ ಚಂದ್ರಯ್ಯ, ಆ ಗಾಳಕ್ಕೆ ತನ್ನ ಕತ್ತನ್ನು ಒಡ್ಡದೆ, ಕೇವಲ ತನ್ನ ಕಾಯಿಗಳನ್ನು ರಕ್ಷಿಸಿಕೊಳ್ಳುತ್ತಾ, ಮುಂದೆ ನುಗ್ಗಲು ಅನುವು ದೊರೆಯುವುದನ್ನೇ ಕಾಯುತ್ತಿದ್ದ.

ಅವರಿಬ್ಬರ ಈ ಚಾಕಚಕ್ಯತೆಯಿಂದಾಗಿ, ಅರ್ಧ ಗಂಟೆಗೆ ಒಂದು ನಡೆಯೂ ಆಗದೆ, ಸಂಜೆಯಾಗಿ, ಬೆಳಕಿಗಾಗಿ ವೇದಿಕೆಯ ಸುತ್ತಲೂ ನಂದಾದೀಪಗಳು, ಹಣತೆಗಳು, ಪಂಜು ದೀವಟಿಗೆಗಳನ್ನು ಉರಿಸಬೇಕಾಯಿತು.

ಎಷ್ಟು ದೀಪ ಹೊತ್ತಿಸಿದರೂ ಕತ್ತಲಾಗಿಯೇ ಕಾಣುತ್ತಿದ್ದ ಆ ವಿಶಾಲವಾದ ಚಪ್ಪರದಲ್ಲಿ, ರಾತ್ರಿ ಹತ್ತು ಗಂಟೆಯವರೆಗೂ ಆಟ ಮುಂದುವರಿದು, ಕಾಯಿಗಳಾಗಿ ನಿಂತ ಹುಡುಗಿಯರು ಇನ್ನು ಸ್ವಲ್ಪ ಹೊತ್ತು ನಿಂತರೂ ಕುಸಿದು ಬೀಳುತ್ತಾರೆ ಎಂಬ ಪರಿಸ್ಥಿತಿ ಪ್ರಾಪ್ತವಾದಾಗ, ಅಯ್ಯಂಗಾರ್ಯರೇ—

"ಆಟ ಈ ರಾತ್ರಿಗೆ ಮುಗಿಯೋ ಲಕ್ಷಣ ಕಾಣುವುದಿಲ್ಲ, ಬೇಕ

ಆಟ ಇಲ್ಲಿಗೆ ನಿಲ್ಲಿಸಿ, ನಾಳೆ ಪ್ರಾತಃಕಾಲ ಮುಂದುವರಿಸಬಹುದು. ಇಲ್ಲ ಹೀಗೆ ಮುಂದುವರಿಯಬೇಕು ಎಂಬ ಆಸೆ ಚಂದ್ರಯ್ಯನವರಿಗಿದ್ದರೆ, ಆ ಹುಡುಗಿಯರಾದರೂ ಹೋಗಿ, ಊಟ ನಿದ್ರೆ ಮಾಡಲಿ."

—ಎಂದು ಹೇಳಿದರು.

ಚಂದ್ರಯ್ಯನಿಗೆ ಆಟವನ್ನು ಹಾಗೇ ಮುಂದುವರಿಬೇಕೆಂಬ ಆಸೆ ಯಿದ್ದರೂ, ಅಯ್ಯಂಗಾರ್ಯರ ವಯಸ್ಸು, ಮತ್ತು ಅವರು ಹೇಳಿದ ಮಾತಿನ ಸೂಕ್ತತೆಯನ್ನು ಅರಿತುಕೊಂಡು—

''ಆಯಿತು,ಆಟ ನಾಳೆ ಬೆಳಿಗ್ಗೆಯೇ ಮುಂದುವರಿಯಲಿ"

—ಎಂದು ಒಪ್ಪಿಕೊಂಡ.

ಆವರವರ ಚದುರಂಗದ ಮಣೆಗಳು, ಅವನ್ನು ನೋಡಿಕೊಳ್ಳುತ್ತಿದ್ದ ವರ ವಶದಲ್ಲೇ, ಹೇಗಿದೆಯೋ ಹಾಗೆ ಎಚ್ಚರವಾಗಿ ನೋಡಿಕೊಳ್ಳಬೇಕು ಎಂದು ಎಚ್ಚರಿಕೆ ಕೊಟ್ಟ ಬಳಿಕ, ಅಂದಿನ ಮಟ್ಟಿಗೆ ಸಭೆ ಚದುರಿತು.

ಸಭೆಯಲ್ಲಿ ಕಲೆತ ಜನರೆಲ್ಲಾ ಚದುರಿ, ಅತಿಥಿಗಳೆಲ್ಲರೂ ಅವರವರ ನಿವಾಸಕ್ಕೆ ತೆರಳಿದ ಬಳಿಕ ಮಾಧವರಾಯ ಚಂದ್ರಯ್ಯನೊಂದಿಗೆ ತನ್ನ ಮನೆಗೆ ಹೊರಟು, ಹೋಗುತ್ತಾ ದಾರಿಯಲ್ಲೇ—

''ಅಯ್ಯಂಗಾರ್ಯರು ಹೇಗೆ ಚಂದ್ರಯ್ಯ ?"

—ಎಂದು ಕೇಳಿದ ಮಾಧವರಾಯ,

"ನೀವು ನೋಡ್ತಾ ಇದೀರಲ್ಲ, ಬಹಳ ಬಿಸಿ. ನಾನೂ ಎಷ್ಟೋ ಜನ ನಿಪುಣರ ಜೊತೇಲಿ ಆಡಿದೀನಿ. ಆದರೆ ಯಾರ ಜೊತೇಲಿ ಆಡಿ ದಾಗಲೂ ಹೀಗೆ ಉಸಿರು ಕಟ್ಟಿದ ಹಾಗೆ ಆಗ್ತಾ ಇರಲಿಲ್ಲ. ಇವರ ಹತ್ತಿರ ಆಡೋದೊಂದ್ರೆ ಕತ್ತಿ ಮೇಲೆ ಸಾಮು ಮಾಡಿದ ಹಾಗೆ. ಹೆಜ್ಜೆ ತಪ್ಪಿದರೆ ಸಾವು ಸಿದ್ಧ."

"ಹಾಗೇ.... ಈ ಆಟ ಹ್ಯಾಗೆ ಆಗಬಹುದೂಂತೀಯ ?"

"ಅಂದರೆ ?"

"ನೀನು ಗೆಲ್ತೀಯೋ ಹ್ಯಾಗೇಂತ?...."

"ಅದು ಹ್ಯಾಗೆ ಹೇಳಲಿ ? ಈಗಿರೋ ಹಂಗೆ ; ಅವರಿಗೆ ನಾನು ಅಷ್ಟು ದಿಗ್ಬಂಧನ ಮಾಡಿದೀನಿ, ಆದರೆ ಅಯ್ಯಂಗಾರ್‌ಸ್ವಾಮಿಗಳ ಬತ್ತಳಿಕೇಲಿ

ಏನೇನು ಅಸ್ತ್ರ ಇವೆಯೋ ಯಾರು ಬಲ್ಲರು? ಹೀಗೇಂತ ಹೇಳೋದು ಸಾಧ್ಯವಿಲ್ಲ."

"ಅಂತೂ ಆಟ ಇನ್ನೂ ತಕ್ಕಡೀಲೇ ಇರೋದೂನ್ನು...."

"ಹೂ"

"ನಾಳೇನಾದ್ರೂ ಮುಗಿಯುತ್ತೋ ಇಲ್ವೋ?"

"ಅದೂ ಹೇಳೋದು ಕಷ್ಟಾನೇ...."

"ಹಾಗಾದ್ರೆ ಆ ಹುಡುಗೀರಿಗೆ ಗೋವಿಂದನೇ ಗತಿ ಅನ್ನು. ನಿಮ್ಮಾಟದ ನಿಧಾನಕ್ಕೆ ನಿಂತು ನಿಂತು ಕಂಚಿನ ಕಾಲಾದ್ರೂ ಮರಗಟ್ಟಿ ಹೋಗುತ್ತೆ ....ಅಂದಹಾಗೆ ಚಂದ್ರಯ್ಯ...."

"ಏನು ಯಜಮಾನ್ರೆ?"

"ನಿನ್ನ ಕಡೆ ರಾಜನ ವೇಷ ಹಾಕಿತ್ತಲ್ಲಾ ಆ ಹುಡುಗಿ ಯಾರು?"

"ಅದೇ ನಾಗರತ್ನನ ಮಗಳು ಸೀಲಾ. ಯಾಕೆ?"

"ಏನೂ ಇಲ್ಲ ಸುಮ್ಮನೆ ಕೇಳಿದೆ."

—ಎಂದು ಆ ಮಾತನ್ನು ಅಲ್ಲಿಗೇ ನಿಲ್ಲಿಸಿದ ಮಾಧವರಾಯ.

ತನ್ನ ಆಟದ ಚಿಂತೆಯಲ್ಲಿ ಯಾವ ಮಾತೂ ಬೇಡವಾದ ಚಂದ್ರಯ್ಯನೂ ಆ ಮಾತನ್ನು ಮುಂದುವರಿಸುವ ಪ್ರಯತ್ನ ಮಾಡಲಿಲ್ಲ. ಅವನ ತಲೆ ನೂರಾರು ಬಗೆಯ ನಡೆಗಳ ಹಾವಿನ ಹುತ್ತವಾಗಿತ್ತು.

## ೧೧

ಆ ದಿನ ಇರುಳು—

ಚಂದ್ರಯ್ಯನಿಗೆ ಮರುದಿನದ ಚದುರಂಗದಾಟದ ಚಿಂತೆಯಾದರೆ, ಮಾಧವರಾಯನಿಗೆ, ಆ ಆಟದ ರಾಜನಾದ ಸೀಲಾಳ ಚಿಂತೆಯಾಗಿತ್ತು.

ಅವರಿಬ್ಬರೂ ಆ ಚಿಂತೆಯಲ್ಲಿದ್ದರೆ, ನಾಗರತ್ನ ಅಯ್ಯಂಗಾರ್ಯರಿಗೆ ಮತ್ತೊಂದು ಚಿಂತೆಯನ್ನು ತಂದು ಒಡ್ಡಿದ್ದಳು.

ಚದುರಂಗದಾಟದಿಂದ ಹಿಂದಿರುಗಿದ ಹುಡುಗಿಯರೆಲ್ಲರೂ, ಚಪ್ಪರದಿಂದ ಮನೆಗೆ ಬರುತ್ತಿದ್ದ ಹಾಗೇ ಒಬ್ಬರು ಕಾಲುನೋವು, ಮತ್ತೊಬ್ಬರು

ಸೊಂಟ ನೋವು, ಮಗದೊಬ್ಬರು ಬೆನ್ನುನೋವು, ನಾಲ್ಕನೆಯವರು ಪಕ್ಕೆ ಹಿಡಿದು ಕೊಂಡಿದೆ ಎಂದು ಗೊಣಗಲಾರಂಭಿಸಿದರು. ಅವರೆಲ್ಲರಿಗೂ ಮೈ ಕೈ ಉಜ್ಜಿಸಿ, ಬಿಸಿನೀರು ಹಾಕಿಸಲು ವ್ಯವಸ್ಥೆ ಮಾಡಿ, ಎಲ್ಲರದೂ ಊಟ ವಾದ ಬಳಿಕ, ನಾಗರತ್ನ, ಅಯ್ಯಂಗಾರ್ಯರಿಗೆ ಕಾಲು ನೀವಲು ತಾನೇ ಎಣ್ಣೆ ಬಟ್ಟಲನ್ನು ತೆಗೆದುಕೊಂಡು ಹೋಗಿ. ಕಾಲುಚಾಚಿ ಮಲಗಿದ ಅಯ್ಯಂಗಾರ್ಯರ ಕಾಲಿಗೆ ಎಣ್ಣೆ ತಿಕ್ಕುತ್ತಾ—

'ನಾಳೇನಾದ್ರೂ ನಿಮ್ಮ ಆಟ ಮುಗಿಯುತ್ತೋ ಇಲ್ವೋ ?'

—ಎಂದು ಕೇಳಿದಳು.

'ಯಾಕೆ ?'

'ಇವತ್ತೇ ಹುಡುಗೇರಿಗೆಲ್ಲಾ ಸಾಕೋ ಸಾಕಾಗಿ ಹೋಗಿದೆ. ಇನ್ನು ನಾಳೇನೂ ಹೀಗೇ ಆದ್ರೆ, ನಾಳಿದ್ದು ಬೆಳಿಗ್ಗೆ ಒಬ್ಬರಿಗೂ ಎದ್ದು ನಿಲ್ಲೋ ತ್ರಾಣ ಇರೋದಿಲ್ಲ. ಆಮೇಲೆ ಏನಾದರೂ ಹೆಚ್ಚು ಕಡಿಮೆ ಆದ್ರೆ, ನಾನು ಸಾಯೋವರೆಗೆ ತಲೆಕುಕ್ಕಲು ಅನುಭವಿಸಬೇಕು. ಅದಕ್ಕೇ ಹ್ಯಾಗಾದ್ರೂಮಾಡಿ, ನಾಳೆ ಆಟ ಮುಗಿಸಿಬಿಡಿ.'

'ಆಟ ಮುಗಿಸೋದು, ಬಿಡೋದು ನನ್ನ ಕೈಲಿದೆಯೇ ?'

'ಮತ್ತೆ ಯಾರ ಕೈಲಿದೆ ?'

'ನನ್ನ ಕೈಲಿದ್ದಷ್ಟೇ ಚಂದ್ರಯ್ಯನ ಕೈಲೂ ಇದೆ. ಇಬ್ಬರಲ್ಲಿ ಒಬ್ಬರು ಸೋಲದೆ ಆಟ ಮುಗಿಯೋದು ಹ್ಯಾಗೆ ?'

'ಅವರನ್ನು ಸೋಲಿಸೋಕೆ ನಿಮ್ಮ ಕೈಲಾಗೊಲ್ವೆ ?'

'ಚದುರಂಗ ಕೈಯಿಂದ ಆಗೋ ಕೆಲಸವಲ್ಲ; ತಲೆಯಿಂದ ಆಗಬೇಕು. ಈಗ ಯಾರ ತಲೆ ಗಟ್ಟಿ ಅಂತಾಲೇ ಇಬ್ಬರೂ ನೋಡ್ತಾ ಇದೀವಿ.'

"ನೀವು ತಲೆ ಓಡಸ್ತೀರೋ, ಕೈ ಓಡಸ್ತೀರೋ ಅಂತೂ, ಹೇಗಾ ದ್ರಾಗಲೀ, ನಾಳೆಗೆ ಈ ಆಟ ಮುಗಿಸಿಬಿಡಿ. ನಿಮ್ಮ ಹಂಗೆ ಆಡೋರು ಈ ಸೀಮೇಲೇ ಇಲ್ಲ ಅಂತ ಹೆಸರು ತಗೊಂಡಿದೀರಿ ಅಂಥೋರಿಗೆ ಇದೊಂದು ದೊಡ್ಡ ಕಷ್ಟಾನಾ ? ನೀವು ಮನಸ್ಸು ಮಾಡಿದ್ರೆ ಇದು ನಿಮಗೆ ಚಿಟಿಕೆ ಹೊಡೆಯೋ ಅಷ್ಟರಲ್ಲಿ ಮುಗಿಯೋ ಕೆಲಸ. ನಾಳೆ ನೀವು ಚಂದ್ರಯ್ಯನ್ನ ಸೋಲಿಸದೆ ಹೋದ್ರೆ ನಿಮಗೆ ಬಿರುದು ಬಂದದ್ದು ವ್ಯರ್ಥ.'

—ಎಂದು ಅಯ್ಯಂಗಾರ್ಯರ ಆತ್ಮಾಭಿಮಾನವನ್ನು ಕೆರಳಿಸಿ ಹೇಳಿದಳು ನಾಗರತ್ನ.

'ಆ ಪ್ರಜ್ಞೆ ನನಗೂ ಇದೆ. ಅದಕ್ಕೇನು ಬೇಕೋ ಅದನ್ನು ನಾನೂ ಮಾಡ್ತೀನಿ, ಎಂದು ಹೇಳಿ, ಒಂದುಗಳಿಗೆ ಸುಮ್ಮನಿದ್ದು, ಬಳಿಕ ಬೇರೇನೋ ಜ್ಞಾಪಿಸಿಕೊಂಡು—

'ಅಂದಹಾಗೆ....ಮರತೇಬಿಟ್ಟಿದ್ದೆ....ನಿನಗೊಂದು ಮಾತು ಹೇಳೋದಿತ್ತು ನಾಗರತ್ನ....

—ಎಂದರು ಅಯ್ಯಂಗಾರ್ಯರು.

'ಏನು ?'

"ಅವತ್ತು ಆಟ ನಡೀತಾ ಇರೋವಾಗ ನೀಲಾ ಕಣ್ಣು ಎಲ್ಲಿತ್ತು, ಏನು ಕೆಲಸ ಮಾಡುತ್ತಿತ್ತು....ನೋಡಿದೆಯೊ ?"

"ಇಲ್ಲ. ನನ್ನ ಗಮನ ಎಲ್ಲ ನಿಮ್ಮ ಆಟದ ಮೇಲಿತ್ತು. ನೀಲಾ ಏನು ಮಾಡಿದಳು ?...."

"ರೆಪ್ಪೆ ಹೊಯ್ಯದೆ ಮಾಧವರಾಯರನ್ನೇ ನೋಡ್ತಾ ಇದ್ದಳು...."

"ಹಾಗೇ...."

"ಹಾಗೇ ಅನ್ನೋದೇನು—ನೋಡೋದೇನು, ನಗೋದೇನು.... ಇದೆಲ್ಲಾ ಲಕ್ಷಣ ಅಲ್ಲಾಂತ ನೀಲಾಗೆ ಹೇಳು. ಮೊದಲೇ ನಿಮ್ಮ ಜಾತಿ ಹೆಸರು ಹೇಳಿದರೆ ಜನ ಪೋಲಿಕೆ, ಬೂದಿ ಅಂತಾರೆ. ಇಲ್ಲೇನಾದರೂ ಅಚಾತುರ್ಯವಾದರೆ ಬಹಳ ಅಪಖ್ಯಾತಿ ಅನುಭವಿಸಬೇಕಾಗುತ್ತೆ. ನಾಳೆ, ಊರಿನ ಜನವೆಲ್ಲಾ ನನ್ನ ನಿನ್ನ ಹೆಸರು ಹೇಳಿಕೊಂಡು ಕಲ್ಲು ಎಸೀತಾರೆ. ಒಳ್ಳೇರು ಅಂತ ಅನ್ನಿಸಿಕೊಂಡು ಬಂದ ಹಾಗೆ ಎಲ್ಲಾರ ಕೈಲೂ ಒಳ್ಳೇರು ಅಂತ ಅನ್ನಿಸಿಕೊಂಡು ಹೋಗಿ. ಮತ್ತೆ ಹತ್ತುಸಲ ಈ ಊರಿಗೆ ಬರೋ ಹಾಗೆ ಇರಬೇಕು. ಹಾಗೆ ಗಂಭೀರನಾಗಿ ಇರೋಕೆ ಸಾಧ್ಯ ಇಲ್ಲಾಂದ್ರೆ ನಾಳೆ ಅವಳನ್ನು ಅಲ್ಲಿಗೆ ಕಳಿಸಲೇ ಬೇಡ."

—ನಿಷ್ಠುರತೆ ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದರು, ಅಯ್ಯಂಗಾರ್ಯರು.

"ಹಾಗೇ....ಇದ್ಯಾವುದೂ ನನಗೆ ಗೊತ್ತಿರಲಿಲ್ಲ. ನಾನು ಅವಳಿಗೆ

ಬುದ್ಧಿ ಹೇಳ್ತೀನಿ....ಅಂದಹಾಗೆ ಇವಳ ಚೆಲ್ಲಾಟ ಅವರ ಕಣ್ಣಿಗೇ ನಾದ್ರೂ ಬಿತ್ತೆ ? "

" ಬೀಳದೆ ಇರುತ್ಯೇ ನಾಗರತ್ನ....ನೀನು ಒಳ್ಳೆ ಲೋಕ ತಿಳೀದೋಳ ಹಾಗೆ ಮಾತಾಡ್ತೀಯಲ್ಲ. ನೀಲಾ ಅಂಥ ಹುಡುಗಿ, ನನ್ನ ಕಡೆ ನೋಡಿ ಅಂತ ಏನು ಮಂತ್ರಾಕ್ಷತೆ ಕೊಟ್ಟು ಔತಣಕ್ಕೆ ಹೇಳಬೇಕೆ? ಎಂಥೋರೂ ಒಂದು ಸಲ ನೋಡೋಣ ಅನ್ನೋ ಹಾಗಿದಾಳೆ ಇವಳು. ಹಾಗಿರೋಳು ಆ ರೂಪಕ್ಕೆ ನಗುವಿನ ಒಗ್ಗರಣೆ ಹಾಕಿದ್ರೆ ಯಾರ ಮನಸ್ಸು ತಾನೇ ಕೆಡೋಲ್ಲ. ಇವಳು ಒಂದು ಸಲ ನೋಡಿದ್ರೆ, ಮಾಧವರಾಯರು ಹತ್ತು ಸಲ ನೋಡ್ತಾ ಇದ್ರು. ಅದು ಕಂಡೇ ನನಗೆ ಬೇಸರವಾದದ್ದು. ಇವತ್ತು ಅವಳಿಗೆ ಸ್ವಲ್ಪ ಬುದ್ಧಿ ಹೇಳು.

"ಖಂಡಿತವಾಗೂ ಹೇಳ್ತೀನಿ.'

—ಎಂದು ಹೇಳಿದಳು ನಾಗರತ್ನ.

''ಹಾಗಿದ್ರೆ ಸರಿ, ನೋಡು....ನೀನು ನನ್ನ ಕೈಕಾಲು ನೀವಿದ್ದು ಸಾಕು. ನಿನ್ನ ಪೆಟ್ಟಿಗೇಲಿರೋ ಚದುರಂಗದ ಹಾಸು, ಕಾಯಿ ತಂದು ಕೊಟ್ಟು ನೀನು ಮಲಗಿಕೋ ಹೋಗು."

—ಎಂದು ಅಪ್ಪಣೆ ಮಾಡಿದರು ಅಯ್ಯಂಗಾರ್ಯರು.

ಅವರ ಮಾತಿನಂತೆಯೇ ನಾಗರತ್ನ ಚದುರಂದ ಹಾಸು ಕಾಯಿ ಗಳನ್ನು ತಂದು ಅಯ್ಯಂಗಾರ್ಯರ ಮುಂದಿಟ್ಟು ಹೋದಳು.

ಹಾಸಿದ ಮೇಲೆ, ಆಟ ನಿಂತಾಗ ಯಾವ ಕಾಯಿ ಎಲ್ಲಿತ್ತು ಎಂದು ಯೋಚಿಸಿ, ಅದೇ ರೀತಿಯೇ ಎರಡು ಬಲದ ಕಾಯಿಗಳನ್ನು ಹೂಡಿಕೊಂಡು ಆಲೋಚನೆ ಮಾಡುತ್ತಾ ಕುಳಿತರು.

ಅತ್ತ ಒಳಮನೆಯಲ್ಲಿ ಮಲಗಿದ ನಾಗರತ್ನಳ ಮನದಲ್ಲೂ ಬೇರೊಂದು ಬಗೆಯ ಚದುರಂಗದಾಟ ನಡೆಯುತ್ತಿತ್ತು.

## ೧೨

ಮರುದಿನ ಪ್ರಾತಃಕಾಲ ಹಿಂದಿನ ದಿನದಂತೆಯೇ ದೇವತಾಪೂಜೆ ಯಾದ ಬಳಿಕ ಆಟ ಆರಂಭವಾಯಿತು.

ಆಟ ಆರಂಭವಾಗಿ ವೇದಿಕೆಯ ಮೇಲೆ ನರ್ತಕಿಯರ ಪ್ರವೇಶವಾಗುತ್ತಿದ್ದ ಹಾಗೇ, ಮಾಧವರಾಯನ ಕಣ್ಣು ನೀಲಳನ್ನು ಅರಸಿತು. ಆದರೆ ಆ ದಿನ ನೀಲಳ ಬದಲಾಗಿ ಆ ಸ್ಥಾನದಲ್ಲಿ ಬೇರೊಬ್ಬ ಹುಡುಗಿ ಇದ್ದುದನ್ನು ಕಂಡು, ಮಾಧವರಾಯನಿಗೆ ಆಶ್ಚರ್ಯವಾಯಿತು. ಹಾಗೇ ಪ್ರೇಕ್ಷಕರಾಗಿ ಕುಳಿತ ಪಟ್ಟಣದ ಜನರ ಮಧ್ಯೆ ಅವಳೆಲ್ಲಾದರೂ ಕುಳಿತಿರಬಹುದೇನೋ ಎಂದು ಸುತ್ತಲೂ ಕಣ್ಣಾಡಿಸಿ ನೋಡಿದ.

ನೀಲ ಎಲ್ಲಿಯೂ ಕಾಣಲಿಲ್ಲ.

ಆ ನಿರಾಶೆಯೊಂದಿಗೆ, ಹಿಂದಿನ ದಿನದ ವಿಷಯದಿಂದ ಆ ಹುಡುಗಿ ಏನಾದರೂ ಹಾಸಿಗೆ ಹಿಡಿದಿರಬಹುದೇ, ಎಂಬ ಚಿಂತೆಯೂ ಬೆರೆತು, ಮಾಧವರಾಯನಿಗೆ ರಂಗೇರಿದ ಆಟದಲ್ಲೂ ಆಸಕ್ತಿ ತಪ್ಪಿಹೋಯಿತು,

ಆ ಚಿಂತೆಯನ್ನು ಮರೆತು, ಆಟದಲ್ಲಿ ತನ್ನ ಮನಸ್ಸನ್ನು ತೊಡಗಿಸಬೇಕೆಂದು ಎಷ್ಟೆಷ್ಟು ಪ್ರಯತ್ನಪಟ್ಟರೂ ಅದು ಸಾಧ್ಯವಾಗದೆ, ಚಂದ್ರಯ್ಯನಿಗೆ—

"ಆಟಾ ನಡೀತಾ ಇರ್ಲಿ ಚಂದ್ರಯ್ಯ, ನನಗ್ಯಾಕೋ ಆಯಾಸವಾದ ಹಾಗಿದೆ. ಮನೆಗೆ ಹೋಗಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು ಬರುತ್ತೇನೆ."

---ಎಂದು ಹೇಳಿ, ಚಪ್ಪರವನ್ನು ಬಿಟ್ಟು ಹೊರಗೆ ಬಂದು ಎತ್ತಲೋ ಹರಿಯುತ್ತಿದ್ದ ಬುದ್ಧಿಯನ್ನು ಸ್ಥಿಮಿತಕ್ಕೆ ತಂದುಕೊಳ್ಳಲೆಂದು, ಹಳ್ಳಿಯ ಗದ್ದಲವನ್ನು ದಾಟಿ ನದಿಯ ದಂಡೆಯ ಕಡೆ ತೆರಳಿದ.

ನೆಲದ ಮಟ್ಟದಿಂದ ಹತ್ತು ಹನ್ನೆರಡು ಅಡಿಗಳ ಕೆಳಗೆ, ವಿಶಾಲವಾದ ಸೈಕತ ಶಯ್ಯೆಯಲ್ಲಿ ಕ್ಷೀಣವಾದ ನದಿಯ ನೀರು, ಬೆಳಗಿನ ಬೆಳಕಿನಲ್ಲಿ ಬೆಳ್ಳಿಯ ಫಲಕದಂತೆ ಹೊಳೆಯುತ್ತಿತ್ತು.

ನದಿಯ ದಂಡೆಯಲ್ಲಿ ನಾಕಷ್ಟು ಜನ ಗ್ರಾಮಸ್ತ್ರೀಯರ ಸಮೂಹ ನೆರೆದಿದ್ದುದರಿಂದ, ಅಲ್ಲಿ ಏಕಾಂತತೆಗೆ ಅವಕಾಶ ಸಿಗದೆ, ದಂಡೆಯುದ್ದಕ್ಕೂ ನಡೆದು ನಿರ್ಜನ ಸ್ಥಳವೊಂದನ್ನು ಅರಸಿ, ನದಿಯ ಪಾತ್ರದಲ್ಲಿದ್ದ ಬಂಡೆಯೊಂದರ ಮೇಲೆ, ನೀರಿನಲ್ಲಿ ಕಾಲು ಬಿಟ್ಟು, ನದಿಯ ದಂಡೆಯಲ್ಲಿ ಬೆಳೆದ ತೆಂಗು,ಅಡಿಕೆಯ ತೋಟದ ಹಸಿರುಗರಿಗಳನ್ನು ನೋಡುತ್ತಾ ಕುಳಿತುಕೊಂಡ.

ನದಿಯ ಬಳಿಯ ವಾತಾವರಣವೇನೋ ಪ್ರಶಾಂತವಾಗಿತ್ತು.

ಆದರೆ ಆ ಪ್ರಶಾಂತತೆ ಮಾಧವರಾಯನಲ್ಲ ಶಾಂತಿಯನ್ನು ಮೂಡಿಸದೆ ಅಶಾಂತಿಯನ್ನೇ ಕಲಕಿತು.

ಹಿಂದಿನ ದಿನ ಚದುರಂಗದ ವೇದಿಕೆಯ ಮೇಲೆ ಕಂಡ ಸೀಲಳ ರೂಪು, ಮಾಧವರಾಯನಲ್ಲಿ ಬಹುದಿನಗಳಿಂದ ಪ್ರಸುಪ್ತವಾಗಿದ್ದ ಹಳೆಯ ಹಸಿವನ್ನು ಮತ್ತೆ ಪ್ರಕ್ಷುಬ್ಧಗೊಳಿಸಿತ್ತು.

ಅವನ ಗತಜೀವನ ಅಂದು ಮತ್ತೆ ಅವನ ಕಣ್ಣೆದಿರು ಮುಖ ತೆರದು ನಿಂತಿತ್ತು.

ಮಾಧವರಾಯನದು ಮೊದಲಿನಿಂದಲೂ ಸಾಹಸಕ್ಕೆ ಮನಸೋತ ಜೀವನ. ಇತರರು ಕೊಂಡಾಡುವ ಶಾಂತಿ, ತೃಪ್ತಿಗಳು ಜೀವನವನ್ನು ನಿರ್ಜೀವಗೊಳಿಸುವ ವಸ್ತುಗಳೆಂದೇ ಭಾವಿಸಿದ್ದ ಮಾಧವರಾಯ, ಯೌವ್ವನ್ನ ದಲ್ಲಿ ಕಾಲಿಟ್ಟ ದಿನವೇ, ತನ್ನ ಹುಟ್ಟೂರಾದ ಸತಾರಾವನ್ನು ಬಿಟ್ಟು, ಸಾಹಸ ಜೀವಿಗಳ ಬೆಳವಣಿಗೆಗೆ ಅತ್ಯಂತ ಫಲವತ್ತಾದ ಕ್ಷೇತ್ರವಾದ ಪೂನಾಕ್ಕೆ ಬಂದು ನೆಲಸಿದ್ದ.

ಪೂನಾಕ್ಕೆ ಬರುತ್ತಿದ್ದ ಹಾಗೇ ಮಾಧವರಾಯನಿಗೆ, ಅವನ ನಿರೀಕ್ಷೆ ಯಂತೆ ಸೇನೆಯಲ್ಲಿ ಉದ್ಯೋಗ ದೊರೆಯದೆ, ಪೇಶ್ವೆಗಳ ಅರಮನೆಯಲ್ಲಿ, ದೇವಾಲಯಗಳಿಗೆ ಅರಮನೆಯಿಂದ ಸಲ್ಲಬೇಕಾದ ನಿತ್ಯಗ್ರಾಸ, ಮಾಸಭತ್ಯ, ವಾರ್ಷಿಕ ಕಾಣಿಕೆಗಳನ್ನು ಸಲ್ಲಿಸಬೇಕಾದ ಶಾಲೆಯಲ್ಲಿ ಗುಮಾಸ್ತನ ಉದ್ಯೋಗ ದೊರೆತು, ಹೊಟ್ಟೆಯ ಪಾಡಿಗಾಗಿ ಆ ಉದ್ಯೋಗವನ್ನು ಒಪ್ಪಿ ಕೊಂಡು ಮಾಧವರಾಯ, ತನ್ನ ನಿತ್ಯ ಸಾಹಸದ ಕನಸನ್ನು ಮರೆತು, ಗಾಣದ ಎತ್ತಿನಂತೆ ದುಡಿಯಬೇಕಾಯಿತು.

ಈ ನೌಕರಿಯ ನಿರ್ಬಂಧಿತ ಪರಿಸ್ಥಿತಿಯಲ್ಲಿ, ಮಾಧವರಾಯನ ಸಾಹಸಪ್ರಿಯತೆ ಬೇರಾವ ದಾರಿಗಳಲ್ಲೂ ಹರಿಯಲು ಎಡೆಯಿಲ್ಲದೆ, ಅಂದಿನ ಪೂನಾದ ನಾಗರಿಕರಲ್ಲಿ ಶ್ರೀಮಂತನಿಂದ ಅತ್ಯಂತ ಸಾಮಾನ್ಯ ಮನುಷ್ಯನ ವರೆಗೂ ಸಾಮಾನ್ಯವಾದ 'ಜಲಸಾ' 'ತಮಾಷ್' ಗಳಲ್ಲಿ ಕಾಲ ಕಳೆಯುವತ್ತ ಹರಿಯಿತು.

ಆ ದಾರಿಯಲ್ಲಿ ಹೆಜ್ಜೆಯಿಟ್ಟು ಮಾಧವರಾಯನಿಗೆ, ಪೂನಾದ ಶುಕ್ರ ವಾರ ಪೇಟೆಯ ಕಾಮಿನಿಯರ ಪರಿಚಯವಾಗಲು ತಡವಾಗಲಿಲ್ಲ.

ದಿನಕ್ಕೊಂದು ಸೀರೆ, ದಿನಕ್ಕೊಂದು ಜಾತಿಯ ಹೆಣ್ಣಿನ ಸಹವಾಸ,

ಮಾಧವರಾಯನ ಸಾಹಸಪ್ರಿಯತೆಯನ್ನು ಕೊಂಚ ಪುಷ್ಟಿಗೆ ತಣಿಸಿದಂತೆಂಯೇ, ಅವನಲ್ಲಿ ಆದುವರೆಗೂ ಇಲ್ಲದಿದ್ದ ಹಣದ ದಾಹವನ್ನೂ ಮೂಡಿಸಿತು. ವೇಶ್ಯೆಯವರ ವಾಡೆಯಲ್ಲಿ ಬರುತ್ತಿದ್ದ ಅಲ್ಪ ವೇತನ, ಮಾಧವರಾಯನ ಖುಷಿ ಜೀವನಕ್ಕೆ ಏನೇನೂ ಸಾಲದಾಗಿ, ಹೊಸ ಹಾದಿಗಳನ್ನು ಹುಡುಕಬೇಕಾಯಿತು. ಅದಕ್ಕೆ ಅವನಿಗೆ ಕಂಡ ದಾರಿ, ತನ್ನ ಕೈಯ ಮೂಲಕ ದಾಟುತ್ತಿದ್ದ ದೇವಾಲಯದ ಹಣದಲ್ಲಿ, ಆದಷ್ಟನ್ನು ಮಧ್ಯದಲ್ಲೇ ಹೀರಿಕೊಳ್ಳುವುದು. ದೈವಭಕ್ತಿ, ದೈವಭೀತಿಗಳು ಅತ್ಯಂತ ಪ್ರಬಲವಾಗಿದ್ದ ಆ ಕಾಲದಲ್ಲಿ, ಮೊದಮೊದಲು, ಅನಿವಾರ್ಯವಾಗಿ, ದೇವಾಲಯಗಳ ಹಣವನ್ನು ಮುಟ್ಟಬೇಕಾಗಿ ಬಂದಾಗ, ಎಲ್ಲಿ ಕಣ್ಣು ಇಂಗಿ ಹೋಗುವುದೋ ಕಾಲು ಕಳಚಿ ಬೀಳುವುದೋ ಎಂಬ ಭಯ ಆವರಿಸುತ್ತಿತ್ತು. ಒಬ್ಬ ದೇವರ ದುಡ್ಡು ಹೊಡೆಯುವಾಗ ಅದರ ಶಿಕ್ಷಾನುಬಂಧ ತನ್ನನ್ನು ಕಾಪಾಡುವಂತೆ ಹತ್ತು ದೇವರಿಗೆ ಹರಕೆ ಹೊತ್ತುಕೊಳ್ಳುತ್ತಿದ್ದ. ಆ ಹರಕೆಗಳ ಬಲವೊ, ಅಥವಾ ತನ್ನ ಹಣ ತಿಂದವನನ್ನು ಶಿಕ್ಷಿಸಲಾಗದ ದೇವತೆಗಳ ದೌರ್ಬಲ್ಯವೋ, ಹೇಗೋ ಏನೋ—ಅಂತೂ ದೇವಾಲಯದಲ್ಲಿ ಕತ್ತರಿ ಪ್ರಯೋಗ ಮಾಡುವುದರಿಂದ ತಾನು ನಿರೀಕ್ಷಿಸಿದ ಭಯಂಕರ ಪರಿಣಾಮವೇನೂ ಆಗುವುದಿಲ್ಲವೆಂದು, ಅನುಭವದಿಂದ ಮನವರಿಕೆಯಾದ ಬಳಿಕ, ಮಾಧವರಾಯನಿಗೆ ದೇವರ ಗಂಟು, ಜೇಬುಗಳ್ಳರ ಮುದ್ದೆಗಿಂತಲೂ ಸುಲಭವಾಗಿ ಗಂಟಲಿನಲ್ಲಿ ಇಳಿಯಲಾರಂಭಿಸಿತು. ಕೆಲವು ದಿವಸಗಳಲ್ಲಿ ರಾಜವಾಡೆಯಿಂದ ಪೂರದ ಊರುಗಳಲ್ಲಿನ ದೇವಾಲಯಗಳಿಗೆ ಕಳಿಸಲ್ಪಡಲೆಂದು ಮಾಧವರಾಯನ ಬಳಿಗೆ ಬರುತ್ತಿದ್ದ ನಗನಾಣ್ಯಗಳು, ತಮ್ಮ ಗಮ್ಯಸ್ಥಾನವನ್ನು ತಲುಪದೆ, ಪ್ರಸಾದ ಪಕ್ಷಿಯಂತೆ ಸ್ವಮೋಕ್ಷ ನೆರೆಯಲಾರಂಭಿಸಿದವು.

ಎರಡು ಮೂರು ವರ್ಷಗಳು ಕಳೆದ ಬಳಿಕ ಮಾಧವರಾಯನಿಗೆ ದೇವತೆಗಳ ಶಕ್ತಿಯ ವಿಷಯದಲ್ಲಿ ಕಾತಿನ್ಯ ಮೂಡಿದಂತೆಯೇ, ದೇವತೆಗಳಿಗೆ ಹರಕೆ, ಕಾಣಿಕೆ ಒಪ್ಪಿಸುವವರ ಬಗ್ಗೆಯೂ ನಿರ್ಭೀತಿ ಬಲಿತು. ಎಲ್ಲ ಎಚ್ಚರಿಕೆಯನ್ನೂ ಮರೆತು ಮೆರೆಯಲಾರಂಭಿಸಿದ.

ಆದರೆ, ಜಗತ್ತಿನ ವಿಷಯದಲ್ಲಿ ಮಾಧವರಾಯ ಕುರುಡಾಗಿದ್ದಂತೆ, ಜಗತ್ತು ಆತನ ವಿಷಯದಲ್ಲಿ ಕುರುಡಾಗಿರಲಿಲ್ಲ.

ಆದರೆ ಆ ಪ್ರಶಾಂತತೆ ಮಾಧವರಾಯನಲ್ಲಿ ಶಾಂತಿಯನ್ನು ಮೂಡಿಸದೆ ಅಶಾಂತಿಯನ್ನೇ ಕಲಕಿತು.

ಹಿಂದಿನ ದಿನ ಚದುರಂಗದ ವೇದಿಕೆಯ ಮೇಲೆ ಕಂಡ ನೀಲಳ ರೂಪು, ಮಾಧವರಾಯನಲ್ಲಿ ಬಹುದಿನಗಳಿಂದ ಪ್ರಸುಪ್ತವಾಗಿದ್ದ ಹಳೆಯ ಹಸಿವನ್ನು ಮತ್ತೆ ಪ್ರಕ್ಷುಬ್ಧಗೊಳಿಸಿತ್ತು.

ಅವನ ಗತಜೀವನ ಅಂದು ಮತ್ತೆ ಅವನ ಕಣ್ಣೆದಿರು ಮುಖ ತೆರದು ನಿಂತಿತ್ತು.

ಮಾಧವರಾಯನದು ಮೊದಲಿನಿಂದಲೂ ಸಾಹಸಕ್ಕೆ ಮನಸೋತ ಜೀವನ. ಇತರರು ಕೊಂಡಾಡುವ ಶಾಂತಿ, ತೃಪ್ತಿಗಳು ಜೀವನವನ್ನು ನಿರ್ಜೀವಗೊಳಿಸುವ ವಸ್ತುಗಳೆಂದೇ ಭಾವಿಸಿದ್ದ ಮಾಧವರಾಯ, ಯೌವ್ವನ್ನ ದಲ್ಲಿ ಕಾಲಿಟ್ಟ ದಿನವೇ, ತನ್ನ ಹುಟ್ಟೂರಾದ ಸತಾರಾವನ್ನು ಬಿಟ್ಟು, ಸಾಹಸ ಜೀವಿಗಳ ಬೆಳವಣಿಗೆಗೆ ಅತ್ಯಂತ ಫಲವತ್ತಾದ ಕ್ಷೇತ್ರವಾದ ಪೂನಾಕ್ಕೆ ಬಂದು ನೆಲಸಿದ್ದ.

ಪೂನಾಕ್ಕೆ ಬರುತ್ತಿದ್ದ ಹಾಗೇ ಮಾಧವರಾಯನಿಗೆ, ಅವನ ನಿರೀಕ್ಷೆ ಯಂತೆ ಸೇನೆಯಲ್ಲಿ ಉದ್ಯೋಗ ದೊರೆಯದೆ, ಪೇಶ್ವೆಗಳ ಅರಮನೆಯಲ್ಲಿ, ದೇವಾಲಯಗಳಿಗೆ ಅರಮನೆಯಿಂದ ಸಲ್ಲಬೇಕಾದ ನಿತ್ಯಗ್ರಾಸ, ಮಾಸಭತ್ಯ, ವಾರ್ಷಿಕ ಕಾಣಿಕೆಗಳನ್ನು ಸಲ್ಲಿಸಬೇಕಾದ ಶಾಲೆಯಲ್ಲಿ ಗುಮಾಸ್ತನ ಉದ್ಯೋಗ ದೊರೆತು, ಹೊಟ್ಟೆಯ ಪಾಡಿಗಾಗಿ ಆ ಉದ್ಯೋಗವನ್ನು ಒಪ್ಪಿ ಕೊಂಡು ಮಾಧವರಾಯ, ತನ್ನ ನಿತ್ಯ ಸಾಹಸದ ಕನಸನ್ನು ಮರೆತು, ಗಾಣದ ಎತ್ತಿನಂತೆ ದುಡಿಯಬೇಕಾಯಿತು.

ಈ ನೌಕರಿಯ ನಿರ್ಬಂಧಿತ ಪರಿಸ್ಥಿತಿಯಲ್ಲಿ, ಮಾಧವರಾಯನ ಸಾಹಸಪ್ರಿಯತೆ ಬೇರಾವ ದಾರಿಗಳಲ್ಲೂ ಹರಿಯಲು ಎಡೆಯಿಲ್ಲದೆ, ಅಂದಿನ ಪೂನಾದ ನಾಗರಿಕರಲ್ಲಿ ಶ್ರೀಮಂತನಿಂದ ಅತ್ಯಂತ ಸಾಮಾನ್ಯ ಮನುಷ್ಯನ ವರೆಗೂ ಸಾಮಾನ್ಯವಾದ 'ಜಲಸಾ' 'ತಮಾಷ್' ಗಳಲ್ಲಿ ಕಾಲ ಕಳೆಯುವತ್ತ ಹರಿಯಿತು.

ಆ ದಾರಿಯಲ್ಲಿ ಹೆಜ್ಜೆಯಿಟ್ಟ ಮಾಧವರಾಯನಿಗೆ, ಪೂನಾದ ಶುಕ್ರ ವಾರ ಪೇಟೆಯ ಕಾಮಿನಿಯರ ಪರಿಚಯವಾಗಲು ತಡವಾಗಲಿಲ್ಲ.

ದಿನಕ್ಕೊಂದು ಸೀರೆ, ದಿನಕ್ಕೊಂದು ಜಾತಿಯ ಹೆಣ್ಣಿನ ಸಹವಾಸ,

ಮಾಧವರಾಯನ ಸಾಹಸಪ್ರಿಯತೆಯನ್ನು ಕೊಂಚ ಮಟ್ಟಿಗೆ ತಣಿಸಿದಂತೆಯೇ, ಅವನಲ್ಲಿ ಅದುವರೆಗೂ ಇಲ್ಲದಿದ್ದ ಹಣದ ದಾಹವನ್ನೂ ಮೂಡಿಸಿತು. ಪೇಶ್ವೆಯವರ ವಾಡೆಯಲ್ಲಿ ಬರುತ್ತಿದ್ದ ಅಲ್ಪ ವೇತನ, ಮಾಧವರಾಯನ ಖುಷಿ ಜೀವನಕ್ಕೆ ಏನೇನೂ ಸಾಲದಾಗಿ, ಹೊಸ ಹಾದಿಗಳನ್ನು ಹುಡುಕಬೇಕಾಯಿತು. ಅದಕ್ಕೆ ಅವನಿಗೆ ಕಂಡ ದಾರಿ, ತನ್ನ ಕೈಯ ಮೂಲಕ ದಾಟುತ್ತಿದ್ದ ದೇವಾಲಯದ ಹಣದಲ್ಲಿ, ಆದಷ್ಟನ್ನು ಮಧ್ಯದಲ್ಲೇ ಹೀರಿಕೊಳ್ಳುವುದು. ದೈವಭಕ್ತಿ, ದೈವಭೀತಿಗಳು ಅತ್ಯಂತ ಪ್ರಬಲವಾಗಿದ್ದ ಆ ಕಾಲದಲ್ಲಿ, ಮೊದಮೊದಲು, ಅನಿವಾರ್ಯವಾಗಿ, ದೇವಾಲಯಗಳ ಹಣವನ್ನು ಮುಟ್ಟಬೇಕಾಗಿ ಬಂದಾಗ, ಎಲ್ಲಿ ಕಣ್ಣು ಇಂಗಿ ಹೋಗುವುದೋ ಕಾಲು ಕಳಚಿ ಬೀಳುವುದೋ ಎಂಬ ಭಯ ಆವರಿಸುತ್ತಿತ್ತು. ಒಬ್ಬ ದೇವರ ದುಡ್ಡು ಹೊಡೆಯುವಾಗ ಅದರ ಪರಿಣಾಮದಿಂದ ತನ್ನನ್ನು ಕಾಪಾಡುವಂತೆ ಹತ್ತು ದೇವರಿಗೆ ಹರಕೆ ಹೊತ್ತುಕೊಳ್ಳುತ್ತಿದ್ದ. ಆ ಹರಕೆಗಳ ಬಲವೊ, ಅಥವಾ ತನ್ನ ಹಣ ತಿಂದವನನ್ನು ಶಿಕ್ಷಿಸಲಾಗದ ದೇವತೆಗಳ ದೌರ್ಬಲ್ಯವೋ, ಹೇಗೋ ಏನೋ—ಅಂತೂ ದೇವಾಲಯದಲ್ಲಿ ಕತ್ತರಿ ಪ್ರಯೋಗ ಮಾಡುವುದರಿಂದ ತಾನು ನಿರೀಕ್ಷಿಸಿದ ಭಯಂಕರ ಪರಿಣಾಮವೇನೂ ಆಗುವುದಿಲ್ಲವೆಂದು, ಅನುಭವದಿಂದ ಮನವರಿಕೆಯಾದ ಬಳಿಕ, ಮಾಧವರಾಯನಿಗೆ ದೇವರ ಗಂಟು, ಬೆಕ್ಕಿಗೆ ಮುದ್ದೆಗಿಂತಲೂ ಸುಲಭವಾಗಿ ಗಂಟಲಿನಲ್ಲಿ ಇಳಿಯಲಾರಂಭಿಸಿತು. ವಿಶೇಷ ದಿವಸಗಳಲ್ಲಿ ರಾಜವಾಡೆಯಿಂದ ದೂರದ ಊರುಗಳಲ್ಲಿನ ದೇವಾಲಯಗಳಿಗೆ ಕಳಿಸಲ್ಪಡಲೆಂದು ಮಾಧವರಾಯನ ಬಳಿಗೆ ಬರುತ್ತಿದ್ದ ನಗನಾಣ್ಯಗಳು, ತಮ್ಮ ಗಮ್ಯಸ್ಥಾನವನ್ನು ತಲುಪದೆ, ಪೂನಾದ ವೇಶ್ಯೆಯರ ಮೈಮೇಲೆ ಮೆರೆಯಲಾರಂಭಿಸಿದವು.

ಎರಡು ಮೂರು ವರ್ಷಗಳು ಕಳೆದ ಬಳಿಕ ಮಾಧವರಾಯನಿಗೆ ದೇವತೆಗಳ ಶಕ್ತಿಯ ವಿಷಯದಲ್ಲಿ ತಾತ್ಸಾರ ಮೂಡಿದಂತೆಯೇ, ದೇವತೆಗಳಿಗೆ ಹರಕೆ, ಕಾಣಿಕೆ ಒಪ್ಪಿಸುವವರ ಬಗ್ಗೆಯೂ ನಿರ್ಭೀತಿ ಬಲಿತು, ಎಲ್ಲ ಎಚ್ಚರಿಕೆಯನ್ನೂ ಮರೆತು ಮೆರೆಯಲಾರಂಭಿಸಿದ.

ಆದರೆ, ಜಗತ್ತಿನ ವಿಷಯದಲ್ಲಿ ಮಾಧವರಾಯ ಕುರುಡಾಗಿದ್ದಂತೆ, ಜಗತ್ತು ಆತನ ವಿಷಯದಲ್ಲಿ ಕುರುಡಾಗಿರಲಿಲ್ಲ.

ಅರಮನೆಯ ಸಾಮಾನ್ಯ ನೌಕರನೊಬ್ಬ, ದೊಡ್ಡ ಶ್ರೀಮಂತನಂತೆ, ಧಾರಾಳವಾಗಿ ಖರ್ಚು ಮಾಡುತ್ತಾ ಸುಖಜೀವನವನ್ನು ನಡೆಸುತ್ತಿರುವುದನ್ನು ಕಂಡ ಕೆಲವರಿಗೆ ಅಸೂಯೆ ಮೂಡಿದಂತೆಯೇ, ಮತ್ತೆ ಕೆಲವರಿಗೆ ಅವನ ಆದಾಯದ ಮೂಲವನ್ನು ಶೋಧಿಸಬೇಕೆಂಬ ಹಟವೂ ಹುಟ್ಟಿ,ಅವನ ಹಿಂದೆ ಬೇಹುಗಾರರಾಗಿ ಅಲೆಯಲಾರಂಭಿಸಿದರು.

ಹಾಗೆ ಮಾಧವರಾಯನ ಬೆನ್ನು ಹತ್ತಿದವರಲ್ಲಿ, ಮಾಧವರಾಯನಂತೆಯೇ ವೇಶ್ಯಾಗೃಹಗಳಲ್ಲಿ ಅಲೆಯುವ ಅಭ್ಯಾಸವಿದ್ದ ಒಬ್ಬನಿಗೆ, ಮಾಧವರಾಯ ವೇಶ್ಯೆಯೊಬ್ಬಳಿಗೆ ಕೊಟ್ಟ ಒಡವೆಯೊಂದು ಸಿಕ್ಕು, ಆ ಒಡವೆಯನ್ನು ಹಿಡಿದು ಅಕ್ಕಸಾಲಿಗರಲ್ಲಿ ವಿಚಾರಿಸಿ, ಅರಮನೆಯವರಿಗಾಗಿ ಮಾಡಿದ ಒಡವೆ ಎಂಬುದು ಪತ್ತೆಹಚ್ಚಿ, ಆತ ಮಾಧವರಾಯ ಅರಮನೆಯ ಒಡವೆಗಳನ್ನು ಕದಿಯುತ್ತಿದ್ದಾನೆ ಎಂದು, ಆ ಒಡವೆಯ ಸಹಿತ ಪೇಶ್ವೆಗಳಿಗೆ ದೂರುಕೊಟ್ಟ. ಖುದ್ದು ಪೇಶ್ವೆಗಳೇ ಆ ಒಡವೆ ಯಾರದು ಎಂಬ ತನಿಖೆ ನಡೆಸಿದಾಗ, ಅದು ಕಾಶಿಯ ಅನ್ನಪೂರ್ಣಾದೇವಿಗೆ ಕಳಿಸಲೆಂದು ಅಂತಃಪುರದವರು ಮಾಡಿಸಿದ ಒಡವೆ ಎಂದು ತಿಳಿದು, ಮಾಧವರಾಯನಿಗೆ ಕೈಕೋಳ ಹಾಕಲು ಅಪ್ಪಣೆಯಾಯಿತು.

ಈ ವಿಷಯವನ್ನು ತಿಳಿದ ಮಾಧವರಾಯ, ಇನ್ನು ತಾನು ಪೂನಾದಲ್ಲಿದ್ದರೆ, ದೇವರ ಗಂಟನ್ನು ಹೊಡೆದ ತನ್ನನ್ನು ಪೇಶ್ವೆಗಳು, ಬ್ರಾಹ್ಮಣನಾದರೂ ಜೀವಂತ ಹುಗಿಯದೆ ಬಿಡುವುದಿಲ್ಲ ಎಂಬುದು ಮನವರಿಕೆಯಾಗಿ, ತನ್ನ ಹೆಂಡತಿ ಮಕ್ಕಳ ಯೋಚನೆಯನ್ನೂ ಮಾಡದೆ,ರಾತ್ರೋ ರಾತ್ರಿ ಪೂನಾದಿಂದ ಪಲಾಯನ ಮಾಡಿದ.

ಹಾಗೆ ಮಾಧವರಾಯ ಪೂನಾ ಬಿಟ್ಟಾಗ ಅವನ ಬಳಿ ಇದ್ದುದೆಲ್ಲಾ ಒಂದು ಕತ್ತಿ, ಒಂದು ಕುದುರೆ ; ಅವುಗಳಿಂದ ಅವನು ತನ್ನನ್ನೇ ತಾನು ರಕ್ಷಿಸಿಕೊಳ್ಳಬೇಕಾಗಿದ್ದುದಲ್ಲದೆ, ಜೀವನೋಪಾಯವನ್ನು ಕಲ್ಪಿಸಿಕೊಳ್ಳಬೇಕಾಗಿತ್ತು.

ಆಗಲೂ, ಪೇಶ್ವೆಯವರ ಸೈನಿಕರ ಭಯದಿಂದ ಯಾರ ಕಣ್ಣಿಗೂ ಬೀಳದೆ, ಕಾಡುಮೇಡಿನಲ್ಲಿ ಅವಿತು ಜೀವಿಸ ಬೇಕಾಗಿಬಂದ ಮಾಧವರಾಯನಿಗೆ, ಜೀವನೋಪಾಯಕ್ಕೆ ಕಂಡುಬಂದ ಮಾರ್ಗ, ದೇವಾಲಯಗಳೇ.

ಎಷ್ಟೋ ದೇವಾಲಯಗಳು, ವನಮಧ್ಯದಲ್ಲಿ, ಗಿರಿಶಿಖರದಲ್ಲಿ, ಜನ ಸಂಚಾರದಿಂದ ದೂರವಾದ ಸ್ಥಳಗಳಲ್ಲಿರುತ್ತಿದ್ದುದು ಮಾಧವರಾಯನಿಗೆ ಅನುಕೂಲವಾಯಿತು. ಅಂಥ ದೇವಾಲಯಗಳನ್ನು ಹುಡುಕಿ, ನಾಲ್ಕು ದಿನ ಅದರ ಸುತ್ತ ಮುತ್ತಲೇ ಓಡಾಡಿ ಅದರ ಕಾವಲು ಕಟ್ಟು ಹೇಗಿದೆ ಎಂದು ಅರಿತುಕೊಂಡು, ಸಮಯ ಸಾಧಿಸಿ, ಆ ದೇವಾಲಯವನ್ನು ಲೂಟಿ ಮಾಡಿ, ಕೈಗೆ ಸಿಕ್ಕ ಚಿನ್ನ ಬೆಳ್ಳಿಯ ಒಡವೆಗಳನ್ನು ಅಪಹರಿಸಿ, ಅಲ್ಲಿಂದ ಆದಷ್ಟು ದೂರ ಹೋಗಿ, ಮತ್ತಾವುದೋ ಊರಿನ ಅಕ್ಕಸಾಲಿಗರಿಗೆ, ಅವರು ಕೊಟ್ಟಷ್ಟು ಹಣಕ್ಕೆ ಮಾರಿ, ಜೀವನ ನಡೆಸುವುದು; ಆ ಹಣ ಮುಗಿಯು ತ್ತಿದ್ದ ಹಾಗೇ, ಮತ್ತಾವ ದೇವರು ತನ್ನ ಜೀವನ ನಡೆಸಲು ಕಾದಿದ್ದಾನೆ ಎಂದು ಹುಡುಕುವುದು—ಹೀಗೇ ನಡೆದಿತ್ತು ಮಾಧವರಾಯನ ಜೀವನ.

ಎರಡು ಮೂರು ವರ್ಷಗಳ ಕಾಲ ಹೀಗೆ ಜೀವಿಸಿದ ಬಳಿಕ ಮಾಧವ ರಾಯನಿಗೂ ಒಮ್ಮೊಮ್ಮೆ ಈ ಬಗೆಯ ಜೀವನ ಬೇಸರ ಬರಲಾರಂಭಿಸಿತು.

ದಿನಕ್ಕೊಂದು ಊರು, ಕ್ಷಣಕ್ಕೊಂದು ಗಂಡಾಂತರದ ಈ ಬಾಳನ್ನು ಹೇಗಾದರೂ ಮಾಡಿ ಕೊನೆಗೊಳಿಸಿ,ಯಾವುದಾದರೊಂದು ರೀತಿಯಲ್ಲಿ, ಎಲ್ಲಿ ಯಾದರೂ ಸ್ಥಿರವಾಗಿ ನಿಂತು ಜೀವನ ನಡೆಸುವ ಅವಕಾಶ ಕಲ್ಪಿಸಿಕೊಳ್ಳ ಬೇಕು ಎಂದು ಅವನ ಹೃದಯ ಹಾರೈಸತೊಡಗಿತು.ಒಮ್ಮೆ ಅವನೇ ತಿರಸ್ಕಾರ ಮಾಡಿದ್ದ ಸಂಸಾರಿಕ ಜೀವನದ ಶಾಂತಿ, ನೆಮ್ಮದಿಯನ್ನು ಬಯಸತೊಡ ಗಿತು.

ಅವನಲ್ಲಿ ಈ ಬಯಕೆ ತಲೆಹಾಕಲಾರಂಭಿಸಿದ ಕಾಲವಲ್ಲೇ ಮಾಧವ ರಾಯನಿಗೆ, ಪೂನಾದತ್ತಣಿಂದ ಊರುಕೇರಿಗಳನ್ನೆಲ್ಲಾ ಸುಲಿಯುತ್ತಾ, ಸಿಡುಗಿನಂತೆ, ಕಾಳ್ಗಿಚ್ಚಿನಂತೆ ಮೈಸೂರು ಸೀಮೆಯತ್ತ ಬಂದ ಪರಶುರಾಮ ಬಾವೂನ ಸೇನೆಯ ಉದ್ಯೋಗ ಗಂಟುಬಿದ್ದಿತು.

ಆ ವೇಳೆಗೆ ತನ್ನ ಯೋಗ್ಯತೆಗೆ ತಕ್ಕಂತೆ ನೂರಾರು ಚಿಲ್ಲರೆ ದೇವಾ ಲಯಗಳನ್ನು ಲೂಟಿ ಮಾಡಿದ್ದ ಮಾಧವರಾಯನ ಕೀರ್ತಿ ಪರಶುರಾಮ ಬಾವೂನ ಕಿವಿಗೆ ಬಿದ್ದಿತ್ತು. ಹತ್ತಾರು ಊರುಗಳ ಜನರಿಂದ ದೇವಾಲಯ ಗಳ ಸುಲಿಗೆ ಮಾಡುವ ಕಳ್ಳನ ಚಹರೆ ಏನು ಎಂದು ತಿಳಿದುಕೊಂಡ ಪರಶು ರಾಮ ಭಾವೂ, ತನ್ನ ಸೈನಿಕರಿಗೆ ಅಂಥ ಮನುಷ್ಯ ಎಲ್ಲಾದರೂ ಸಿಕ್ಕರೆ ಸೆರೆ

ಹಿಡಿಯಬೇಕೆಂದು ಅಪ್ಪಣೆ ಮಾಡಿದ್ದ. ಆ ಅಪ್ಪಣೆಯಂತೆ ಆತನ ಸೈನಿಕರು ಮಾಧವರಾಯನನ್ನು ಹುಡುಕುತ್ತಿದ್ದರು.

ಪರಶುರಾಮ ಭಾವೂನ ಸೇನೆ ಮೈಸೂರಿನ ಹರಿಹರದ ಬಳಿ ದಾಟಿ, ಅಲ್ಲಿಂದ ಹೊನ್ನಾಳಿಯತ್ತ ನಡೆಯುತ್ತಿರುವಾಗ ಮಾರ್ಗದಲ್ಲಿ ಸಿಕ್ಕಿದ ನಂದಿ ತಾವರೆ ಎಂಬ ಗ್ರಾಮದಲ್ಲಿ, ಹಿಂದಿನ ದಿನವೇ ಮಾಧವರಾಯ ಅಲ್ಲಿನ ದೇವಾಲಯವನ್ನು ಲೂಟಿ ಮಾಡಿದ ಸುದ್ದಿ ತಿಳಿದು, ಅವನನ್ನು ಹಿಡಿಯ ಲೆಂದು ನೂರಾರು ಸೈನಿಕರನ್ನು ನಾಲ್ಕು ಕಡೆಗೂ ಅಟ್ಟಿದ.

ಅಪರಿಚಿತವಾದ, ಅವಿತುಕೊಳ್ಳಲು ಗುಡ್ಡವಾಗಲೀ, ಕಾಡಾಗಲೀ ಇಲ್ಲದ ಆ ಬಯಲುಸೀಮೆಯಲ್ಲಿ ಎಷ್ಟೋ ಬಾರಿ ಪರಶುರಾಮಭಾವೂನ ಸೈನಿಕರಿಂದ ತಪ್ಪಿಸಿಕೊಂಡಿದ್ದ ಮಾಧವರಾಯನನ್ನು, ಸೈನಿಕರು ಹಿಡಿದು ತಂದು ಪರಶುರಾಮ ಭಾವೂನ ಎದುರಿಗೆ ನಿಲ್ಲಿಸಿದರು.

ಪರಶುರಾಮ ಭಾವೂನ ಮುಖ ನೋಡುತ್ತಿದ್ದ ಹಾಗೇ, ಅವನ ನಿರ್ದಯ ನೇತ್ರ ತನ್ನತ್ತ ಬೀಳುತ್ತಿದ್ದ ಹಾಗೇ, ಮಾಧವರಾಯನಿಗೆ 'ತನ್ನ ಜೀವನ ಇನ್ನೇನಿಲ್ಲಾ ಕೆಲವು ಗಂಟೆಗಳ ಕಾಲದ್ದು ಮಾತ್ರ' ಎನಿಸಿ, ಆ ಭಾವನೆ ಅವನಿಗೆ ಒಂದು ಬಗೆಯ ಹುಚ್ಚು ಧೈರ್ಯವನ್ನು ನೀಡಿ, ಪರಶುರಾಮಭಾವೂನ ಪ್ರಶ್ನೆಗಳನ್ನು ಧೈರ್ಯವಾಗಿ ಎದುರಿಸಿದ.

"ನಿಜ ಹೇಳು, ಇಲ್ಲವಾದರೆ ನಿನ್ನ ನಾಲಿಗೆ ಹರಿಸಿ ನಾಯಿಗಳಿಗೆ ಹಾಕಿಸುತ್ತೇನೆ"

—ಎಂಬ ಎಚ್ಚರಿಕೆಯಿಂದಲೇ ಪರಶುರಾಮಭಾವು ಪ್ರಶ್ನೆಗಳನ್ನು ಆರಂಭಿಸಿದ—

"ನಿನ್ನ ಹೆಸರೇನು ?"

—ಎಂದು ಕೇಳಿದ

"ಮಾಧವರಾಯ."

"ಎಲ್ಲಿಯವನು ನೀನು ?"

"ನಮ್ಮಿಬ್ಬರಿಗೂ ಜನ್ಮವಿತ್ತದ್ದು ಒಂದೇ ಪುಣ್ಯಭೂಮಿ, ಮಹಾ ರಾಷ್ಟ್ರ !"

—ನವಿರಾದ ವ್ಯಂಗ್ಯವಿದ್ದ ಧ್ವನಿಯಲ್ಲಿ ಹೇಳಿದ ಮಾಧವರಾಯ. ಆದರೆ ಪರಶುರಾಮ ಭಾವೂಗೆ ಆ ವ್ಯಂಗ್ಯ ಅರ್ಥವಾಗಲಿಲ್ಲ, ಇವನು

ಮಹಾರಾಷ್ಟ್ರೀಯ ಎಂದು ಹೇಳಿ ಆ ಮೂಲಕ ದಯೆಯನ್ನು ಯಾಚಿಸು ತ್ತಿದ್ದಾನೆ ಎಂದೇ ಅರ್ಥಮಾಡಿಕೊಂಡು—

"ಮಹಾರಾಷ್ಟ್ರ ಅಂದರೆ ಯಾವ ಕಡೆಯವನು?"

"ಸತಾರ ಜಿಲ್ಲೆಯವನು."

"ನಿನ್ನ ಜಾತಿ ಯಾವುದು?"

"ಬ್ರಾಹ್ಮಣ"

"ನಿನ್ನ ಮೇಲೆ ನೂರಾರು ದೇವಾಲಯಗಳ ಲೂಟಿ ಮಾಡಿದ ದೂರು ಇದೆ. ಅದು ನಿಜವೋ ಸುಳ್ಳೋ?"

"ಸ್ವಲ್ಪವೂ ಸುಳ್ಳಿಲ್ಲ."

"ಹಾಗೆ ಹೇಳುವುದಕ್ಕೆ ನಿನಗೆ ನಾಚಿಕೆಯಾಗುವುದಿಲ್ಲವೇ ಬದ್ಮಾಷ್?"

"ಸತ್ಯ ಹೇಳಿದರೆ ನಾಚಿಕೆಯಾಗುವುದಿಲ್ಲವೇ ಎನ್ನುತ್ತೀರ, ನಿಜಹೇಳ ದಿದ್ದರೆ ನಾಲಿಗೆಯನ್ನು ನಾಯಿಗೆ ಹಾಕಿಸುತ್ತೇನೆ ಎನ್ನುತ್ತೀರ. ಸುಳ್ಳನ್ನು ಸತ್ಯದ ಹಾಗೂ ಸತ್ಯವನ್ನು ಸುಳ್ಳಿನ ಹಾಗೂ ಹೇಳುವ ಕಲೆ ನನಗೆ ಗೊತ್ತಿಲ್ಲ...."

"ಅಂಥ ಕಲೆಯೂ ಒಂದು ಇದೆಯೋ?"

"ಇದೆ."

"ನಿನಗೆ ಆ ಕಲೆ ತಿಳಿಯದು ಎನ್ನುತ್ತೀಯಲ್ಲಾ, ಆ ಕಲೆ ತಿಳಿದವರೂ ಇದ್ದಾರೆಯೋ?"

"ಇದ್ದಾರೆ."

"ಯಾರು?"

"ಪೇಶ್ವೆಗಳ ದರ್ಬಾರಿಗಳು. ಆ ಕಲೆಯೇ ಅವರ ಜೀವನೋಪಾಯ ಮಾರ್ಗ. ಆ ಕಲೆ ನನಗೆ ತಿಳಿದಿಲ್ಲವೆಂತಲೇ ನಾನು ಜೀವನೋಪಾಯಕ್ಕೆ ಕಳ್ಳತನಕ್ಕೆ ಕೈ ಹಾಕಬೇಕಾಯಿತು."

ನಾಥವರಾಯ ಬಿಚ್ಚುಮಾತಿನಲ್ಲಿ ಮಾಡಿದ ದರ್ಬಾರಿ ಜನರ ಜೀವನದ ಚಿಣಕದ ಮಾತನ್ನು ಕೇಳಿ, ಪರಶುರಾಮಭಾವೂಗೂ ನಗು ಬಂದಿತು. ನಕ್ಕು ತನ್ನ ಮಾನವೀಯತೆಯನ್ನು ತೋರಿಸಲಾಗದೆ—

"ನಿನ್ನ ನಾಲಿಗೆಯ ಚಾಲೂಕಿ ನನಗೆ ಬೇಕಿಲ್ಲ, ನಾನು ಕೇಳಿದ್ದಕ್ಕೆ ಉತ್ತರ ಕೊಡು."

—ಎಂದು ಬಿರುಸಾಗಿ ಹೇಳಿದ.

"ಅಪ್ಪಣೆಯಾಗಲಿ."

"ಬ್ರಾಹ್ಮಣನಾಗಿ ಹುಟ್ಟಿ ದೇವಾಲಯಗಳನ್ನು ಸುಲಿಗೆ ಮಾಡಲು ನಿನಗೆ ನಾಚಿಕೆಯಾಗಲಿಲ್ಲವೇ ?"

"ನಾಚಿಕೆಗೆ ಕಾರಣವೇ ಇಲ್ಲ ಮಹಾಸ್ವಾಮಿ, ನಾನು ನನ್ನ ಹುಟ್ಟಿಗೆ ಯುಕ್ತವಾದ ವೃತ್ತಿಯನ್ನೇ ಮಾಡುತ್ತಿದ್ದೇನೆ."

"ಅಂದರೆ—"

''ಬ್ರಾಹ್ಮಣರಿಗೆ ಜೀವನೋಪಾಯಕ್ಕೆ ದೇವರಲ್ಲದೆ ಬೇರೆ ಯಾರು ದಿಕ್ಕು ಮಹಾಸ್ವಾಮಿ ; ಬ್ರಾಹ್ಮಣರನ್ನು ಕಾಪಾಡುವ ಹೊಣೆಗಾರಿಕೆ ದೇವರದೇ. ನನ್ನ ಮುತ್ತಜ್ಜ ಈ ದೇವರುಗಳನ್ನು ಮನೆಯಲ್ಲಿಟ್ಟುಕೊಂಡು ತಲೆ ತಲಾಂತರದಿಂದ ಅನ್ನ-ಬಟ್ಟೆ ಕೊಟ್ಟು ಸಾಕಿದ್ದರೆ, ಈಗ ಅವನ ಸರದಿ—ನನ್ನನ್ನು ಸಾಕುತ್ತಿದ್ದಾನೆ. ಅದರಲ್ಲಿ ತಪ್ಪೇನೂ ಇಲ್ಲ ಮಹಾಸ್ವಾಮಿ, ನಾಚಬೇಕಾದ ಪ್ರಮೇಯವೂ ಇಲ್ಲ. ನನ್ನ ಬ್ರಾಹ್ಮಣತೆಯೇ ನಾನೀಗ ನಡೆಸುತ್ತಿರುವ ವೃತ್ತಿಗೆ ರಹದಾರಿ. ಅಲ್ಲದೆ ಇದರಲ್ಲೂ ನಾನು ಉಳಿದ ಬ್ರಾಹ್ಮಣರಷ್ಟು ನೀಚತನಕ್ಕೆ ಇಳಿದಿಲ್ಲ."

''ಹಾಗೆಂದರೇನು ?''

"ಅರ್ಚಕರಾಗಿರುವ ಬ್ರಾಹ್ಮಣರು ದೇವರನ್ನೇ ಸುಲಿಗೆ ಮಾಡುತ್ತಾರೆ. ನಾನು ಕೇವಲ ಗುಡಿಗಳನ್ನು ದೋಚುತ್ತೇನೆ. ಆದ್ದರಿಂದ ನಾನು ಅವರಿಗಿಂತಲೂ ಉತ್ತಮ ಬ್ರಾಹ್ಮಣ."

ತನ್ನ ಪ್ರಶ್ನೆಗೆ ಮಾಧವರಾಯ ಕೊಟ್ಟ ಉತ್ತರವನ್ನು ಕೇಳಿ, ಪರಶುರಾಮಭಾವುವಿನ ಎಲ್ಲ ಸಂಯಮವೂ ಸಡಲಿ, ಬಿದ್ದು ಬಿದ್ದು ನಗಲಾರಂಭಿಸಿದ. ಅವನ ಸುತ್ತಮುತ್ತಲಿದ್ದವರೂ ಆ ನಗೆಯಲ್ಲಿ ಬೆರೆತರು.

ಆದರೆ ಮಾಧವರಾಯ ಮಾತ್ರ ಆ ನಗೆಯಲ್ಲಿ ಬೆರೆಯದೆ ಗಂಭೀರವಾಗಿ ನಿಂತುಕೊಂಡಿದ್ದ.

ಅಷ್ಟೇಹೊತ್ತು ನಕ್ಕು, ಬಳಿಕ ನಗುವನ್ನು ತಡೆಹಿಡಿದುಕೊಂಡು—

"ನಿನ್ನ ತಲೆ ಉಳಿಸಿಕೊಳ್ಳಲಿಕ್ಕೆ ನೀನು ಏನೇ ಹೇಳಿದರೂ ಜನ

ನಿನ್ನನ್ನು ಏನೆಂದು ಕರೆಯುತ್ತಾರೆ—ಗೊತ್ತೆ ?

"ಗೊತ್ತು ಮಹಾಸ್ವಾಮಿ"

"ಏನು ?"

"ಕಳ್ಳ, ಬದ್ಮಾಷ್, ಡಾಕು ಅಂತೆಲ್ಲಾ ಕರೆಯುತ್ತಾರೆ. ಆದರೆ ಅದು ಅವರ ತಪ್ಪಲ್ಲ."

"ಅಂದರೆ—ಮತ್ತೆ ಯಾರ ತಪ್ಪು ?"

"ಪರಿಸ್ಥಿತಿಯದು"

"ಅಂದರೆ—"

"ನನ್ನ ಪರಿಸ್ಥಿತಿ, ಅವರು ನನ್ನನ್ನು ಹಾಗೆ ಕರೆಯುವಂತೆ ಮಾಡಿದೆ. ನಾನು ಒಂಟಿಯಾಗಿ ಈ ಕೆಲಸ ಮಾಡುತ್ತಿರುವುದರಿಂದ ಕಳ್ಳ ಸುಳ್ಳ ಎನ್ನುತ್ತಾರೆ. ಹಾಗಲ್ಲದೆ ಮಹಾಸ್ವಾಮಿಗಳ ಹಾಗೆ ಸಾವಿರಾರು ಮಂದಿ ಸೈನಿಕರನ್ನಿಟ್ಟುಕೊಂಡು ಇದೇ ಕೆಲಸ ಮಾಡಿದ್ದರೆ, ಬಹಾದೂರ್, ಸರ್ದಾರ್ ಅಂತ ಕರೆದು ಪೂಜೆ ಮಾಡುತ್ತಿದ್ದರು. ಏನು ಮಾಡಲಿ—ದೇವರು ನನಗೆ ಆ ಯೋಗ್ಯತೆ ಕೊಡಲಿಲ್ಲ. ಅದು ದೇವರ ತಪ್ಪು ! ಆದ್ದರಿಂದ ನ್ಯಾಯವಾಗಿ ನೋಡಿದರೆ, ದೇವರ ತಪ್ಪಿಗೆ ನನಗೆ ಶಿಕ್ಷೆ ವಿಧಿಸಬಾರದು"

—ಎಂದು ಕೈಮುಗಿದು ಬೇಡಿದ ಮಾಧವರಾಯ.

"ಹಾಗಾದರೆ ಈಗ ದೇವರಿಗೇ ಶಿಕ್ಷೆಯಾಗಬೇಕು ಎನ್ನು...."

"ಅದೂ ಅಗತ್ಯವಿಲ್ಲ."

"ಏಕೆ ?"

"ನನ್ನಂಥವನನ್ನು ಸೃಷ್ಟಿಸಿಯೇ ದೇವರು ಸಾಕಷ್ಟು ಶಿಕ್ಷೆ ಅನುಭವಿಸುತ್ತಿದ್ದಾನೆ. ಒಂದು ತಪ್ಪಿಗೆ ಎರಡು ಸಲ ಶಿಕ್ಷೆ ಅನುಭವಿಸುವುದು ಯಾವ ಶಾಸ್ತ್ರಕ್ಕೂ ಸಮ್ಮತವಲ್ಲ ಮಹಾಸ್ವಾಮಿ."

ಮಾಧವರಾಯ, ತನ್ನ ಒಂದೊಂದು ಪ್ರಶ್ನೆಗೂ ಕೊಟ್ಟ ಚಾಲೂಕಿ ಉತ್ತರವನ್ನು ಕೇಳಿ ಪರಶುರಾಮಭಾವೂಗೆ ಮಾಧವರಾಯನ ಮೇಲಿದ್ದ ಸಿಟ್ಟು ಕರಗಿ ಹೋಗಿ, ಒಂದು ರೀತಿಯ ಅಭಿಮಾನ ಮೂಡಿ—

"ಈ ಬಾರಿ ಮಾಫ್ ಮಾಡಿದೇನೆ, ಬದುಕಿಕೋ ಹೋಗು."

—ಎಂದು ಹೇಳಿದ.

"ಹಾಗೆ ಹೇಳಿ ತಾವು ನನ್ನನ್ನು ಪಾಳೆಯದಿಂದ ಅಟ್ಟಿಬಿಟ್ಟರೆ, ನನ್ನ

ಪಾಲಿಗೆ ಅದು ಅನುಗ್ರಹವಾಗುವುದಿಲ್ಲ ಮಹಾಸ್ವಾಮಿ, ಕಠಿಣ ಶಿಕ್ಷೆಯನ್ನೇ ವಿಧಿಸಿದಂತಾಗುತ್ತದೆ."

"ಏಕೆ ?"

"ಈಗ ನನಗೆ ಬದುಕಲು ಮಾರ್ಗವೇ ಉಳಿದಿಲ್ಲ."

"ಇದೇನು ಚಮತ್ಕಾರದ ಮಾತು ಮಾಧವರಾವ್...."

"ಚಮತ್ಕಾರವಲ್ಲ ಮಹಾಸ್ವಾಮಿ ಸತ್ಯ ...ನೀವು ಈಗ ನನ್ನನ್ನು ಇಲ್ಲಿಂದ ಕಳಿಸಿದರೆ, ಮತ್ತೆ ನಾನು ಬದುಕಲು ದೇವಾಲಯಗಳನ್ನೇ ಹುಡುಕ ಬೇಕು. ಆದರೆ ಈಗ ಮಹಾಸ್ವಾಮಿಯವರು ಆ ಕೆಲಸದ ಗುತ್ತಿಗೆ ಹಿಡಿದಿ ರುವುದರಿಂದ ನನ್ನಂತಹ ಒಂಟಿ ಬಡವನಿಗೆ ಅವಕಾಶವೆಲ್ಲಿದೆ ? ಆದ್ದರಿಂದ ನಿಮ್ಮಲ್ಲೇ ಒಂದು ನೌಕರಿ ಕೊಡಿಸಿ ಕೊಟ್ಟರೆ. ನಿಮ್ಮ ಆಶ್ರಯದಲ್ಲೇ ಬದು ಕುತ್ತೇನೆ."

—ಎಂದು ಬೇಡಿದ ಮಾಧವರಾಯ.

ಅವನ ಮಾತನ್ನು ಕೇಳಿ ಪರಶುರಾಮ ಭಾವೂ ನಕ್ಕು—

"ನಿಜ ನಿಜ, ನಿನ್ನಂಥವನಿಗೆ ನನ್ನ ಸೇನೆಯೇ ಸರಿಯಾದ ಸ್ಥಾನ. ಆಯಿತು. ನಮ್ಮಲ್ಲಿಯೇ ಇರು."

—ಎಂದು ಹೇಳಿದ.

ಅಂದಿನಿಂದ ಪರಶುರಾಮ ಭಾವೂನ ಆಶ್ರಿತನಾದ ಮಾಧವರಾಯ, ಅತ್ಯಂತ ಶೀಘ್ರವಾಗಿ ಆತನನ್ನು ಒಲಿಸಿಕೊಂಡು ಆತನ ಅಂತರಂಗ ಸಚಿವ ನಾದ.

ಆದರೆ, ಕೆಲವು ದಿನ ಪರಶುರಾಮ ಭಾವೂನ ಸಹವಾಸ ಮಾಡುವುದ ರಲ್ಲೇ,ಆತನ ಸಹವಾಸ ಸೆರಗಿನಲ್ಲಿ ಕೆಂಡ ಕಟ್ಟಿಕೊಂಡ ಹಾಗೆ ಎಂಬುದನ್ನು, ನೂರಾರು ಕತ್ತರಿಸಿದ ತಲೆಗಳ ಆಧಾರದಿಂದ ಅರಿತುಕೊಂಡ ಮಾಧವರಾಯ ಆದಷ್ಟು ಬೇಗ, ತನ್ನ ಮುಂದಿನ ಜೀವನಕ್ಕೆ ಏನಾದರೊಂದು ಶಾಶ್ವತವಾದ ಉಪಾಯವನ್ನು ಕಲ್ಪಿಸಿಕೊಂಡು ಅಲ್ಲಿಂದ ಕಂಬಿಕೀಳಬೇಕು ಎಂದು ಯೋಚಿಸುತ್ತಲೇ ಇದ್ದ.

ಶೃಂಗೇರಿಯ ಶಾರದಾ ದೇವಾಲಯದ ದರೋಡೆಯ ಸನ್ನಿವೇಶ, ಅವನಿಗೆ ಆ ಸಂದರ್ಭವನ್ನು ಒದಗಿಸಿ, ಆ ಸಂದರ್ಭದ ಸಂಪೂರ್ಣ ಲಾಭ ಪಡೆದುಕೊಂಡ ಮಾಧವರಾಯ, ಪರಶುರಾಮ ಭಾವೂನ ಕಾಟದಿಂದ ದೂರ

ವಾಗಿ, ಶ್ರೀರಂಗಪಟ್ಟಣಕ್ಕೆ ಆದಷ್ಟು ಹತ್ತಿರವಾದ ಸಾಗರವಳ್ಳಿಗೆ ಬಂದು ನೆಲೆಸಿದ್ದ.

ಹಾಗೆ ನಾಗರವಳ್ಳಿಗೆ ಬಂದು ನೆಲೆಸಿದಾಗಲೂ, ಮಾಧವರಾಯನಿಗೆ ಅಲ್ಲಿ ತಾನು ನಿಶ್ಚಿಂತನಾಗಿ ವಾಸಮಾಡಬಹುದೆಂದು ಎನಿಸಿತ್ತೇ ಹೊರತು, ಎಲ್ಲಿಂದಲೋ ಗಾಳಿಗೆ ಬಂದ ಗರಿಯ ಹಾಗೆ ಬಂದ ತನಗೆ ಅಲ್ಲಿ ಮದುವೆ ಯಾಗಿ ಸಂಸಾರಿಯಾಗಬಹುದು ಎಂಬ ನಿರೀಕ್ಷೆ ಇರಲಿಲ್ಲ. ಆದರೆ ಅವನ ನಿರೀಕ್ಷೆಗೆ ವಿರುದ್ಧವಾಗಿ ಅವನಿಗೆ ವಿವಾಹವೂ ಆಗಿ, ಶಂಕರಮ್ಮ ಅವನ ವಧುವಾಗಿ ಮನೆಗೆ ಬಂದಿದ್ದಳು.

ಮಾಧವರಾಯನಿಗೆ ಶಂಕರಮ್ಮನನ್ನು ವಧುವಾಗಿ ಹುಡುಕಿದ ಶ್ರೀಕಂಠ ಜೋಯಿಸರು—

' ಹುಡುಗಿಗೆ ಆಸ್ತಿಪಾಸ್ತಿ ಇಲ್ಲವಾದರೂ ಸಂಸಾರಕ್ಕೆ ಅಣಿಯಾದ ಹೆಣ್ಣು. ಒಂಟಿಯಾಗಿ ಮನೆಗೆಲಸವೆಲ್ಲವನ್ನೂ ತೂಗಿಸಿಕೊಂಡು ಹೋಗುವ ಛಾತಿ ಇದೆ. ಕಣ್ಣೂ ಮೂಗೂ ನೇರವಾಗಿದೆ. ಅಷ್ಟಕ್ಕಿಂತ ಹೆಚ್ಚೇನು ಬೇಕು, ಎಲ್ಲಕ್ಕಿಂತ ಹೆಚ್ಚಾಗಿ ಈ ಹೆಣ್ಣನ್ನು ಮದುವೆಯಾದರೆ, ನಿಮಗೆ ಬೇಗ ಸಂಸಾರಕ್ಕೆ ಬರುವ ಹೆಣ್ಣು ಸಿಕ್ಕಂತಾಗುವುದಲ್ಲದೆ, ಒಬ್ಬ ಅನಾಥ ಹುಡುಗಿಗೆ ಕನ್ಯಾಸೆರೆ, ಬಿಡಿಸಿದ ಪುಣ್ಯವೂ ಬರುತ್ತದೆ. '

—ಎಂದು ಆಕೆಯ ಪರವಾಗಿ ವಾದಿಸಿದ್ದರು.

ವಿವಾಹದ ವಿಷಯದಲ್ಲಿ ಹೆಚ್ಚು ಆಸಕ್ತಿಯಿಲ್ಲದ ಮಾಧವರಾಯ, ಒಂಟಿಯಾದ ತನಗೆ, ಇನ್ನೇತಕ್ಕೆ ಅಲ್ಲವಾದರೂ ದಿನವೂ ಮನೆಯಲ್ಲಿ ಬೇಯಿಸಿ ಹಾಕಲು, ಒಂದು ಹೆಣ್ಣು ದಿಕ್ಕು ಇರುವುದು ಲೇಸು ಎಂಬ ಭಾವನೆಯಿಂದ—

' ಆಯಿತು, ಹಾಗಲ್ಲ ಹೀಗೆ ಮಾಡು ಎಂದು ಹೇಳುವುದಕ್ಕೆ ಪರದೇಶಿ ಯಾದ ನನಗೆ ಈ ಊರಿನಲ್ಲಿ ಯಾರು ದಿಕ್ಕಿದಾರೆ ? ನೀವೇ ನನಗೆ ನೆಂಟರು, ಮಿತ್ರರು. ನೀವು ಆಗಬಹುದು ಎಂದರೆ, ನನ್ನದೇನೂ ಅಭ್ಯಂತರವಿಲ್ಲ.'

—ಎಂದು ಒಪ್ಪಿಗೆ ಕೊಟ್ಟಿದ್ದ.

ಆ ಲಗ್ನಕ್ಕೆ ಆಗಲಿ ಬಿಡಲಿ ಎಂದು ಹೇಳುವುದಕ್ಕೆ ಶಂಕರಮ್ಮನ ಕಡೆಯೂ ಯಾರು ದಿಕ್ಕು ಇಲ್ಲದೆ ಅವಳ ತಾಯಿ ನಂಜಮ್ಮನಿಗೆ ' ಸದ್ಯ ' ಪ್ರಾಯಕ್ಕೆ ಬಂದ ಈ ಮಗಳಿಗೆ ಮದುವೆಂತ ಒಂದು ಆದರೆ, ಊರಿನೋರ

ಶಲಿ ಕುಕ್ಕಲು ತಪ್ಪಿಸಿಕೊಂಡು ಬದುಕಬಹುದಲ್ಲಾ' ಎಂಬ ಆತುರವಿದ್ದುದರಿಂದ, ಆಕೆಯೂ ಮಾಧವರಾಯನ ಕುಲಗೋತ್ರಗಳ ಬಗ್ಗೆ ಹೆಚ್ಚು ಚರ್ಚೆ ಮಾಡದೆ ಮದುವೆಗೆ ಒಪ್ಪಿದ್ದಳು.

ಮದುವೆಯೂ ನಡೆದುಹೋಯಿತು.

ಮದುವೆಯಾದ ಕೆಲವೇ ದಿನಗಳಲ್ಲಿ, ಸಿಂದವಳ್ಳಿಯಲ್ಲಿ ಯಾವ ನೆಲೆಯೂ ಇಲ್ಲದ ನಂಜಮ್ಮ, ಮಗಳೊಂದಿಗೆ ನಾಗರವಳ್ಳಿಗೆ ಬಂದು, ಅಳಿಯನ ಮನೆಯ ಆಡಳಿತ ವಹಿಸಿಕೊಂಡಳು.

ಗಂಡನ ಮನೆಗೆ ಬಂದ ಒಂದು ವರ್ಷದೊಳಗಾಗಿ ಶಂಕರಮ್ಮ ಮೈ ನೆರೆದು ನಿಂತಳು. ಆಕೆ ಮೈ ನೆರೆದ ನಕ್ಷತ್ರ ಎಂಥದೋ ಏನೋ ಆಕೆಯ ನಿಷೇಕ ಪ್ರಸ್ತವಾದ ವರ್ಷದಲ್ಲೇ ನಂಜಮ್ಮ ತೀರಿಕೊಂಡು, ಮಾಧವರಾಯನ ಸಂಪೂರ್ಣ ಸಂಸಾರದ ಭಾರ ಶಂಕರಮ್ಮನ ಹೆಗಲ ಮೇಲೆ ಬಿತ್ತು.

ಮೊದಮೊದಲು ಶಂಕರಮ್ಮನ ಬಗ್ಗೆ ಇದು ಕೇವಲ ಅಡಿಗೆಯ ಅಗತ್ಯ ಬಗೆಹರಿಸಿಕೊಳ್ಳಲು ತಂದುಕೊಂಡ ಹೆಣ್ಣು ಎಂಬ ಭಾವನೆಯೇ ಇದ್ದರೂ, ಬರಬರುತ್ತಾ, ಆಕೆ ಸಂಸಾರವನ್ನು ನಡೆಸುವ ಗಂಭೀರವಾದ ರೀತಿ, ಗಂಡನ ವಿಷಯದಲ್ಲಿ ತೋರುತ್ತಿದ್ದ ಆದರ ಭಾವಗಳಿಂದಾಗಿ, ಮಾಧವರಾಯ ಆಕೆಗೆ ಸಂಪೂರ್ಣವಾಗಿ ಸೋತು ಹೋದ.

ಮಾಧವರಾಯನ ಸಂಸಾರಭಾರವನ್ನು ಹೊತ್ತಾಗ ಶಂಕರಮ್ಮನಿಗೆ ಕೇವಲ ಹದಿನಾರು ವರ್ಷ ವಯಸ್ಸು. ಆದರೂ ತನ್ನ ತಾಯಿಕೊಟ್ಟ ತರಬೇತಿನಿಂದಾಗಿ, ಶಂಕರಮ್ಮನಲ್ಲಿ ಆ ವಯಸ್ಸಿಗೆ ಮೀರಿದ ಸಂಸಾರ ನಿರ್ವಹಣೆಯ ದಕ್ಷತೆ ಇತ್ತು. ಅದಕ್ಕಿಂತಲೂ ಹೆಚ್ಚಾಗಿ, ತನ್ನ ನಯ ಗಾಂಭೀರ್ಯ ವಿಶ್ವಾಸಗಳಿಂದ ಸುತ್ತ ಮುತ್ತಲವರ ವಿಶ್ವಾಸವನ್ನು ಗಳಿಸಿ, ಹತ್ತು ಮಾತಿನಿಂದ ಆಗುವ ಕೆಲಸವನ್ನು ಒಂದೇ ಮಾತಿನಿಂದ ಮಾಡಿಸಿಕೊಳ್ಳುವ ಜಾಣತನವಿತ್ತು. ಕೆಲಸವನ್ನು ತಾನೇ ಮಾಡಲಿ—ಆ ಕೆಲಸದ ಅಚ್ಚುಕಟ್ಟು ಎಂಥವರನ್ನೂ ಮೆಚ್ಚಿಸುವ ಹಾಗಿರುತ್ತಿತ್ತು. ತನ್ನ ಗಂಡನ ಯೋಗಕ್ಷೇಮದ ವಿಷಯದಲ್ಲಂತೂ ಶಂಕರಮ್ಮ ನೂರು ಕಣ್ಣಾಗಿ ಕೆಲಸ ಮಾಡುತ್ತಿದ್ದಳು. ತನ್ನ ಗಂಡನ ಸ್ವಭಾವ ಹೇಗೆ, ಆತನ ಅಗತ್ಯಗಳೇನು, ಬಯಕೆಗಳೇನು, ತಾನು ಹೇಗಿದ್ದರೆ ಆತನಿಗೆ ಪ್ರಿಯ ಎಂಬುದನ್ನು ಅರಿತುಕೊಂಡು, ಯಾವುದೇ

ವಿಷಯದಲ್ಲಾಗಲೀ, ಆತ ಇಂಥದು ಬೇಕು ಎನ್ನುವ ಮೊದಲೇ ತಾನೇ ಊಹಿಸಿ, ಆ ಕೆಲಸ ಮಾಡಿ,ಗಂಡ ಮೆಚ್ಚಿಕೊಳ್ಳುವ ಹಾಗೆ ಮಾಡುತ್ತಿದ್ದಳು. ಶಂಕರಮ್ಮನ ಈ ಬಗೆಯ ಸ್ವಭಾವದಿಂದಾಗಿ, ಮಾಧವರಾಯನಿಗೆ ಶಂಕರಿ ಇಲ್ಲದಿದ್ದರೆ ಒಂದು ಗಳಿಗೆಯೂ ಈ ಮನೆಯಲ್ಲಿ ಬದುಕುವುದು ಸಾಧ್ಯವಿಲ್ಲ ಎನ್ನುವಂತಾಗಿತ್ತು. ಆ ಮಾತನ್ನು ಎಷ್ಟೋಬಾರಿ ಆತ ಬಾಯಿಬಿಟ್ಟು ಆಡಿದ್ದ—

' ಶಂಕರಿ, ನಿನ್ನನ್ನು ನಾನು ಕೈ ಹಿಡಿಯೋಕೆ ಮುಂಚೆ, ಎಷ್ಟೋ ವರ್ಷ ದಿಂದ ಒಂಟಿಯಾಗಿದ್ದ ನನಗೆ, ಮದುವೆ, ಮನೆ, ಸಂಸಾರ ಅಂದ್ರೆ ಏನೋ ಬೆಟ್ಟಾನ ನೆತ್ತಿ ಮೇಲೆ ಹೊತ್ತು ಕೊಳ್ಳುವಂಥ ಕೆಲಸ ಅಂತ ಭಯ ಇತ್ತು. ಆ ಮಾತು ನಾನು ಹೇಳಿದಾಗ, ಶ್ರೀಕಂಠ ಜೋಯಿಸರು, ನನಗೆ ಯಾರೋ ಒಬ್ಬ ಸರ್ವಜ್ಞ ಅನ್ನೋನು ಬರೆದ ಪದ್ಯ ಒಂದು ಹೇಳಿದ್ದರು—'

' ಯಾವ ಪದ್ಯ ? '

' ಆ ಸರ್ವಜ್ಞ ಬರೆದಿದಾನಂತೆ—

' ಬೆಚ್ಚನೆಯ ಮನೆಯಾಗೆ, ವೆಚ್ಚಕ್ಕೆ ಹೊನ್ನಾಗೆ
ಇಚ್ಚೆಯರಿಯುವ ಸತಿಯಾಗೆ, ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ '

—ಎಂತ. ಶ್ರೀಕಂಠಜೋಯಿಸರು ಆ ಮಾತು ಹೇಳಿದಾಗ ನಾನು ಅದನ್ನು ನಿಜ ಅಂತ ತಿಳಿದುಕೊಂಡಿರಲಿಲ್ಲ. ಎಲ್ಲಾ ಕವಿಗಳ ಹಾಗೆ ಸರ್ವಜ್ಞನೂ, ತಾನು ಕಾಣದ್ದನ್ನು ಸ್ವರ್ಗ ಅಂತ ವರ್ಣಿಸೋ ಭಂಗಿ ಭಕ್ತ ಅಂತ ತಿಳುಕೊಂಡಿದ್ದೆ...."

" ಅದೂ ನಿಜಾನೇ ಅನ್ನಿ. ಈ ಸಂಸಾರಾನ ಸ್ವರ್ಗ ಅನ್ನೋನಿಗೆ ಎಲ್ಲಾದರೂ ತಲೆ ನೆಟ್ಟಗಿರೋದು ಉಂಟೆ ?

—ಗಂಡನ ಮಾತಿಗೆ ತನ್ನ ಒಪ್ಪಿಗೆ ಸೂಚಿಸಿ ಹೇಳಿದಳು. ಶಂಕರಮ್ಮ

" ಹಾಗಲ್ಲ ಶಂಕರಿ, ಈಗ ನನಗೆ ಅರ್ಥವಾಗಿದೆ—ತಲೆ ನೆಟ್ಟಗಿದ್ದದ್ದು ಸರ್ವಜ್ಞನಿಗೆ, ಕೆಟ್ಟದ್ದು ನನಗೆ ಅಂತ. "

" ಏಕೆ ? "

" ನಿನ್ನಿಂದ. ಸ್ವರ್ಗದಲ್ಲಿ ರಂಭೆ, ಮೇನಕೆ ಅಂಥ ಅಪ್ಸರೆಯರು ಸಿಗಬಹುದು, ಅದೂ ನೂರು ಯಜ್ಞ ಮಾಡಿದರೆ. ಆವೇನೂ ಇಲ್ಲದ

ನನ್ನಂಥವನಿಗೆ ನಿನ್ನಂಥ ಹೆಂಡತಿ ಸಿಗುತ್ತಾಳೆಯೇ ? ನಿನ್ನಂಥ ಅಣಿಯಾದ ಹೆಂಡತಿ ಸಿಗದಿದ್ದರೆ, ಇಂದ್ರ ಪದವಿ ಸಿಕ್ಕು ಏನು ಉಪಯೋಗ ? '

" ಅಂತೂ ನನ್ನನ್ನು ದೇವ ದೇವತೆಗಳ ಸಮಾನ ಎನ್ನುತ್ತೀರಾ ? '

" ಅವರಿಗಿಂತ ನೀನು ಯಾವುದರಲ್ಲಿ ಕಡಿಮೆ ಹೇಳು : ಚಿಲ್ಲರೆ ದೇವತೆಗಳಿರಲಿ, ತ್ರಿಮೂರ್ತಿಗಳಲ್ಲೇ ಯಾರಿಗೆ ನಿನ್ನಂಥ ಹೆಂಡತಿ ಇದಾಳೆ. ಅದಿಲ್ಲದೇ ಇರೋ ಹೊತ್ತಿಗೇ ಅವರು, ಏನೇನೋ ನೆಪಮಾಡಿಕೊಂಡು, ಅವತಾರ ಎತ್ತಿ ಭೂಮಿಗೆ ಬರ್ತಾರೆ, ಭೂಮೀಲಿರೋ ನಿನ್ನಂಥವರ ಜೊತೇಲಿ ನಾಲ್ಕುದಿನ ಇದ್ದು ಸುಖ ಪಟ್ಟು ಹೋಗಲಿಕ್ಕೆ "—

—ಎಂದು ಹೇಳಿ ಶಂಕರಮ್ಮನನ್ನು ನಗಿಸಿ, ನಗುವಿನಿಂದ ಕೆಂಪೇರಿದ ಅವಳ ಕೆನ್ನೆಗಳನ್ನು ಮುತ್ತಿಟ್ಟು ಸಂತೋಷಪಡಿಸಿದ.

ಮಾಧವರಾಯ ಶಂಕರಮ್ಮನನ್ನು ದೇವತೆಗಳಿಗಿಂತ ಮಿಗಿಲು ಎಂದು ಹೊಗಳಿದುದು, ಕೇವಲ ರತಿ ಸಮಯದ ಸಾಕ್ಷಾತ್ತುರಿಯೇ ಆಗಿರದೆ, ಆ ಮಾತಿನಲ್ಲಿ ಆತನಿಗೆ ಹೃತ್ಪೂರ್ವಕವಾದ ನಂಬಿಕೆಯಿತ್ತು.

ಆ ನಂಬಿಕೆ ಅವನ ಅಶಾಂತ, ಅಸ್ಥಿರ ಜೀವನದಲ್ಲಿ ಶಾಂತಿ, ಸ್ಥಿರತೆಯನ್ನು ತಂದು ಕೊಟ್ಟು, ಶಂಕರಮ್ಮನ ಬಾಳಹೊಳೆಯ ಪ್ರಶಾಂತ ಗಂಭೀರ ಪ್ರವಾಹದಲ್ಲಿ ಮಾಧವರಾಯ ತನ್ನ ಬಾಳ ನೌಕೆಯನ್ನು ತೇಲಿಬಿಟ್ಟಿದ್ದ.

ಈಗ ನೀಲಾಳ ಲಾವಣ್ಯ,ಆ ಹೊಳೆ, ನೌಕೆಯಲ್ಲಿ ತೇಲುವ ದೋಣಿ ಎರಡನ್ನೂ ಕಲಕಿ ಹೊಯ್ದಾಡಿಸುವ ಬಿರುಗಾಳಿಯಾಗಿ ಬೀಸಿತ್ತು.

ಪೂನಾದ ಜೀವನದ ದಿನಗಳ ಹಳೆಯ ಹಸಿವು ಅವನಲ್ಲಿ ಮತ್ತೆ ಕಾಳ್ಗಿಚ್ಚಿನಂತೆ ಹೆಡೆ ಎತ್ತಿತು.

ನೀಲಾಳ ರೂಪಕ್ಕೆ ತನ್ನ ಚಿತ್ತವನ್ನು ಮಾರುವುದರ ಪರಿಣಾಮ ಏನಾಗುವುದು ಎಂದು ಮಾಧವರಾಯನಿಗೆ ತಿಳಿದಿತ್ತು. ಆ ಭೀತಿ ಇದ್ದುದರಿಂದಲೇ, ಮಾಧವರಾಯ ಚದುರಂಗದಾಟದ ಉತ್ಸವಕ್ಕೆ ವೇಶ್ಯೆಯರನ್ನು ಆರಿಸುವ ಕೆಲಸಕ್ಕೆ ತಾನು ಹೋಗದೆ, ಚಂದ್ರಯ್ಯನನ್ನು ಕಳಿಸಿದ್ದ. ಅವರ ಗುಂಪು ನಾಗರವಳ್ಳಿಗೆ ಬಂದಾಗಲೂ ಅವರ ವಿಷಯದಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಲು ಹೋಗಲಿಲ್ಲ.

ಅದೇ ಕಾರಣದಿಂದಲೇ, ಅವರು ನಾಗರತ್ನ ತನ್ನ ಮಗಳೊಂದಿಗೆ ಮನೆಗೆ ಬಂದಾಗಲೂ, ಅವಳನ್ನು ಮಾತಾಡಿಸಿರಲಿಲ್ಲ, ಯಾಗು ನೀನು ಎಂದು

ಕೂಡಾ ಕೇಳನೆ, ನಿರಾಸಕ್ತನಂತೆ ಅವರ ಯೋಗಕ್ಷೇಮವನ್ನು ವಿಚಾರಿಸಿದ್ದ.

—ಈಗೆ

ನೀಲಳ ಯೌವನ ಪ್ರಮತ್ತರೂಪ, ಮಾಧವರಾಯನ ಸಿಥಾ(?)ರದ ಕಬ್ಬಿನ ಗದ್ದೆಯನ್ನು ಆನೆ ಕಾಲುಗಳಿಂದ ತುಳಿದು, ಚೆಲ್ಲಾಪಿಲ್ಲಿಯಾಗಿ ಮಾಡಿ, ಅವನಲ್ಲಿ ಸದಾ ಅವಳ ರೂಪಸುಧೆಯನ್ನು ಆಸ್ವಾದಿಸಬೇಕೆಂಬ ಉನ್ಮತ್ತ ಬಯಕೆಯನ್ನು ಮೂಡಿಸಿತ್ತು.

ಆ ಬಯಕೆಯನ್ನು ಮರೆಯಲೆಂದೇ ಮಾಧವರಾಯ ನದಿಯ ತೀರದ ಪ್ರಶಾಂತ ವಾತಾವರಣದಲ್ಲೂ ಆತನಿಗೆ ಅವನು ಬಯಸಿದ ಚಿತ್ತಶಾಂತಿ ದೊರಕಲಿಲ್ಲ.

ಬತ್ತಿದ ನದಿಯ ಕ್ಷೀಣ ಪ್ರವಾಹ ಅವನಿಗೆ ನೀಲಳ ಬಡನಡುವನ್ನು ನೆನಪಿಗೆ ತಂದರೆ, ಹೊಳೆಯ ನೀರಿನಲ್ಲಿ, ಬಿಸಿಲಿನಲ್ಲಿ ಫಳಕ್ಕನೆ ಹೊಳೆದು ಆಡುವ ಬೆಳ್ಳಿ ಮೀನು, ಅವಳ ಚಂಚಲ ನೇತ್ರಗಳ ನೆನಪನ್ನು ಕೆರಳಿಸಿ, ಅವನ ಚಿತ್ತಕ್ಕೆ ಹುಚ್ಚು ಹಿಡಿಸುತ್ತಿದ್ದಿತು. ಆ ನೆನಪಿನ ವಿರುದ್ಧ ಶಂಕರಮ್ಮನ ಸಾತ್ವಿಕ ಸೊಬಗನ್ನು ಹೂಡಿ, ಅದನ್ನು ಗೆಲ್ಲಲು ಯತ್ನಿಸಿದ ಮಾಧವರಾಯ.

ಆದರೆ ನೀಲಳ ರೂಪದ ಕಾರ್ಮೋಡದ ಆಚ್ಛಾದದಿಂದ ಶಂಕರಮ್ಮನ ರೂಪಚಂದ್ರ ಕಾಂತಿಹೀನನಾಗಿದ್ದ.

ಎಷ್ಟೆಷ್ಟು ಪ್ರಯತ್ನಿಸಿದರೂ ತನ್ನ ಮನಸ್ಸಿಗೆ ಪುನಃ ಸಂತೋಷವನ್ನು ತಂದುಕೊಳ್ಳಲಾಗದೆ, ಕೊನೆಗೆ—

"ಹಾಳಾಗಲಿ, ಜೀವನದಲ್ಲಿ ಇಂಥದು ಎಷ್ಟೋ ಮಾಡಬಾರದ ಕೆಲಸ ಮಾಡಿಯಾಯಿತು. ಇದೂ ಒಂದು ಆಗಿಹೋಗಲಿ. ಅದೃಷ್ಟವಿದ್ದರೆ, ಎರಡು ದಿನ ಇದನ್ನೂ ಅನುಭವಿಸಿ ಮರೆತುಬಿಡೋದು"

—ಎಂಬ ಶರಣಾಗತಿಯ ತೀರ್ಮಾನಕ್ಕೆ ಬಂದ. ಮಾಧವರಾಯ ದಂಡೆಯಿಂದ ಮೇಲೆದ್ದು ಊರಿನತ್ತ ಹೊರಟ.

ಊರಿನತ್ತ ಮರಳುತ್ತಿದ್ದ ಹಾಗೇ ಮಾಧವರಾಯನಿಗೆ. ಅಲ್ಲಿ ನಡೆಯುತ್ತಿದ್ದ ಚದುರಂಗದಾಟದ ನೆನಪಾಗಿ, ಎದುರಿಗೆ ಸಿಕ್ಕಿದವರೊಬ್ಬರನ್ನು-

"ಆಟ ಇನ್ನೂ ನಡೀತಾ ಇದೆಯೋ ?"

—ಎಂದು ಕೇಳಿದ.

"ಈಗತಾನೇ ಮುಗೀತು. ಅದನ್ನು ಮುಗಿಸಿಕೊಂಡೇ ನಾನು ಈ ಕಡೆ ಬಂದೆ.''

—ಎಂದ ಆತ.

"ಹಾಗೇ. ಆಟದಲ್ಲಿ ಯಾರು ಗೆದ್ದರು ?"

"ಪಟ್ಟಣದ ಅಯ್ಯಂಗಾರ್ಯರು."

"ಚಂದ್ರಯ್ಯ ಈ ಸಲವೂ ಸೋತು ಹೋದನೇ ?"

"ಏನ್ಮಾಡ್ತಾರೆ—ಪಾಪ! ಆತನೂ ಹೆಣಗೋ ಅಷ್ಟು ಹೆಣಗಿದ. ಏನು ಮಾಡಿದ್ರೂ ಕೈ ನಡೀಲಿಲ್ಲ. ಅಂತೂ ಗೆಲ್ಲೋದು ಚಂದ್ರಯ್ಯನ ಹಣೇಲಿ ಬರೆದಿರಲಿಲ್ಲ."

—ಎಂದು ಹೇಳಿ ಆತ ತನ್ನ ದಾರಿ ಹಿಡಿದು ಹೊರಟು ಹೋದ

ಆತ ಚಂದ್ರಯ್ಯನಿಗೆ ಹೇಳಿದ—

"ಗೆಲ್ಲೋದು ಆತನ ಹಣೇಲಿ ಬರೆದಿರಲಿಲ್ಲ."

—ಎಂದ ಮಾತನ್ನು ತನಗೇ ಅನ್ವಯಿಸಿ ಹೇಳಿದಂತಾಗಿ, ಮಾಧವ ರಾಯ ತಲೆ ತಗ್ಗಿಸಿ, ಚದುರಂಗದಾಟದ ಚಪ್ಪರದ ಕಡೆ ಹೆಜ್ಜೆ ಹಾಕಿದ.

## ೧೩

ಮಾಧವರಾಯ ಚಪ್ಪರದ ಬಳಿ ಬರುವ ವೇಳೆಗೆ, ಗ್ರಾಮಸ್ಥ ಹೇಳಿ ದಂತೆ ಆಟ ಮುಗಿದುಹೋಗಿದ್ದುದರಿಂದ, ಚಪ್ಪರದಲ್ಲಿ ಪ್ರೇಕ್ಷಕರಾಗಿ ನೆರೆದ ಜನರೆಲ್ಲಾ, ಊಟ ವಿಶ್ರಾಂತಿಗಾಗಿ ತಮ್ಮ ಮನೆಗಳಿಗೆ ಹೋಗಿ ಚಪ್ಪರದಲ್ಲಿ ಮಾಧವರಾಯನಿಗಾಗಿ ಕಾಯುತ್ತಿದ್ದ ಚಂದ್ರಯ್ಯ. ಅಯ್ಯಂಗಾರ್ಯರು, ಮತ್ತೆ ಕೆಲವರು ಮಾತ್ರವೇ ಉಳಿದು, ಚಪ್ಪರ ಭಣಗುಟ್ಟುತ್ತಿತ್ತು.

"ನೀವೆಲ್ಲಾ ನನಗೋಸ್ಕರ ಕಾದಿದೀರೋ ಏನೋ, ಕ್ಷಮಿಸಬೇಕು. ಮೈಯಲ್ಲಿ ಏಕೋ ಇರಿಸುಮುರಿಸಾದ್ದರಿಂದ ಹಾಗೇ ಕಾಲಾಡಿಸಿ ಕೊಂಡು ಬರೋಣಾಂತ ನದಿಯ ಕಡೆ ಹೋಗಿದ್ದೆ. ಅಲ್ಲದೆ, ನಾನು ಆಟ ಇಷ್ಟು ಬೇಗ ಮುಗಿದು ಹೋಗುತ್ತೇಂತ ತಿಳಿದುಕೊಂಡೂ ಇರಲಿಲ್ಲ."

—ಎಂದು ಹೇಳಿದ ಮಾಧವರಾಯ.

ನೀವೂ ನಾನೂ ಏನು, ಆಟ ಇಷ್ಟು ಬೇಗ ಮುಗಿದು ಹೋಗುತ್ತೇಂತ ಯಾರೂ ತಿಳಿದುಕೊಂಡಿರಲಿಲ್ಲ. ಆದರೆ ಅಯ್ಯಂಗಾರ್ ಸ್ವಾಮಿಗಳು "ಕಮಾಲ್" ಮಾಡಿಬಿಟ್ಟರು. ಆದರೂ, ನಾನು ಸೋತರೂ ಚಿಂತೆಯಿಲ್ಲ. ನೀವು ಆ ಆಟ ನೋಡಬೇಕಾಗಿತ್ತು ಯಜಮಾನರೇ. ಜನ್ಮಕ್ಕೊಂದು ಸಲ ಅಂಥ ಆಟ ನೋಡೋ ಭಾಗ್ಯ ಸಿಗೋದು ಅಪರೂಪ. ನಾನೂ ಎಷ್ಟೋ ಜನ ಚದುರಂಗದಾಟ ಆಡೋದನ್ನ ನೋಡಿದೀನಿ. ಆದ್ರೆ ಇಂಥ ಆಟ ನೋಡಿಲ್ಲ. ಅಯ್ಯಂಗಾರ್ ಸ್ವಾಮಿಗಳು ಯಾವುದೋ ಯಕ್ಷಿಣೀನ ವಶಮಾಡಿಕೊಂಡಿದಾರೆ. ಅದಕ್ಕೇ ಅವರು ನಮ್ಮ ಮನಸ್ಸಿನಲ್ಲಿ ಏನು ನಡೀತಾ ಇದೇಂತ ತಿಳಿದುಕೊಂಡು ಆಟ ಆಡ್ತಾರೆ."

—ಎಂದು ಚಂದ್ರಯ್ಯ, ಆಟದಲ್ಲಿ ಸೋತರೂ ಅದರಿಂದ ಕಹಿಯಾಗದೆ ಮುಕ್ತಕಂಠದಿಂದ ಅಯ್ಯಂಗಾರ್ಯರ ಆಟಗಾರಿಕೆಯ ಚಾತುರ್ಯವನ್ನು ಹೊಗಳಿದ.

"ಯಕ್ಷಿಣೀನೂ ಇಲ್ಲ, ಏನು ಮಣ್ಣಾಂಗಟ್ಟಿಯೂ ಇಲ್ಲ. ನನಗೆ ಸೋತ ಮಾತ್ರಕ್ಕೆ ನೀನು, ನಿನ್ನದು ಕಳಪೆ ಆಟ ಅಂತ ತಿಳಿದುಕೋಬೇಡ. ಒಂದು ಸ್ವಲ್ಪ ಸರಿಮಾಡಿಕೊಂಡರೆ ಎಂಥೋರಿಗೆ ಬೇಕಾದ್ರೂ ನೀರು ಕುಡಿಸಬಹುದು."

—ಶಾಮಯ್ಯಂಗಾರ್ಯರು ಚಂದ್ರಯ್ಯನ ಬೆನ್ನು ತಟ್ಟುತ್ತಾ ಹೇಳಿದರು.

"ಎಲ್ಲಿಯಾದರೂ ಉಂಟೆ ಸ್ವಾಮಿ, ನೀವೆಲ್ಲಿ, ನಾನೆಲ್ಲಿ? ರಂಗನ ಮುಂದೆ ಸಿಂಗನೇ? ಸುಮ್ಮನೆ ಯಾಕೆ ಹೊಗಳ್ತೀರಾ?"

"ನಾನು ಮುಖಸ್ತುತಿ ಮಾಡೋಕೆ ಹೇಳ್ತಾ ಇಲ್ಲ ಚಂದ್ರಯ್ಯ. ಇವತ್ತು ಸಂಜೆ ನಾನು ನಿನ್ನ ಜೊತೇಲಿ ಆಡೋ ಮೂರನೇ ಆಟ, ಈ ಜನ್ಮಕ್ಕೆ ಕಡೇ ಆಟ...."

"ಅದೇಕೆ ಹಾಗೆ ಹೇಳ್ತೀರ ಅಯ್ಯಂಗಾರ್ರೇ?"

—ಅವರು ಹೇಳಿದುದನ್ನು ಕೇಳಿ ಮಾಧವರಾಯನೇ ಪ್ರಶ್ನೆಮಾಡಿದ.

"ಈ ವಯಸ್ಸಿನಲ್ಲಿ ನಾನಿನ್ನೂ ಚದುರಂಗ ಆಡ್ತಾ ಕೂಡೋದು ನಾಚಿಕೆಗೇಡು.... ಇದೇ ಆಟ, ಖುಷಿ—ಮೋಜಿನಲ್ಲೇ ಕಳೆದುಹೋಯಿತು—ಯಾವ ಜನ್ಮದ ಪಾಪಶೇಷವೋ ಏನೋ. ಇದರಲ್ಲಿ ಎಷ್ಟು ಕಾಲ

ಮುಳ್ಳು ಮೊನೆಯಷ್ಟು ಪುಣ್ಯಶೇಷವೂ ಇತ್ತೊಂತ ಕಾಣುತ್ತೆ. ಅದಕ್ಕೇ ದೇವರು ನನಗೆ ದಕ್ಷಿಣದ ಗಂಗೆಯಾದ ಕಾವೇರೀ ತಡೀಲಿ, ಸಾಕ್ಷಾತ್ ರಂಗ ನಾಥ ಸ್ವಾಮಿಯ ಸನ್ನಿಧಿಯಲ್ಲಿ ಬ್ರಾಹ್ಮಣನಾಗಿ ಹುಟ್ಟೋ ಅವಕಾಶ ಒದ ಗಿಸಿದ. ಇನ್ನಾದರೂ ಈ ಹವ್ಯಾಸ ಎಲ್ಲಾ ಬಿಟ್ಟು, ಉಳಿದಿರೋ ನಾಲ್ಕು ವರ್ಷ ಮುಂದಿನ ಜನ್ಮಕ್ಕೆ ದಾರಿ ಮಾಡಿಕೋತೀನಿ. ಅದಕ್ಕೇ ಇದೊಂದು ಚಪಲ ಇತ್ತು—ಅಕ್ಬರನ ಹಾಗೆ ನಾನೂ ಒಂದಾಟ ಆಡಿಬಿಡ ಬೇಕೊಂತ. ಧರ್ಮರಾಯರಾಗಿ ಬಂದು, ನೀವು ಅದನ್ನು ತೀರಿಸಿದಿರಿ. ಇಷ್ಟಾದ ಮೇಲೂ ಕಲ್ಲಾಗಿ ಕುಳಿತಿರೋ ಭಗವಂತ, ಎದ್ದು ಬಂದು 'ಹುಚ್ಚುಮುಂಡೇ' ಅಂತ ಕೆನ್ನೆಗೆ ಹೊಡೆಯೋವರೆಗೂ ಆಟ ಆಡಲೇ? ಸಾಕು ಸ್ವಾಮಿ, ಇವತ್ತು ಕಡೇ ಆಟ ಆಡಿಬಿಟ್ಟು, ಸ್ವಾಮಿ ಸನ್ನಿಧೀಲಿ ಇದಕ್ಕೆ ಎಳ್ಳುನೀರು ಬಿಟ್ಟುಬಿಡ್ತೀನಿ."

—ಎಂದು ಶಾಮಯ್ಯಂಗಾರ್ಯರು ತಮ್ಮ ಹೃದಯದಲ್ಲಿದ್ದುದನ್ನು ವಿವ ರಿಸಿದರು.

"ಅಂದರೆ ಆಟದಲ್ಲಿ ಆಯುಸ್ಸು ಕಳೆದದ್ದು ಪಾಪ ಕಟ್ಟಿಕೊಂಡ ಹಾಗೆ ಅಂತ ತಿಳಿದುಕೊಂಡಿದ್ದೀರಾ ಸ್ವಾಮಿ?"

—ಶ್ರೀಕಂಠ ಜೋಯಿಸರು ಅವರ ಮಾತನ್ನು ಬೆರೆತು ಕೇಳಿದರು.

"ಅಲ್ಲದೇ ನಾನು ಮಾಡಿದ್ದೇನು ಪುಣ್ಯದ ಕೆಲಸವೇ?"

"ಹಾಗಂತ ನಾನು ಹೇಳಲಿಲ್ಲ. ಯಾವುದನ್ನೂ ನಾವು ಯಾವ ದೃಷ್ಟಿಯಿಂದ ನೋಡ್ತೀವಿ ಅನ್ನೋದು ಮುಖ್ಯ."

"ಹಾಗಂದರೇನು ಜೋಯಿಸರೇ, ನಿಮ್ಮ ಮಾತು ಒಳ್ಳೆ ವಿಚಿತ್ರವಾ ಗಿದೆಯಲ್ಲ...."

"ವಿಚಿತ್ರವೂ ಇಲ್ಲ, ಸಚಿತ್ರವೂ ಇಲ್ಲ; ಪ್ರಾರಬ್ಧ ಕರ್ಮದ ಫಲವಾಗಿ, ಈ ಜನ್ಮದಲ್ಲಿ ನಾವು ಒಳ್ಳೆಯದನ್ನೋ ಕೆಟ್ಟದನ್ನೋ ಮಾಡುತ್ತೇವೆ. ಆದರೆ ಎಲ್ಲಿಯವರೆಗೂ 'ಇವೆಲ್ಲವನ್ನೂ ಮಾಡುತ್ತಿರುವವನು ನಾನು, ಇದರ ಫಲ ಭೋಗಿಸುವವನು ನಾನು' ಎಂಬ ಮಾಯೆಯ ಜಾಲದಲ್ಲಿ ತೊಡಗಿರು ತ್ತೇವೋ, ಅಲ್ಲಿಯವರೆಗೂ ಅವು, ನಾವು ತೊಟ್ಟ ಬಟ್ಟೆಗಳಂತೆ ನಮಗೆ ಅಂಟಿಕೊಂಡಿರುತ್ತವೆ. ಅದನ್ನು ಬಿಟ್ಟು, ಶಂಕರ ಭಗವತ್ಪಾದರು ಅಪ್ಪಣೆ ಕೊಡಿಸಿದ ಹಾಗೆ 'ಯದ್ಯದ್ ಕರೋಮಿ ತತ್ತದಖಿಲಂ ಶಂಭೋ ತವಾ

ರಾಧನೆಂ' ಅಂತ ಮಾಡುವುದಕ್ಕಿಲ್ಲ. ಅರ್ಪಣಾಭಾವದಿಂದ ಮಾಡಿದರೆ, ಆಗ ಈ ಕರ್ಮದ ಕೊಳೆ ತಾನಾಗಿಯೇ ತೊಳೆದುಹೋಗುತ್ತದೆ. ಆ ಅವಕಾಶ ಇರುವಾಗ ನೀನೇಕೆ ನಾನು ಪಾಪ ಮಾಡಿದೆ ಅಂತ ಕೊರಗಬೇಕು? ನೀವು ಆಡಿದ ಚದುರಂಗದಾಟವೂ ಭಗವದಾರಾಧನೆಯೇ ಎಂದುಕೊಳ್ಳಿ. ಅಂಗಭೋಗ, ರಾಗಭೋಗ ಒಪ್ಪಿಕೊಳ್ಳೋ ಪರಮಾತ್ಮ, ನಿಮ್ಮ ಚದುರಂಗದಾಟದ ಸೇವೇನ ಒಲ್ಲೆ ಅನ್ತಾನೆಯೇ?"

ಶ್ರೀಕಂಠ ಜೋಯಿಸರು ಹೇಳಿದುದನ್ನು ಅಷ್ಟು ಹೊತ್ತು ತಲೆ ತಗ್ಗಿಸಿ ಕೇಳಿದ ಶಾಮಯ್ಯಂಗಾರ್ಯರು ಬಳಿಕ ತಲೆ ಎತ್ತಿ, ಕಣ್ಣೀರು ತುಂಬಿದ ಕಣ್ಣುಗಳಿಂದ ಜೋಯಿಸರನ್ನು ನೋಡುತ್ತಾ, ಗದ್ಗದಸ್ವರದಲ್ಲಿ -

"ನಿಜ ಸ್ವಾಮಿ, ನಿಮ್ಮ ಮಾತು ನಿಜ. ನಾನು ಮೂಢನಾಗಿ ಇಷ್ಟು ದಿನ ಈ ಕೊರಗು ಅನುಭವಿಸಿದೆ. ಶಂಕರಭಗವತ್ಪಾದರಂತೆಯೇ ನಮ್ಮ ಶ್ರೀಮದಾಚಾರ್ಯರೂ ಅಪ್ಪಣೆ ಕೊಡಿಸಿದಾರೆ ..."

--ಎಂದರು.

"ಹಾಗೇ ಅವರು ಏನು ಹೇಳಿದಾರೋ ಹೇಳಿ. ಈ ಪಾಪಿಕಿವಿಗಳಿಗೂ ಅಷ್ಟು ಬೀಳಲಿ."

---ಶ್ರೀಕಂಠ ಜೋಯಿಸರು ಕೇಳಿದರು.

"ಶ್ರೀಮದಾಚಾರ್ಯರಿಂದ ರಚಿತವಾದ 'ಶರಣಾಗತಿಗದ್ಯ'ದಲ್ಲಿ ಅವರು ಭಗವಂತನನ್ನು ಹೀಗೆ ಬೇಡಿಕೊಂಡಿದ್ದಾರೆ:

ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ-
ಪ್ರಸಾದಯೇ ತ್ವಾಮಹಮೀಶಮೀಡ್ಯಮ್
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥

ಆದುದರಿಂದ ದೇವನೇ, ನನ್ನ ಶರೀರವನ್ನು ದಂಡವತ್ ಕೆಳಗೆ ಬೀಳಿಸಿ ನಮಸ್ಕರಿಸಿ, ಸ್ತುತ್ಯರ್ಹನೂ, ಈಶನೂ ಆದ ನಿನ್ನನ್ನು ಪ್ರಸನ್ನನಾಗೆಂದು ಪ್ರಾರ್ಥಿಸುತ್ತಿದ್ದೇನೆ. ತಂದೆಯು ಮಗನ ಅಪರಾಧವನ್ನೂ, ಸ್ನೇಹಿತನು ಸ್ನೇಹಿತನ ಅಪರಾಧವನ್ನೂ, ಪ್ರಿಯನಾದ ನೀನು ಪ್ರಿಯನಾದ ನನಗಾಗಿ, ನಾನು ಮಾಡಿದ ಎಲ್ಲ ಅಪರಾಧವನ್ನೂ ಸಹಿಸಿಕೊಳ್ಳಬೇಕು.

"ಹಾಗೆ ಪ್ರಪತ್ತಿಭಾವದಿಂದ ಬೇಡಿಕೊಂಡವನ ಎಲ್ಲಾ ಅಪರಾಧ ಗಳನ್ನೂ ಭಗವಂತನು ಕ್ಷಮಿಸಿ, ಅಂಥಾವನಿಗೆ ತನ್ನ ನಿತ್ಯ ಕೈಂಕರ್ಯವನ್ನು ದಯಪಾಲಿಸುತ್ತಾನೆ ಎಂದು ಭಗವದ್ವಾಕ್ಯವೇ ಇದೆ."

"ಇಷ್ಟು ದಿನ ನನಗೆ ಈ ಮಾತು ಮರೆತುಹೋಗಿತ್ತು; ಈ ದಿನ ನಿಮ್ಮ ಮಾತಿನಿಂದ ನೆನಪಾಯಿತು. ಆಚಾರದೊಂದಿಗೆ ವಿಚಾರಕ್ಕೂ ತಿಲಾಂಜಲಿ ಕೊಟ್ಟಿದ್ದ ನನ್ನಲ್ಲಿ ಮತ್ತೆ ವಿಚಾರ ಬುದ್ಧಿಯನ್ನು ಪ್ರಚೋದನೆ ಮಾಡಿ ಕಾಪಾಡಿದಿರಿ."

—ಎಂದರು ಶಾಮಯ್ಯಂಗಾರ್ಯ್ಯರು.

"ಹಾಗಾದ ಮೇಲೆ, ನೀವು ಇನ್ನು ಚದುರಂಗದಾಟ ಬಿಡಬೇಕಾಗಿಲ್ಲ ವಲ್ಲಾ...."

—ಮಾಧವರಾಯ ನಗುತ್ತಾ ಅಯ್ಯಂಗಾರ್ಯರನ್ನು ಪ್ರಶ್ನೆ ಮಾಡಿದ.

"ಉಂಟು, ಉಂಟು, ಆ ತೀರ್ಮಾನದ ಮಾತಿನಲ್ಲಿ ಕವಡಿಲ್ಲ. ಇಷ್ಟು ದಿನ ಪಾಪ ಮಾಡಿದ ಭೀತಿ ನನ್ನನ್ನು ಆವರಿಸಿತ್ತು. ಇನ್ನು ಅದನ್ನು ಬಿಟ್ಟು ಮುಕ್ತ ಮನಸ್ಸಿನಿಂದ ರಂಗಧಾಮನ ಪೂಜೆ ಮಾಡುತ್ತೇನೆ"

—ತಮ್ಮ ನಿರ್ಧಾರವನ್ನು ಬದಲಿಸದೆ ಹೇಳಿದರು ಅಯ್ಯಂಗಾರ್ಯರು.

"ಹಾಗೆ ನೀವು ಮಾಡಿದರೆ, ನಿಮ್ಮ ಆಟಗಾರಿಕೆಯ ಕಲೆ ನಿಮ್ಮ ತಲೆಗೇ ಕೊನೆಯಾಗಿ ಹೋಗುತ್ತದಲ್ಲಾ ಅಯ್ಯಂಗಾರ್ ಸ್ವಾಮಿಗಳೇ...."

—ಚಂದ್ರಯ್ಯ ಏನೋ ಬಯಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಕೇಳಿದ.

"ಅದ್ಯಾಕೆ ಕೊನೆಯಾಗುತ್ತೆ ?"

"ಮತ್ತೆ ಹಾಗಲ್ಲಾಂದರೆ ಬೇರೆ ಯಾರಿಗಾದರೂ ಹೇಳಿಕೊಟ್ಟ ದೀರಾ ?"

"ಇಲ್ಲ, ಈಗ ಆ ಕೆಲಸ ಮಾಡುತ್ತೇನೆ. ನೀನು ಕಾರಣವಾಗಿ ನಿಂತು, ನನ್ನ ಜೀವನದ ಬಹು ದೊಡ್ಡ ಆಸೆಯನ್ನು ತೀರಿಸಿದೆ ಚಂದ್ರಯ್ಯ. ನನಗೆ ತಿಳಿದಿರೋ ಚದುರಂಗ ರಹಸ್ಯಾನ ನಿನಗೆ ಹೇಳಿಕೊಟ್ಟು, ನಿನ್ನ ಋಣ ಬಗೆ ಹರಿಸಿಕೊಂಡು ಹೋಗುತ್ತೇನೆ."

—ಎಂದು ಚಂದ್ರಯ್ಯ ತನ್ನ ಬಯಕೆಯನ್ನು ಬಾಯಿಬಿಟ್ಟು ಆಡುವ ಮೊದಲೇ ಅರಿತು ಹೇಳಿದರು ಅಯ್ಯಂಗಾರ್ಯರು.

ಅವರ ಮಾತನ್ನು ಕೇಳಿದ ಚಂದ್ರಯ್ಯ ಚಕಿತನಾಗಿ—

"ಇದಕ್ಕೇ ನೋಡಿ ನಾನು, ನೀವು [illegible]ಶೀನ ವಶಮಾಡಿಕೊಂಡಿ ದೀರಾ ಅಂತ ಹೇಳಿದ್ದು. ನನ್ನ ಮನಸ್ಸಿನಲ್ಲಿದ್ದದನ್ನು ಒಳ್ಳೇ ಕುರುತೇಟು ಹೊಡೆದ ಹಾಗೆ ಹೇಳಿಬಿಟ್ಟಿರಲ್ಲಾ...."—ಎಂದ.

"ಅದಕ್ಕೇ [illegible] ನೀನು ಮುಚ್ಚಿಟ್ಟಿದ್ದ—ರಹಸ್ಯ ಅರ್ಥವಾಗೋ ವರೆಗೆ ಎಲ್ಲಾ ಸುದ್ದಿಯನ್ನೂ ಹೇಳಿರ್ತೇನೆ. [illegible]ದೇನಿದೆಯೋ ಅವನ್ನೆಲ್ಲಾ ಹೇಳಿಕೊಡ್ತೀನಿ."

—ಎಂದು ಭರವಸೆ ಕೊಟ್ಟರು ರಾಮಯ್ಯಂಗಾರ್ಯರು.

"ಕೃತಾರ್ಥನಾದೆ ಸ್ವಾಮಿ, ಅಷ್ಟನ್ನ ಕೊಡಿಸಬೇಕು...."

—ಎಂದು ಚಂದ್ರಯ್ಯ ಕೈಮುಗಿದು ಹೇಳಿದ.

"ಅಯ್ಯೋ ಹುಚ್ಚ, ಹೊಟ್ಟೆ ಅನ್ನ ಕಾಣದೆ ಹಸಹಸ ಅನ್ನೋವಾಗ ಇದೆಲ್ಲಾ ಕೇಳ್ತೀಯಲ್ಲಾ. ಹಸಿದ ಹಾರುವನ್ನು ಕೆರಳಿಸಬಾರದು ಅಂತ ಗೊತ್ತಿಲ್ವೆ? ನಡಿ ಮೊದಲು ಹೋಗಿ, ಹೊಟ್ಟೆಗೆ ಅಷ್ಟು ಅನ್ನ ಕಾಣಿಸೋಣ. ಆಮೇಲೆ, ಮಧ್ಯಾಹ್ನ ಮೂರನೆ ಆಟ ಆಡೋವಾಗ ರಹಸ್ಯಾನ ಹೇಳಿ ಕೊಡ್ತೀನಿ."

—ಎಂದು ಅಯ್ಯಂಗಾರ್ಯರು ಗಳಿಗೆಗಳಿಗೆಗೂ ಊಟದ ಹೊತ್ತು ಮೀರುತ್ತಿದ್ದುದನ್ನು ಎಲ್ಲರ ಗಮನಕ್ಕೆ ತಂದರು.

ಉಳಿದವರ ಹೊಟ್ಟೆಗಳೂ ಅಷ್ಟೇ ತಳಮಳಿಸುತ್ತಿದ್ದವು. ಎಂತಲೇ ಅಲ್ಲಿಂದ ಕದಲಲು ಯಾರೂ ಅಡ್ಡಿಮಾಡಲಿಲ್ಲ.

## ೧೪

ತಮ್ಮ ಜೀವನದ ಕೊನೆಯ ಆಟವಾದ, ಮೂರನೆಯ ಆಟದಲ್ಲಿ, ಅಯ್ಯಂಗಾರ್ಯರು ಚಂದ್ರಯ್ಯನಿಗೆ ಚದುರಂಗ ರಹಸ್ಯವನ್ನು ಬೋಧಿಸು ತ್ತೇನೆ ಎಂದು ಹೇಳಿದುದರಿಂದ, ಅವರು ಆ ಆಟವನ್ನು, ಚಂದ್ರಯ್ಯನೊಡನೆ ಒಂಟಿಯಾಗಿ ಆಡುವುದಾಗಿಯೂ, ಆ ಆಟಕ್ಕೆ ಪ್ರೇಕ್ಷಕರು ಯಾರೂ ಇರ ಬಾರದೆಂದೂ, ಅಷ್ಟಕ್ಕೆ ಮಾಧವರಾಯ ದೊಡ್ಡಮನಸ್ಸು ಮಾಡಿ, ಅವಕಾಶ ಕಲ್ಪಿಸಿ ಕೊಡಬೇಕೆಂದು ಪ್ರಾರ್ಥಿಸಿದುದರಿಂದ, ಮಾಧವರಾಯ ಅದಕ್ಕೆ ಒಪ್ಪಲೇಬೇಕಾಯಿತು.

ಅಯ್ಯಂಗಾರ್ಯರ ಆ ಪ್ರಾರ್ಥನೆಯಿಂದ ನೆರೆದ ಜನಕ್ಕೆ ಬೇಸರವಾಗ ಬಾರದು ಎಂಬ ಕಾರಣದಿಂದ, ಆದಿನ ಸಂಜೆ ಶ್ರೀರಂಗಪಟ್ಟಣದಿಂದ ಬಂದ ನರ್ತಕಿಯರಿಂದ ನೃತ್ಯವನ್ನು ಏರ್ಪಡಿಸಬೇಕು ಎಂದು ಆಲೋಚಿಸಿ, ಅದಕ್ಕೆ ನಾಗರತ್ನಳ ಒಪ್ಪಿಗೆ ಪಡೆಯುವ ಸಲುವಾಗಿ, ಆಕೆಗೆ ಹೇಳಿಕಳುಹಿಸಿದ.

ಮಾಧವರಾಯನ ಕರೆ ತಲುಪುತ್ತಿದ್ದ ಹಾಗೇ ನಾಗರತ್ನ ಉಳಿದೆಲ್ಲ ಕೆಲಸವನ್ನು ಬಿಟ್ಟು ಮಾಧವರಾಯನನ್ನು ಕಾಣಲು ಬಂದಳು.

"ಬಾಮ್ಮಾ, ಕೂತುಕೋ ಬಾ, ಊಟ ಮಾಡಿ ವಿಶ್ರಾಂತಿ ಪಡೀತಾ ಇದ್ದೀಂತ ಕಾಣುತ್ತೆ. ಉರಿಬಿಸಿಲಿನಲ್ಲೇ ಬರಲು ಹೇಳಿಕಳಿಸಿದ್ದರಿಂದ ನಿನಗೆ ತೊಂದರೆಯಾಯಿತೇನೋ.? "

—ಎಂದು ಪ್ರಶ್ನೆ ಮಾಡಿದ ಮಾಧವರಾಯ.

"ಹಾಗುಂಟೆ, ನಾವು ಬಂದಿರೋದೇ ಧಣಿಗಳ ಸೇವೆಗೆ. ಹಾಗಿರೋವಾಗ ಅದರಲ್ಲಿ ಹೊತ್ತು ಅಂತ ನೋಡಿದರೆ, ಉಂಡ ಉಪ್ಪಿಗೆ ಎರಡು ಬಗೆದ ಹಾಗಾಗೊಲ್ಲವೇ ? ನನ್ನಿಂದ ಏನಾಗಬೇಕೋ ಅಪ್ಪಣೆ ಕೊಡಿಸಬೇಕು. ಸೇವೆಗೆ ಸದಾ ಸಿದ್ಧಳಾಗಿದ್ದೀನಿ"

—ಮತ್ತೊಮ್ಮೆ ಮಾಧವರಾಯನಿಗೆ ಕೈ ಮುಗಿದು ಹೇಳಿದಳು ನಾಗರತ್ನ.

"ನೀನು ಆ ರೀತಿ ಭಾವಿಸಿ, ನಾವು ಹೇಳಿದ ಕೆಲಸ ಮಾಡುವುದಾದರೆ ತುಂಬಾ ಸಂತೋಷ. ನಾನೂ ನಿನ್ನ ಉಪಕಾರ ಮರೆಯೋಲ್ಲ...."

"ತಾವು ಅದೆಲ್ಲಾ ಹೇಳಲೇಬೇಕಾಗಿಲ್ಲ. ನನ್ನಿಂದ ಏನಾಗಬೇಕೋ ಅಪ್ಪಣೆ ಕೊಡಿಸಿ."

"ಈ ದಿನ ಅನಿರೀಕ್ಷಿತವಾಗಿ ಒಂದು ಕೆಲಸ ಆಯಿತು....."

—ಎಂದು ಪ್ರಾರಂಭಿಸಿ, ಆ ದಿನ ಅಯ್ಯಂಗಾರ್ಯರು ತನಗೆ ಹೇಳಿದುದು, ಅದಕ್ಕೆ ಪ್ರತಿಯಾಗಿ ತಾನು ಮಾಡಿದ ನರ್ತನದ ವ್ಯವಸ್ಥೆಯ ಆಲೋಚನೆ—ಎಲ್ಲವನ್ನೂ ವಿವರಿಸಿ—

''ಇದು ನನಗಿರೋ ಅಭಿಲಾಷೆ. ಇದನ್ನು ನೀನು ನಡೆಸಿಕೊಟ್ಟರೆ. ನನಗೇ ಅಲ್ಲ, ಸಾವಿರಾರು ಜನಕ್ಕೆ ಸಂತೋಷ ಕೊಟ್ಟ ಹಾಗಾಗುತ್ತೆ."

—ಎಂದು ಹೇಳಿದ.

ಮಾಧವರಾಯನು ತನ್ನನ್ನು ಇದ್ದಕ್ಕಿದ್ದ ಹಾಗೆ ಕರೆಕಳಿಸಿದಾಗ ಆ

ನಿಂದ ಬೇರೇನೋ ಮಾತನ್ನು ನಿರೀಕ್ಷಿಸಿಕೊಂಡು ಬಂದ ನಾಗರತ್ನಳಿಗೆ, ಮಾಧವರಾಯನ ಪ್ರಾರ್ಥನೆಯಿಂದ ನಿರಾಶೆಯಾದರೂ ಅದನ್ನು ತೋರಿಸಿ ಕೊಳ್ಳದೆ—

"ತಮ್ಮ ಮಾತಿಗೆ ಅಡ್ಡಿಯೇ ಇಲ್ಲ. ಈಗಲೇ ಹೋಗಿ ಅದಕ್ಕೇನು ಬೇಕೋ ಆ ಏರ್ಪಾಟು ಮಾಡುತ್ತೇನೆ—"ಎಂದಳು.

"ಉಳಿದವರನ್ನು ಇದಕ್ಕೆ ಒಪ್ಪಿಸುವುದು ನಿನಗೆ ತೊಂದರೆಯಾಗ ಬಹುದು ?"

"ತೊಂದರೆ ಎಂಥಾದ್ದು ? ಹಿರಿಯರಿಗೆ ಆಟ ಆಗಿದ್ರೆ ನಿಂತುಕೊಳ್ತಾ ಇರಲಿಲ್ಲವೆ ? ಅದಿಲ್ಲ—ಇದಾಯ್ತು."

"ಅಂತೂ ನಿನ್ನದು ಬಹಳ ದೊಡ್ಡ ಮನಸ್ಸು ನಾಗರತ್ನಮ್ಮ. ನಿನ್ನ ಉಪಕಾರ ನಾನು ಮರೆಯೊಲ್ಲ"

"ಧಣಿಗಳಲ್ಲಿ ನಾನು ಕೇಳಿಕೊಳ್ಳೋದು ಅಷ್ಟೆ—ಏನೋ ಇದಾಯ್ತು ಹೋಯ್ತು ಅಂತ ಆಮೇಲೆ ಈ ಬಡವೀನ ಧಣಿಗಳು ಮರೆತುಬಿಡಬಾರದು. ಯಾವತ್ತೂ ನಾನು ತಮ್ಮ ಸೇವೆಗೆ ಸಿದ್ಧಳಾಗಿಯೇ ಇರ್ತೀನಿ"

"ಆಯಿತು, ಆ ಮಾತನ್ನು ನಾನೂ ಮರೆಯೋಲ್ಲ...."

—ಎಂದು ಹೇಳಿ, ಒಂದು ಗಳಿಗೆ ಮಾತನ್ನು ತಡೆದು, ಮೀಸೆಯ ತುದಿಯನ್ನು ಕಚ್ಚುತ್ತಾ—

"ಅಂದಹಾಗೆ ಇನ್ನೊಂದು ವಿಷಯ ಕೇಳಬೇಕೂಂತ ಇದ್ದೆ...."

—ಎಂದ.

"ಏನು ?"

"ಚಂದ್ರಯ್ಯನ ಕಡೆ ರಾಜನ ವೇಷ ಹಾಕಿದ್ದ ಹುಡುಗಿ ನಿನ್ನ ಮಗ ಳಂತೆ."

"ಹೌದು. ನನ್ನ ಹುಡುಗಿ ಧಣಿಗಳ ಕಣ್ಣಿಗೆ ಬಿದ್ದುದು ನನ್ನ ಭಾಗ್ಯ...."

"ಮೊದಲು ನನಗೆ ಗೊತ್ತಿರಲಿಲ್ಲ. ಆಮೇಲೆ ಚಂದ್ರಯ್ಯ ಹೇಳಿದ. ಆಕೆಯ ನರ್ತನವನ್ನೇನೇ ನೀನು, ನಾನು ಮಾಡಿಸಲೇಬೇಕೂಂತ ಚಂದ್ರಯ್ಯನ ಕೈಲಿ ಹೇಳಿಕಳಿಸಿದ್ದು ?"

"ಹೌದು ಬುದ್ಧಿ !"

"ಅದು ಅಗತ್ಯವಾಗಿ ಆಗಬಹುದು."

"ಇವತ್ತೇನೇ...."

"ಊಹೂ. ಇವತ್ತಿನ ಗದ್ದಲದಲ್ಲಿ ಬೇಡ. ... ಸುಗಿದ ಮೇಲೆ ಆಗಲಿ. ಒಂದು ದಿನ ನಮ್ಮ ... ಪ್ರತ್ಯೇಕ ನಾಗಿ ನರ್ತನವಾಗಲಿ. ಅದಕ್ಕೆ ನಿಮ್ಮದೇನೂ ಅಭ್ಯಂತ...."

ಉಂಟೆ? ತಮ್ಮ ಚಿತ್ತ ಹೇಗಿದ್ದರೆ ಹಾಗಾಗಲಿ."

"ಹಾಗಿದ್ದರೆ ಸರಿ....ಅಂದ ಹಾಗೆ....ಇವತ್ತು ... ಗಳು ಏಕೆ ವೇಷ ಹಾಕಿರಲಿಲ್ಲ?"

"ನಿನ್ನೆ ದಿನ ನಿಂತು ನಿಂತು ಕಾಲು ಹಿಂಡಿದುಕೊಂಡ ಹಾಗಾಗಿ, ಬೆಳಿಗ್ಗೆ ಆಯಾಸ ಆಗ್ತದೆ ಅಂತ ಮಲಗಿಕೊಂಡುಬಿಟ್ಟಳು. ...ದೇವಿ, ನಾನೂ ಭಾಳ ಹೇಳಿದೆ: 'ಮೈ ಕೈ ನೋವು ಅಂತ ... ಬಾರದು" ಅಂತ. ಅದಕ್ಕೂ ಬರಬೇಕೂಂತಲೇ ಆಸೆ ಇತ್ತು. ...ನು ಮಾಡ್ತದೆ—ನಿಂತರೆ ತಲೆ ಸುತ್ತಿಕೊಂಡು ಬೀಳೋ ಹಾಗಾದ್ರೆ? ...ನ್ನೂ ಕಷ್ಟ ಸುಖ ಕಾಣದ ಹಸುಳೆ!"

"ಹಾಗೇ? ನನಗಿದು ತಿಳಿಯಲೇ ಇಲ್ಲವಲ್ಲ."

"ಏನು ದೊಡ್ಡ ವಿಷಯಾಂತ ತಮ್ಮವರೆಗೂ ಇದನ್ನು ... ಹೇಳಿ...."

"ಹೋಗಲಿ, ಯಾರಿಗಾದರೂ ವೈದ್ಯರಿಗೆ ತೋರಿಸಿದೆ ... ಇಲ್ಲವೋ?"

"ನನಗಷ್ಟು ನಿಗಾ ಇಲ್ಲವೇ? ಔಷಧ ಉಪಚಾರ ಎಲ್ಲಾ ..."

"ಈಗ ಹೇಗಿದಾಳೆ?"

"ಈಗ ಚಂದಾಗೇ ಇದಾಳೆ."

"ಹಾಗಾದ್ರೆ ಇವತ್ತು ಸಾಯಂಕಾಲ...."

"ಧಣಿಗಳು ಮನಸ್ಸಿಗೆ ಆಯಾಸ ಮಾಡಿಕೊಳ್ಳದಿದ್ದರೆ ಒಂದು ಪ್ರಾರ್ಥನೆ ಲಾಲಿಸಬೇಕು."

"ಏನು?"

"ಇವತ್ತು ಸಂಜೆಗೆ ನೀಲಾ ಕುಣಿಯೋದು ಬೇಡಾಂತ...."

"ಮೈಯಲ್ಲಿ ಹುಷಾರಾಗಿಲ್ಲದಿದ್ದರೆ ಬೇಡ."

"ಅದೇನೋ ಏನೋ... ಇನ್ನ....ಅಲ್ದೆ...."

"ಏನೇನು ?"

"ಇನ್ನು ನನ್ನ ಮಗಳಿಗಿಂದು 'ಗೆಜ್ಜೆ ಪೂಜೆ' ನಾಪ್ಸ ಆಗಿಲ್ಲ. ಸುಮ್ಮನೆ ನಗಬೇಕಿನ್ನು ಊರಿನ ಕಣ್ಣು ಅವಳ ಮೇಲೆ ಬೀಳೋದು ಅಷ್ಟು ಲಕ್ಷಣ ಅಲ್ಲ ಅಂತ. ಇವತ್ತು ಸಂಸಾರ ಇದ್ರೆ ನಾಳೆ ಕೇಳೋರು ಯಾರು ?"

"ಹಾಗೇ! ಆ ವಿಷಯ ನನಗೆ ತಿಳಿದಿರಲಿಲ್ಲ. ನಿನಗೆ ಹೇಗೆ ತೋಚುತ್ತೋ ಹಾಗೆ ಮಾಡು. ಎಲ್ಲಕ್ಕಿಂತ ಹೆಚ್ಚಾಗಿ, ಮೊದಲು ಆಕೆಯ ಆರೋಗ್ಯದ ಕಡೆ ಗಮನ ಕೊಡು."

— ಎಂದ ಮಾಧವರಾಯ.

"ಇನ್ನು ಬರೀ ಕೈಕಾಲು ನೋವೇನು, ಚಳಿಜ್ವರ ಇದ್ರೂ ಬಿಟ್ಟು ಹೋಗ್ತದೆ"

ಏಕೆ ?"

"ಧಣಿಗಳು ನಿನ್ನ ವಿಷಯ ಇಷ್ಟು ಕೇಳಿದ್ರೂ ಅಂತ ಹೇಳಿದ್ರೆ ಮಲಗಿದೋಳು ಎದ್ದು ಕುಣಿದಾಡೋಕಿಲ್ವಾ ? ಅದಕ್ಕಿಂತ ಇನ್ನು ಸಂಜೀವಿನಿ ಬೇಕಾ ? ನನಗೆ ಹೇಳಿದ್ದನ್ನೇ ನೀವು ಒಂದ್ಸಲ ಎದುರಿಗೇ ಹೇಳಿಬಿಟ್ರೆ, ನಾಳೆ ನಿಮ್ಮ ಮನೇಲಿ ಕುಣಿಯೋಕೆ ನಾಲ್ಕುಕಾಲಾಗುತ್ತೆ ನೀಲಾಗೆ....."

"ನಾನು ಮಾತಾಡಿಸೋದ್ರಿಂದ ನಿನ್ನ ಮಗಳಿಗೆ ಅಷ್ಟು ಸಂತೋಷ ಆಗೋದಿದ್ರೆ, ಅಗತ್ಯವಾಗಿ ನಾನೇ ಬಂದು ಹೇಳ್ತೀನಿ. ಅದರಲ್ಲಿ ನಾನು ಸವೆಯೋದು ಏನಿದೆ ?"

"ಹಂಗಂದ್ರೆ....ನಮ್ಮ ಬಿಡಾರದವರೆಗೂ ಬುದ್ಧಿಯೋರು ಪಾದ ಬೆಳೆಸ್ತಾರೆ ಅಂತ ನೀಲಾಗೆ ಹೇಳಲಾ ?"

"ಅಗತ್ಯವಾಗಿ ಹೇಳು"

'ಯಾವಾಗ ಬರ್ತೀರ........ಉಹೂ..........ನಾನೇ ಹೊತ್ತು ನೋಡಿಕೊಂಡು ನಿಮಗೆ ತಿಳಿಸ್ತೀನಿ........ಖಂಡಿತ ಬರಬೇಕು........ಬಡವರ ವಿಷಯ ತಾತ್ಸಾರ ಮಾಡಬಾರದು.

ಎಂದು ಕೈಮುಗಿದು ಹೇಳಿ, ಮಾಧವರಾಯನ ಅಪ್ಪಣೆ ಪಡೆದು ಹೋದಳು ನಾಗರತ್ನ.

ಅವಳು ಹೇಳಿದುದನ್ನು ಕೇಳಿ ಮಾಧವರಾಯನ ಮನಸ್ಸು ಅರಳಿ,

ಆ ಗಳಿಗೆಯಿಂದಲೇ ಮಾಧವರಾಯ ನಾಗರತ್ನಳ ಕರೆ ಯಾವಾಗ ಬರುತ್ತದೆಯೋ ಎಂದು ಕಾಯತೊಡಗಿದ.

೧೫

ಆ ದಿನ ಸಂಜೆ ಮಾಧವರಾಯನ ಅಪೇಕ್ಷೆಯಂತೆ ಚದುರಂಗದ ಚಪ್ಪರದಲ್ಲೇ, ಪಟ್ಟಣದಿಂದ ಬಂದ ನರ್ತಕಿಯರ ನೃತ್ಯಪ್ರದರ್ಶನ ಏರ್ಪಟ್ಟಿತು.

ಈ ವಾರ್ತೆಯನ್ನು ಕೇಳಿದ ಊರಿಗೆ ಊರೇ ಚಪ್ಪರದತ್ತ ನುಗ್ಗಿತು.

ಯಾವ ಗಳಿಗೆಯಲ್ಲಾದರೂ, ನಾಗರತ್ನಳ ಕರೆ ಬರಬಹುದೆಂದು ನಿರೀಕ್ಷಿಸುತ್ತಿದ್ದ ಮಾಧವರಾಯ, ಬೆಳಗಿನ "ಇಂಗುಮುರಿಸಿ" ನಸೆಪವನ್ನೇ ಮಾಡಿಕೊಂಡು, ಎಲ್ಲರೂ ಆತ ಅಗ್ರಪಂಕ್ತಿಯಲ್ಲಿ ಕುಳಿತುಕೊಳ್ಳಬೇಕೆಂದು ಇಚ್ಛಿಸಿದರೂ ಕೇಳದೆ—

"ಇದು ನನ್ನ ಒಬ್ಬನ ಸಂತೋಷಕ್ಕೆ ಏರ್ಪಡಿಸಿದ ಸಮಾರಂಭವಲ್ಲ; ಊರಿನವರ ಸಂತೋಷಕೂಟ. ಆದ್ದರಿಂದ ಮಧ್ಯದಲ್ಲಿ ನಾನು. ಎದ್ದು ಹೋಗಬೇಕಾಗಿ ಬಂದರೆ, ನನ್ನಿಂದಾಗಿ ಉಳಿದವರಿಗೆ ರಸಭಂಗವಾಗ ಬಾರದು."

—ಎಂದು ಹೇಳಿ ಹೆಚ್ಚು ಜನರ ಕಣ್ಣಿಗೆ ಬೀಳದಂತೆ ತಾನು ಎದ್ದು ಹೋಗಲು ಅನುಕೂಲವಾದ ಕಡೆಯಲ್ಲಿ ಸ್ಥಳ ಮಾಡಿಕೊಂಡು ಕುಳಿತಿದ್ದ.

ಗೊತ್ತಾದ ಹೊತ್ತಿಗೆ ಸರಿಯಾಗಿ ನೃತ್ಯಪ್ರದರ್ಶನ ಆರಂಭವಾಯಿತು.

ಆರಂಭದಿಂದಲೂ ಪ್ರೇಕ್ಷಕರ ಮೆಚ್ಚುಗೆಯನ್ನು ಗಳಿಸಿದ ನೃತ್ಯ ಪ್ರದರ್ಶನ ಮಾಧವರಾಯನ ಪಾಲಿಗೆ ಮಾತ್ರ ತವಡನ್ನು ಜಗಿದಂತಿದ್ದು, ಮನಸ್ಸಿಗೆ ಬೇಡವಾದ ಅದನ್ನು ನೋಡುತ್ತ ಕುಳಿತಿರಲಾರದೆ, ಚಪ್ಪರದಿಂದ ಹೊರಬಂದು, ಬಯಲ ಗಾಳಿಗೆ ಮೈಯೊಡ್ಡಿ ನಿಂತ.

ಚಪ್ಪರದೊಳಗಿನಿಂದ ಮೇಲಿಂದ ಮೇಲೆ ಹರ್ಷೋದ್ಗಾರ. ಕರತಾಡನದ ಸದ್ದು ಕೇಳುತ್ತಲೇ ಇತ್ತು. ಆ ಸದ್ದು, ಗೆಜ್ಜೆಗಳ ಸದ್ದು, ವಾದ್ಯಗಳ

ಸದ್ದು ಎಲ್ಲವೂ ಮಾಧವರಾಯನಿಗೆ ಕರ್ಣಕಠೋರವಾಗಿ, ಅಸಹನೆ ಮೂಡಿ ಕುದಿಯ ತೊಡಗಿದ.

ಆ ಅಸಹನೆಯ ಕುದಿಯೂ ಅಸಹ್ಯವಾಗಿ—

" ಮುದಿಮುಂಡೆ! ಹಾಳಾದವಳು ಮರೆತೇ ಬಿಟ್ಟಿಳೇನೋ. ಇಲ್ಲಿ ನಿಂತಿರುವುದೇನು ನಗೆಪಾಟಲು "

—ಎಂದು ಕೊಂಡು ನಾಗರತ್ನಳ ಹೆಸರಿಗೆ ಹಿಡಿ ಹಿಡಿ ಶಾಪ ಹಾಕುವ ಮಟ್ಟ ಮುಟ್ಟಿದಾಗ, ನಾಗರತ್ನಳ ಪರಿವಾರದೊಂದಿಗೆ ಬಂದವನೊಬ್ಬ, ಮಾಧವರಾಯನ ಬಳಿಗೆ ಬಂದು—

" ನಾಗಕ್ಕ ಹೇಳಿದ್ಲು..... ಬರಬೇಕಂತೆ.. "

—ಎಂದು ಹೇಳಿ ಸುದ್ದಿಯನ್ನು ತಲುಪಿಸಿದ

ಆಮಾತನ್ನು ಕೇಳಲೆಂದೇ ಚಾತಕವ್ರತ ಮಾಡುತ್ತಿದ್ದ ಮಾಧವ ರಾಯ, ಬಿಲ್ಲಿನಿಂದ ಬಿಟ್ಟ ಅಂಬಿನಂತೆ ನಾಗರತ್ನಳ ಬಿಡಾರದ ಕಡೆ ಹೊರಟ.

ನಾಗರತ್ನಳ ಪರಿವಾರದವರ ಬಿಡಾರಕ್ಕಾಗಿ ಬಿಡಿಸಿಕೊಟ್ಟ ದೊಡ್ಡ ಮನೆಯಲ್ಲಿ ಕತ್ತಲು ತುಂಬಿ, ಮೌನ ಆವರಿಸಿತ್ತು. ಎರಡನೆಯ ಉಪ್ಪರಿಗೆಯ ಕಿಟಕಿಯೊಂದರಲ್ಲಿ ಮಿಣುಕುತ್ತಿದ್ದ ಬೆಳಕನ್ನು ನಂಬಿ ಮಾಧವರಾಯ ಬಾಗಿಲು ತಟ್ಟಿದ.

ಅವನು ಬಾಗಿಲನ್ನು ತಟ್ಟಿದ ಸದ್ದನ್ನು ಕೇಳುತ್ತಿದ್ದ ಹಾಗೇ ನಾಗರತ್ನ ಬಾಗಿಲನ್ನು ತೆರೆದು—

" ಒಳಗೆ ಬನ್ನಿ "

—ಎಂದು ಕರೆದಳು.

ಬಳಿಕ ಹಜಾರದಲ್ಲಿ, ಗೋಡೆಯಲ್ಲಿದ್ದ ಸಣ್ಣ ಗೂಡೊಂದರಲ್ಲಿ ಪ್ರಣತಿಯೊಂದು ಉರಿಯುತ್ತಿದ್ದರೂ, ವಿಶಾಲವಾದ ಹಜಾರದ ಕತ್ತಲನ್ನು ಕರಗಿಸಲು ಶಕ್ತಿಯಿಲ್ಲದ, ಆ ಪ್ರಣತಿಯ ಬೆಳಕಿನ ಕುಡಿಯ ಮಬ್ಬು ಬೆಳಕಿನಲ್ಲೇ, ನಾಗರತ್ನಳನ್ನು ಹಿಂಬಾಲಿಸಿ, ಹಜಾರದ ಒಂದು ಪಾರ್ಶ್ವದಲ್ಲಿದ್ದ ಮೆಟ್ಟಿಲುಗಳನ್ನು ಏರಿ ಮಾಧವರಾಯ ಉಪ್ಪರಿಗೆಯನ್ನು ತಲುಪಿದ.

ಉಪ್ಪರಿಗೆಯ ಮೇಲಿನ ಹಜಾರದಲ್ಲಿ, ಮೇಲಿನ ಚಾವಣಿಯಿಂದ ತೂಗುಬಿಟ್ಟ ದೀಪಗುಚ್ಛದಲ್ಲಿ ನಾಲ್ಕಾರು ದೀಪಗಳು ಉರಿಯುತ್ತಿದ್ದವು. ಹಜಾರದ ಕತ್ತಲೆಯನ್ನು ಅನುಭವಿಸಿದ್ದ ಕಣ್ಣುಗಳಿಗೆ.ಆ ದೀಪಗಳ ಬೆಳಕು

ಪ್ರಕಾಶಮಾನವಾಗಿ ಕಂಡು, ಮಾಧವರಾಯನು ಆ ಬೆಳಕಿನಲ್ಲಿ ಹಜಾರದ ಸುತ್ತಲೂ ಕಣ್ಣು ಆಡಿಸಿ ನೋಡಿ, ಒಂದು ಕಡೆ, ಗೋಡೆಗೆ ಹೊಂದಿದಂತೆ ಹಾಸಿದ ಮೆತ್ತೆಯ ಮೇಲೆ, ಒಂದು ದಿಂಬಿಗೆ ಮೈ ಒರಗಿಸಿ ಕುಳಿತುಕೊಂಡ.

ಮಾಧವರಾಯನು ಕುಳಿತ ಕೂಡಲೇ ನಾಗರತ್ನ ಹಜಾರದ ಒಂದು ಪಾರ್ಶ್ವದಲ್ಲಿದ್ದ ಕೋಣೆಯ ಮುಚ್ಚಿದ ಬಾಗಿಲನ್ನು ಮೃದುವಾಗಿ ತಟ್ಟಿ—

"ನೀಲಾ.... ನಿನ್ನ ನೋಡಬೇಕೆಂತ ಧಣಿಗಳು ಬಂದಿದಾರೆ, ಇತ್ಲಾಗೆ ಬಾಮ್ಮಾ..."

—ಎಂದು ತಗ್ಗಿದ ಸ್ವರದಲ್ಲಿ ನುಡಿದಳು.

ಆಕೆಯ ಕರೆಯನ್ನು ಹಿಂಬಾಲಿಸಿದ ಮಾಧವರಾಯನ ಕಣ್ಣುಗಳೂ ಆ ಕೋಣೆಯ ಮುಚ್ಚಿದ ಬಾಗಿಲಿನಲ್ಲೇ ಕೇಂದ್ರೀಕೃತವಾದವು.

ನಾಗರತ್ನ ಕೂಗಿದ ಒಂದೆರಡು ಕ್ಷಣದಲ್ಲೇ, ಮುಚ್ಚಿದ ಬಾಗಿಲಿನ ಹಿಂದೆ, ನಡೆಯುವ ಕಾಲುಗಳು ಧರಿಸಿದ ಕಾಲಂದಿಗೆಯ ಗೆಜ್ಜೆಗಳ ಸಣ್ಣ ಧ್ವನಿ ಕೇಳಿಬಂದು, ನಿಧಾನವಾಗಿ ಕೋಣೆಯ ಬಾಗಿಲು ತೆರೆದು, ನೀಲಾ ನೇರವಾಗಿ ಹಜಾರಕ್ಕೆ ಬರದೆ, ಕೋಣೆಯ ಬಾಗಿಲ ಬಳಿ, ಚೌಕಟ್ಟಿಗೆ ಮೈ ಯೊರಗಿಸಿ, ತಲೆ ತಗ್ಗಿಸಿ ನಿಂತಳು.

"ಅದ್ಯಾಕೆ ಅಲ್ಲೇ ನಿಂತುಬಿಟ್ಟೆ, ಮುಂದಕ್ಕೆ ಬಾ, ಹೀಗೆ ಬಂದು ಇಲ್ಲಿ ಕೂತುಕೋ. ನಿನ್ನ ಕಂಡು ಮಾತಾಡಿಸಿಕೊಂಡು ಹೋಗಬೇಕೂಂತಲೇ ಧಣಿಗಳು ಇಷ್ಟು ದೂರ ಬಂದಿರುವಾಗ, ನೀನು ಹಾಗೆ ದೂರ ನಿಂತು ಕೊಳ್ಳೋದು ಲಕ್ಷಣ ಅಲ್ಲ."

—ಎಂದು ನಾಗರತ್ನ ನೀಲಳನ್ನು ಮುಂದೆ ಬರಲು ಆಹ್ವಾನಿಸಿದಳು.

ತಾಯಿಯ ಮಾತಿನ ಒತ್ತಾಯಕ್ಕೆ ಕಟ್ಟುಬಿದ್ದಂತೆ, ನೀಲಾ ನಿಂತ ಲ್ಲಿಂದಲೇ ಒಮ್ಮೆ ತಲೆಯೆತ್ತಿ ಮಾಧವರಾಯನನ್ನು ನೋಡಿ, ನಿಧಾನವಾಗಿ ತನ್ನ ತಾಯಿಯತ್ತ ನಡೆದು ಬಂದು, ಆಕೆಯ ಪಕ್ಕದಲ್ಲಿ, ಮೊಳಕಾಲು ಗಳನ್ನು ಅಡ್ಡ ಚಾಚಿ, ಒಂದು ತೋಳನ್ನು ನೆಲಕ್ಕೆ ಊರಿ, ಆ ತೋಳಿನ ಮೇಲೆ ಮೈಯ ಭಾರವನ್ನು ಬಿಟ್ಟು ಕುಳಿತುಕೊಂಡಳು. ಆಗಲೂ ತಲೆ ತಗ್ಗಿಸಿದ್ದ ನೀಲಳನ್ನು ಕಂಡು ನಾಗರತ್ನ—

"ಇದ್ಯಾವ ಸೀಮೆ ಲಕ್ಷಣ ನೀಲಾ, ಧಣಿಗಳು ನಿನ್ನ ಜಬೀಕೈಲಿ ಮಾತಾಡಬೇಕೂಂತ ಬಂದಿದಾರಾ? ನಿನ್ನ ಮುಖ ಏನೂ ಮುತ್ತಿಲ್ಲ,

ಯಾರಾದರೂ ನೋಡಿದರೆ ಸುರಿ ಆಗಿ ಹೋಗ್ತ್ರದೆ ಅನ್ನೋಕೆ. ನಿನ್ನ ಈ ವಿಚಿತ್ರ ಎಲ್ಲಾ ಬಿಟ್ಟು ಸರಿಯಾಗಿ ಕೂತುಕೋ."

—ಎಂದು ತಾನೇ ನೀಲಳ ಮೋರೆಯನ್ನು ಮೇಲಕ್ಕೆ ಎತ್ತಿದಳು. ಹಾಗೆ ಎತ್ತಿದಾಗ ನೀಲಾಳ ಕಣ್ಣುಗಳು ಮಾಧವರಾಯನ ಮುಖದ ಮೇಲೆ ಸುಳಿದಾಡಿ, ಅವನ ವಕ್ಷಸ್ಥಲದಲ್ಲಿ ನೆಲಸಿದವು.

ಮಾಧವರಾಯನ ಕಣ್ಣುಗಳೂ ಅವಳನ್ನೇ ನೋಡುತ್ತಿದ್ದವು— ಹಸಿದು.

ನೀಲಾ ಕೋಣೆಯ ಬಾಗಿಲ ಬಳಿಯಿಂದ, ಹಜಾರದ ಮಧ್ಯಭಾಗದ ವರೆಗೆ ಬರುವವರೆಗೂ, ಅವಳ ಮೈಯ ನಿಲುವು, ನಡೆಗೆಯ ಚಲುವುಗಳನ್ನು ಹಸಿದು ನೋಡುತ್ತಿದ್ದ ಮಾಧವರಾಯನಿಗೆ, ಅಚ್ಚ ಬಿಳಿಯ, ಮೈಗೆ ಹತ್ತಿ ಕೊಂಡಂತೆ ಕಾಣುವ, ಬಹು ತೆಳುವಾದ ರೇಷಿಮೆಯ ಸೀರೆಯನ್ನುಟ್ಟು, ಅದೇ ಬಣ್ಣದ, ಮೈಯನ್ನು ಮುಚ್ಚುವುದಕ್ಕಿಂತ ಹೆಚ್ಚಾಗಿ ಎತ್ತಿ ತೋರಿಸು ವಂತೆ ಹೊಲಿದ ರವಿಕೆಯನ್ನು ತೊಟ್ಟು, ತುಂಬು ಜಘನ, ತೆಳು ನಡು, ಮಾಟವಾಗಿ ಉಬ್ಬಿ ಬೆಳೆದ ಎದೆಸು ಲಾವಣ್ಯವನ್ನು ಮೆರೆದು ತೋರಿಸು ವಂತೆ, ಮಂದವಾಗಿ ಬಳುಕುತ್ತಾ ನಡೆದು ಬಂದ ನೀಲಳನ್ನು ನೋಡಿ, ತಟ ಕ್ಕನೆ, ಶ್ರೀಕಂಠಜೋಯಿಸರು, ಒಂದು ಸಂಜೆ ದೇವಾಲಯದಲ್ಲಿ ಓದು ತ್ತಿದ್ದ ಕುಮಾರವ್ಯಾಸನ ಭಾರತದಲ್ಲಿ ಬರುವ ದ್ರೌಪದಿಯ ವರ್ಣನೆ ನೆನ ಪಾಯಿತು.

ಕುಮಾರವ್ಯಾಸ ಸ್ವಯಂವರದ ಮಂಟಪಕ್ಕೆ ಆಗಮಿಸಿದ್ದ ದ್ರೌಪದಿಯ ಸೌಂದರ್ಯವನ್ನು ವರ್ಣಿಸುತ್ತಾ—

ಸುದತಿಗಳಿರಿ ನಿಲುವಿನಲಿ ಕೋಟೆಕೆ
ಬಳಿಕ ಪ್ರತಿರಾಜನಿಕರ ಮೇಲೆ ಹಂ
ಗಳಿಗೆ ಕಾಮಿನಿಯರ ಕಡೆಗೆ ಸಮುಯವೆಲ್ಲಿಹುದು
ಲಲಿತ ವೈ ಕಾಂತಿಗ ಹಿಡಿದ್ದರೆ
ಮುಚುಗೆ ತಗೆದರು ಬಟ್ಟಲ
ಸ್ವಳಿಕೆ ಮುರಿದಗೆ ಮರಳಿದಲೆ ಕಂಗಳಿಗೆ ಹೊಸಬಂದ ।
ಮೊಲಬುಗೆದಲೇ ತೊಡೆವ ವಕ್ಷ
ಸ್ಥಳದೊಳಗೆ ಜನಸೃಷ್ಟಿ ನಡೆತೋ

ಳ್ಗಳಲಿ ಸೆಳ್ಳುಗುರೋಳಿಯಲಿ ಕೆಂದಳದ ಶೋಭೆಯಲಿ
ಸುಳಿದಡಲ್ಲಿಯೆ ನಿಲುವು ದಶನಾ
ವಳಿಯ ಬಿಂಬಾಧರದ ಕದಪಿನ
ಚಲುವಿಕೆಗೆ ನರರಾಲಿ ನೆರೆಯವು ನೃಪತಿ ಕೇಳೆಂದ ||
ಅಸಿಯ ನಡುವಿನ ನಿಮ್ನ ನಾಭಿಯ
ಮುಸುಳ ಖಾಸೆಯ ತೋರ ಮೊಲೆಗಳ
ಮಿಸುಪ ತೊಡೆಗಳ ಚಾರು ಜಂಘೆಯ ಚರಣ ಪಲ್ಲವದ
ಎಸಳುಗಂಗಳ ತೊಳಗಿ ಬೆಳಗುವ
ಮುಸುಡ ಕಾಂತಿಯ ಮುಬಿವ ಕುರುಳನ
ಬಿಸಜಗಂಧಿಯ ರೂಪನಭಿವರ್ಣಿಸುವಡರಿದೆಂದ ||

—ಎಂದು ಹೇಳಿದಾನೆ.

ತನ್ನತ್ತ ನಡೆದು ಬಂದು ಲಲಿತವಿಲಾಸಗಳಿಯಿಂದ ಕುಳಿತ ನೀಲ ಳನ್ನು ನೋಡಿ, ಅಂಥ ಯಾರೋ ಒಬ್ಬ ವಿಲಾಸವತಿಯನ್ನು ನೋಡಿಯೇ ಕುಮಾರವ್ಯಾಸ ತನ್ನ ದ್ರೌಪದಿಯ ವರ್ಣನೆಯನ್ನು ಮಾಡಿರಬೇಕು ಎನಿ ಸಿತು ಮಾಧವರಾಯನಿಗೆ.

ಹಾಗನಿಸಿ--

ಕ್ರಮೇಣ ಅವನ ಕಣ್ಣನ್ನು ತುಂಬಿದ ನೀಲಳ ಲಾವಣ್ಯಮಧು, ಮಾಧವರಾಯನ ಪ್ರೈಯನ್ನು ಆವರಿಸಿ, ತನ್ನೆದುರಿಗೆ ಕುಳಿತ ನೀಲಳನ್ನು ಮಾತಾಡಿಸುವ ಪ್ರಯತ್ನ ಮಾಡದೆ, ಬಾಚಿ ಬಿಗಿದಪ್ಪಿಕೊಂಡು ಆ ದೇಹದ ಮೃದುಕಠಿಣತೆಯನ್ನು ಮನಸಾರೆ ಅನುಭವಿಸಬೇಕು ಎನಿಸಿತು.

ಆದರೆ ತನ್ನ ಮನಸ್ಸಿನ ಉತ್ಕಟೇಚ್ಛೆಯನ್ನು ಕೂಡಲೇ ಕಾರ್ಯಗತ ಗೊಳಿಸಲಾಗದೆ, ಬಯಕೆಯ ದಾಹದಿಂದ ಶುಷ್ಕವಾದ ಧ್ವನಿಯಲ್ಲಿ—

" ಈಗ....ಆರೋಗ್ಯವಾಗಿದೀಯಾ ನೀಲಾ ? "

—ಎಂದು ಪ್ರಶ್ನೆ ಮಾಡಿದ.

ಆ ಪ್ರಶ್ನೆಗೆ ನೀಲಾ ಏನೂ ಉತ್ತರ ಕೊಡಲಿಲ್ಲ. ಅದನ್ನು ಕಂಡು ನಾಗ ರತ್ನಳೇ— " ಧಣಿಗಳು ಮಾತಾಡಿಸಿದರೆ ಮೂಕಿ ಹಾಗಿರೋದು ತರವಲ್ಲ. ಉತ್ತರಕೊಡು."

—ಎಂದು ಕೇಳಿದ ಬಳಿಕ ನೀಲಾ ನಿಂತು ಸ್ವರವನ್ನ ತಗ್ಗಿ ಧ್ವನಿಯಲ್ಲಿ—

“ನಿಮ್ಮ ಅಭಿಮಾನ....ಹೆಣ್ಣಾಗಿ ನೋಡಿ ...”ಎಂದಷ್ಟೇ ಹೇಳಿದಳು.

“ಅಬ್ಬಾ! ಮುತ್ತು ಸುರಿದ್ಹಂಗಾಯ್ತು ನೋಡು, ನೀನಿಷ್ಟು ಮಾತಾಡಿದ್ದು! ಇಷ್ಟು ಹೇಳೋಕೆ ಇಷ್ಟು ಹೊತ್ತಾಗಬೇಕೇ? ಥಣಿಗಳಾಗೋ ಹೊತ್ತಿಗೆ ಸುಸ್ತಾಗಿವಾರೆ. ನಾನಾಗಿದ್ರೆ ಹೀಗೆ ಕೆನ್ನೆ ಹಿಂಡ್ತಾ ಇದ್ದೆ.”

—ಎಂದು ತಾನೇ ನೀಲಳ ಕೆನ್ನೆಯನ್ನು ಕೆಂಪೇರಿಸಿದಳು ನಾಗರತ್ನ.

ನಾಗರತ್ನ ನೀಲಳ ಕೆನ್ನೆಯನ್ನು ಹಿಂಡಿದಾಗ, ಅದರಿಂದ ತಪ್ಪಿಸಿಕೊಳ್ಳಲೆಂದು ನೀಲಾ ತನ್ನ ಕತ್ತನ್ನು ಹೊರಳಿಸಿದಾಗ, ಅವಳ ಭುಜದ ಮೇಲಿದ್ದ, ಬಹುನುಣುಪಾದ ರೇಶಿಮೆಯ ಸೀರೆಯ ಸೆರಗು ಜಾರಿ, ನೀಲಳ ತುಂಬು ವಕ್ಷಸ್ಥಲ, ಮಾಧವರಾಯನ ಕಣ್ಣನ್ನು ಇರಿಯುವಂತೆ ಕಂಡು ಬಂದು, ಮಾಧವರಾಯನ ಮೈಯಲ್ಲಿ ದಿಗ್ಗನೆ ಬೆಂಕಿಯನ್ನು ಹೊತ್ತಿಸಿದಂತಾಯಿತು.

ನಾಗರತ್ನಳ ಆ ಆಟದ ಅರ್ಥ, ನೀಲಳನ್ನು ತನಗೊಪ್ಪಿಸಬೇಕೆಂಬುದೇ ಎಂದು, ಆ ವೇಳೆಗೆ ಆ ಬಗೆಯ ವ್ಯವಹಾರದಲ್ಲಿ ಪಳಗಿ ಅರ್ಥ ಮಾಡಿಕೊಂಡ ಮಾಧವರಾಯ, ವೃಥಾ ಮಾತುಗಳಿಂದ ಕಾಲಹರಣವೇಕಾಗಬೇಕೆಂದು, ಎಲ್ಲ ಎಚ್ಚರವನ್ನೂ ಕಡಿಮೊಗೆದು—

“ನಾಗರತ್ನ, ನಿನ್ನ ಮಗಳಿಗೆ ಪಟ್ಟಣದಲ್ಲಿ ಯಾರನ್ನಾದರೂ ನಿಶ್ಚಯ ಮಾಡಿದೀಯಾ?”

—ಎಂದು ನೇರವಾಗಿ ವ್ಯವಹಾರದ ಮಾತನ್ನೇ ಆಡಿದ.

ಮಾತು ತಾನು ಬಯಸಿದ ಮಜಲುಮುಟ್ಟಿದುದನ್ನು ಕಂಡು ತೃಪ್ತಳಾಗಿ ನಾಗರತ್ನ—

“ಯಾರು ಯಾರೊ ನೂರು ಜನ ಬಂದು ಹೋಗ್ತಾ ಇದಾರೆ. ಆದರೆ ನಾನೇ ಇನ್ನೂ ಯಾರೂಂತ ನಿಶ್ಚಯ ಮಾಡಿಲ್ಲ....”—ಎಂದಳು.

“ಹಾಗಿದ್ದರೆ ಸರಿ. ನೀನು ಇನ್ನು ಯಾರ ವಿಷಯಾನೂ ಯೋಚನೆ ಮಾಡಬೇಕಾಗಿಲ್ಲ.”

“ಅಂದ್ರೆ....”

"ನೀಲಾ ಇವತ್ತಿನಿಂದ ನನ್ನವಳು. ಇವತ್ತು ಎನ್ನುವುದೇನು ಈ ಗಳಿಗೆಯಿಂದ. ಅದಾಯಿತಲ್ಲಾ—ಇನ್ನೇನಾದರೂ ಮಾತಿದ್ದರೆ ಹೇಳು."

—ಆಗಲೇ ಆ ಮಾತನ್ನು ಮುಗಿಸಿಬಿಡುವ ಆತುರದಿಂದ ಹೇಳಿದ ಮಾಧವರಾಯ.

"ಇಷ್ಟು ಅವಸರದಲ್ಲಿ ಎಲ್ಲಾ ಹೇಗೆ ನಿಶ್ಚಯಮಾಡೋದು? ಮನೇಲಿ ಹಿರೇರಿದಾರೆ, ಅವರು ಒಪ್ಪಬೇಕು. ಕೊಡೋಕೊಳ್ಳೋ ಮಾತಾಗ ಬೇಕು. ಅವೆಲ್ಲಾ ಆದ್ರೆ, ನೀವೂ ಒಪ್ಪಿದರೆ, ಇಂಥ ದಿನಾಂತ 'ಗೆಜ್ಜೆ ಪೂಜೆ' ಶಾಸ್ತ್ರ ಇಟ್ಕೊಳ್ಳೋಬಹುದು."

"ಏನು ಹೇಳಿ ?"

"'ನಿನ್ನ ಶಾಸ್ತ್ರ, ಪೂಜೆ, ಅದ್ಯಾವುದೂ ನನಗೆ ಬೇಕಿಲ್ಲ" ಹಿರೇರು ಇದ್ದರೆ ಅವರನ್ನು ಒಪ್ಪಿಸೋದು ಬಿಡೋದು ನಿನ್ನ ಭಾರ; ಅದಕ್ಕೂ ನನಗೂ ಸಂಬಂಧವಿಲ್ಲ. ತಾಯಿ ಅನ್ನಿಸಿಕೊಂಡೋಳು ನೀನು ಎದು ರಿಗೇ ಇದೀಯ—ನಿನಗೆ ಇದು ಒಪ್ಪಿಗೆಯೋ ಇಲ್ಲವೋ ಅಷ್ಟು ಹೇಳಿಬಿಡು."

—ಎಂದು ನಿಷ್ಠುರವಾಗಿ ಕೇಳಿದ ಮಾಧವರಾಯ.

"ನಾನು ಒಪ್ಪಿದರೂ ಕೂಡ...."

"ಇಲ್ಲಿ ನೋಡು ನಾಗರತ್ನ, ನನಗೆ ಈ ಪಂಚಾಂಗ, ಪುರಾಣ ಯಾವುದೂ ಬೇಕಾಗಿಲ್ಲ. ನನಗೆ ಬೇಕಾಗಿರೋದು ನಿನ್ನ ಮಗಳು. ನಾನೂ ಎಂಥ ಮನುಷ್ಯ ಅನ್ನೋದು ನಿನಗೆ ಈಗಾಗಲೇ ಗೊತ್ತಾಗಿರಬೇಕು. ಈ ತೊಂಚಾವಂಚ ನನಗೆ ಹಿಡಿಯೊಲ್ಲ. ಆದ್ದರಿಂದ ನೀನೂ, ನಿನ್ನ ಮನಸ್ಸಿ ನಲ್ಲಿ ಏನಿದೇಂತ ಹೇಳಿಬಿಡು. ಇಲ್ಲ, ನನ್ನ ಮಾತು ನಿನಗೆ ಬೇಸರವಾಗಿದ್ದರೆ ಬಿಡು—ನಾನು ಪಟ್ಟ ಸಂತೋಷ ನೀನೂ ಪಡೋ ಹಾಗೆ ಮಾಡ್ತೀನಿ ನಿನ್ನ ಮಗಳೂ, ನನ್ನ ನಂಬಿದ್ದಕ್ಕೆ ದುಃಖ ಪಡೋದಿಲ್ಲ. ಇಷ್ಟು ಮಾತ ಬೇಕೋ, ಅಥವಾ ಕಡಲೇ, ತೊಗರಿ ವ್ಯಾಪಾರಾನೇ ಆಗಬೇಕೋ ?"—

"ನೀವು ಹೀಗೆ ಕೇಳಿದರೆ ನಾನೇನು ಹೇಳಲಿ ? ಇಂಥ ಮಾತು ಹೀಗೆ ನಡೆದಿದ್ದು ನಾನ್ಯಾವತ್ತೂ ಕಂಡಿಲ್ಲ...."

"ಇವತ್ತಿನವರೆಗೆ ನನ್ನಂಥವನನ್ನೂ ನೀನು ಕಂಡಿಲ್ಲ."

"ಅದೂ ನಿಜಾನೇ...."

"ಸರಿ ಮತ್ತೆ. ಈಗೇನು ಹೇಳು, ನನ್ನ ಮಾತಿಗೆ ಒಪ್ಪಿಗೆ ಇದ್ಯೋ?"

"ಒಪ್ಪಿದರೆ...."

"ಈ ಗಳಿಗೆಯಿಂದ ನಿನ್ನ ಮಗಳು--ನನ್ನವಳು."

"ಪೂಜೆ ಆಗ್ದೇನೇನೇ....ಅದ್ಹೆಂಗಾಗ್ತದೆ...."

"ಇವತ್ತು ನನಗೆ ಬೇಕಾದ ಪೂಜೆ ಆಗಲಿ. ಆಮೇಲೆ ನಿಧಾನವಾಗಿ ನಿನಗೆ ಬೇಕಾದ ಪೂಜೆ ಇಟ್ಕೊಕೋ....ಈಗ ಅದ್ಯಾವ ಮಾತೂ ಬೇಡ. ನೀನು ಸ್ವಲ್ಪ ಕೆಳಗೆ ಹೋಗು. ನಾಳೆ ನಿನಗೇನು ಬೇಕೋ, ಎಷ್ಟು ಬೇಕೋ ಅದು ನಿನ್ನದು. ಇಲ್ಲಾಂದ್ರೆ ನೀನು ನಿನ್ನ ಮಗಳು ಇಲ್ಲಿರಿ—ನಾನೇ ಹೋಗ್ತೀನಿ."

—ಎಂದು ಹೇಳಿ ಆಗಲೇ ಹೊರಡಲು ಸಿದ್ಧನಾದವನಂತೆ ಮಾಧವರಾಯ ಎದ್ದು ನಿಂತ.

ಆ ಮಾತನ್ನು ಕೇಳಿ ನಾಗರತ್ನ ಗರಬಡಿದವಳಂತಾದಳು.

ಅವಳ ಜೀವಮಾನದಲ್ಲೇ ಅವಳು ಅಂತಹ ಪರಿಸ್ಥಿತಿಯನ್ನು ಎದುರಿಸಿರಲಿಲ್ಲ. ಹುಡುಗಿಯನ್ನು ನೋಡುವುದು, ಮೆಚ್ಚುವುದು, ಮಾತಿಗೆ ಮೊದಲೇ ಉಡುಗೊರೆಗಳನ್ನು ತಂದುಕೊಡುವುದು, ಆ ಧಾರಾಳಕ್ಕೆ ಮೆಚ್ಚಿ ಇವರು 'ಗೆಜ್ಜೆ ಪೂಜೆ'ಗೆ ಇಷ್ಟು ಹಣ ಕೊಡಬೇಕು, ಇಷ್ಟು ಒಡವೆ ಹಾಕಬೇಕು, ಎಂತ ಎಲ್ಲಾ ನಿಷ್ಕರ್ಷೆ ಮಾಡಿ, ಬಳಿಕ ಹತ್ತು ಜನರ ಎದುರಿಗೆ ''ಗೆಜ್ಜೆ ಪೂಜೆ'ಯ ಶಾಸ್ತ್ರ ಮಾಡಿ, ಊರು ಮೆರವಣಿಗೆ ಮಾಡಿ, ಗಂಡಿಗೆ ಹೆಣ್ಣು ಒಪ್ಪಿಸುವುದು—ಇದು ನಾಗರತ್ನ ಅರಿಸಿದ್ದ ಕ್ರಮ.

ಈಗ ಅದಾವುದೂ ಇಲ್ಲ. ಮೊದಲು ಹೆಣ್ಣು, ಆಮೇಲೆ ಮಾತು ಎನ್ನುತ್ತಿದ್ದಾನೆ ಮಾಧವರಾಯ. ಅದಕ್ಕೆ ಏನು ಹೇಳುವುದು ? ಒಪ್ಪಿದರೆ ಏನು ಕಷ್ಟವೋ, ಒಪ್ಪದಿದ್ದರೆ ಏನು ಕಷ್ಟವೋ ?

ಈ ಸಂದಿಗ್ಧದಿಂದ ಹೇಗೆ ಪಾರಾಗುವುದು ಎಂದು ಚಿಂತಿಸುತ್ತಾ ನಾಗರತ್ನ 'ನೀನೇನಾದರೂ ದಾರಿ ತೋರಿಸುತ್ತೀಯಾ ?' ಎಂಬಂತೆ ಮಗಳ ಮುಖ ನೋಡಿದಳು.

ನೀಲಾಳಿಗೂ ಆ ಪರಿಸ್ಥಿತಿ ಅಷ್ಟೇ ಇಕ್ಕಟ್ಟಿನದಾಗಿತ್ತು. ಗಂಜಾಂನಿಂದ ಹೊರಡುವಾಗ ನಾಗರತ್ನ ಅವಳಿಗೆ, ಬೇಕಾದದ್ದಾಗಲಿ ಮಾಧವರಾಯನನ್ನು ನಿಂತು ಒಲಿಸಿಕೊಳ್ಳಬೇಕು ಎಂದು ಹೇಳಿ, ಸಮಯ ಬಂದರೆ, ಅದನ್ನು ಹೇಗೆ ಸಾಧಿಸಬೇಕು ಎಂಬ ವಿದ್ಯೆವನ್ನು ಕಲಿಸಿದ್ದಳೇ ಹೊರತು,

ಇಂಥ ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕು ಎಂಬುದನ್ನು ಕಲಿಸಿರಲಿಲ್ಲ. ಆದರೂ ಈ ವಿಷಯದಲ್ಲಿ ತನ್ನ ತಾಯಿಗಿದ್ದ ಆಸಕ್ತಿ ಎಷ್ಟು, ಅದಕ್ಕಿದ್ದ ಬಲವತ್ತರವಾದ ಕಾರಣವೇನು ಎಂಬುದನ್ನು ಅರಿತ ನೀಲಾ, ಈ ಸಮಯ ದಲ್ಲಿ ತಾನು ಸುಮ್ಮನಿರುವುದು ಸೂಕ್ತವಲ್ಲವೆಂದು ಭಾವಿಸಿ—

"ನಾನೊಂದು ಮಾತು ಹೇಳ್ತೀನಿ ಕೇಳ್ತೀಯಾ ಅಮ್ಮಯ್ಯ"— ಎಂದಳು.

"ಆದೇನು ಹೇಳು ನೀಲಾ ?"

"ಧಣಿಗಳಿಗೆ ನನ್ನ ಮೇಲೆ ಭಾಳ ಮನಸ್ಸಾಗಿದೆ. ಅದಕ್ಕೆ ಇಷ್ಟು ನಿಷ್ಠುರವಾಗಿ ಮಾತಾಡ್ತಾ ಇದಾರೆ. ಹೇಗೋ ಧರ್ಮ-ಕರ್ಮ ನನಗಿರಲಿ ಅನ್ತಾರೆ. ಆಯಿತು—ಆ ಮಾತು ಅವರ ಮೇಲೇ ಇರಲಿ. ನೋಡೋಣ —ನಂಬಿದ ನನ್ನನ್ನೇನು ಉಳಿಸಿಕೊಳ್ತಾರೋ, ಕೆಡಿಸಿ ನದೀಪಾಲು ಮಾಡ್ತಾರೋ ಆ ಪಾಪ ಪುಣ್ಯ ಅವರಿಗೇ ಇರಲಿ."

—ಎಂದಳು ನೀಲಾ.

"ನಿನಗೂ ಅವರ ಮೇಲೆ ಅಷ್ಟು ಮನಸ್ಸಾಗಿದೆಯೇ ನೀಲಾ....?"

"ಇಲ್ಲಿಗೆ ಬಂದ ದಿನಾನೇ ನಾನು ಹೇಳಲಿಲ್ವೇ? ನಾನೇನೋ ಅವ ರಿಗೇ ನನ್ನ ಮನಸ್ಸು ಕೊಟ್ಟಿದೀನಿ. ಉಳಿಸಿಕೊಂಡರೆ ಉಳಿಸಿಕೊಳ್ಳಲಿ. ಇಲ್ಲ ಅವರ ಹೆಸರು ಹೇಳಿ, ಈ ಊರಿನ ಹೊಳೇಲೇ ಬಿದ್ದು ಪ್ರಾಣ ಬಿಡ್ತೀನಿ."

ನೀಲಾ ಅಷ್ಟು ಹೇಳಿದ ಬಳಿಕ, ಬೇರೆ ದಾರಿಯೇ ಇಲ್ಲದಂತಾಗಿ—

"ಇಷ್ಟ್ಯಾವ್ದೂ ಹಿಂಗಾಗ್ತದೆ ಅಂತ ತಿಳುಕೊಂಡಿರಲಿಲ್ಲ. ರಂಗನಾಥ ಸ್ವಾಮಿ ಮನಸ್ಸಿನಾಗೆ ಹೆಂಗಿದ್ಯೋ ಹಂಗಾಗಲಿ. ಹಾಲು ಸಕ್ಕರೆ ಒಂದಾದ ಮೇಲೆ, ಅದನ್ನು ಬೆರೆಸಿದ ಪಾತ್ರೆ ಬೇರೇನೇ ತಾನೇ...."

—ಎಂದು ತನಗೆ ತಾನೇ ಮಾತಾಡಿಕೊಳ್ಳುತ್ತಾ ಕೆಳಗೆ ಇಳಿದು ಹೋದಳು ನಾಗರತ್ನ.

ಮೆಟ್ಟಲು ಬಾಗಿಲಿನಿಂದಾಚೆಗೆ ನಾಗರತ್ನ ಕಣ್ಣು ಮರೆಯಾಗುತ್ತಿದ್ದ ಹಾಗೇ ಮಾಧವರಾಯ, ತನಗೆ ಅಷ್ಟು ದೂರ ಕುಳಿತಿದ್ದ ನೀಲಳ ತೋಳು ಹಿಡಿದು ತನ್ನ ಬಳಿಗೆ ಎಳೆದುಕೊಂಡು, ತನ್ನ ಎದೆಗೆ ಅವಳ ಎದೆಯನ್ನು ಬಿಗಿದುಕೊಂಡು, ತುಟಿಗಳ ಹಸಿವನ್ನು ಅವಳ ಕೆನ್ನೆ, ತುಟಿಗಳ ಊಟದಿಂದ

ಹಿಂಗಿಸಿಕೊಂಡು, ಆ ಹಸಿವು ಕೊಂಚ ತಣಿದ ಬಳಿಕ, ತನ್ನ ತೋಳತೆಕ್ಕೆಯಲ್ಲಿ ಒರಗಿದ ಅವಳ ನುಣ್ಣನೆಯ ಕಪೋಲವನ್ನು ನೇವರಿಸುತ್ತಾ—

"ನನ್ನ ಒರಟಾಟದಿಂದ ನಿನಗೆ ಬೇಸರವಾಯಿತೆ ನೀಲಾ ?"

--ಎಂದು ಕೇಳಿದ.

"ಇಲ್ಲ" ಎಂಬುದನ್ನು ತಲೆಯಾಡಿಸಿ ಸೂಚಿಸಿ, ತನ್ನ ಕೆನ್ನೆಯನ್ನು ನೇವರಿಸುತ್ತಿದ್ದ ಮಾಧವರಾಯನ ಕೈಬೆರಳಿನಿಂದ ತಾನೇ ತನ್ನ ತುಟಿಯನ್ನು ನೇವರಿಸಿಕೊಳ್ಳುತ್ತಾ—

"ನಿಮಗೆ ನನ್ನ ಮೇಲೆ ಪ್ರೀತಿ ಇದೆಯೇ ?"

—ಎಂದು ಕೇಳಿದಳು ನೀಲಾ.

"ನಿನ್ನ ಸೌಂದರ್ಯಕ್ಕೆ ಮುಗ್ಧನಾಗಿ ನಿನ್ನನ್ನು ಪ್ರೀತಿಸದಿರುವವರು ಯಾರಾದರೂ ಇದಾರೆಯೇ ನೀಲಾ ?"

"ಅಂಥ ಪ್ರೀತಿ ಅಲ್ಲ....ನಾನು ಹೇಳಿದ್ದು...."

"ಮತ್ತೆ...."

"ಮನಸ್ಸಿಗೆ ಮನಸ್ಸು ಕೊಡೋದು, ಮೈಗೆ ಮೈ ಕೊಡೋದಲ್ಲ. ನನ್ನ ಮೇಲೆ ನಿಮಗೆ ಅಂಥ ಪ್ರೀತಿ ಇದೆಯೇ ?"

'ಇದೆ ಅಂತ ತೋರಿಸಲಿಕ್ಕೆ ಏನು ಮಾಡಬೇಕು ಹೇಳು ...'

'ಏನೂ ಬೇಡ.... ಅದಿದ್ದರಾಯಿತು....'

'ನಿನಗೆ ನನ್ನಮೇಲೆ ಅಂಥ ಪ್ರೀತಿ ಇದೆಯೇ....?

'ಇಲ್ಲದಿದ್ದರೆ ನಾನಾಗಿಯೇ ಬಂದು ನಿಮ್ಮ ತೋಳಿನಲ್ಲಿ ಕೂತುಕೋತಾ ಇದ್ದೆನೇ....'

'ಹಾಗಿದ್ದರೆ ನಾನು ಭಾಗ್ಯವಂತ ನೀಲಾ....'

'ನೀವು ಎಲ್ಲಿ ನನ್ನ ನಾಚಿಕೆಗೇಡಿ ಅಂತ ಅಂದುಕೋತೀರೋ ಅಂತ ನನಗೆ ಭಯವಾಗಿತ್ತು....'

'ಖಂಡಿತವಾಗಿಯೂ ಇಲ್ಲ.'

'ಏನೋ....ಅಂತೂ....ಇವತ್ತು ನನ್ನ ಮೇಲಿಟ್ಟಿರೋ ಪ್ರೀತೀನೇ ಯಾವಾಗಲೂ ಇಟ್ಟುಕೋಬೇಕು....'

'ಏಕೆ ? ನನ್ನಲ್ಲಿ ಅಂಥ ಅಪನಂಬಿಕೆಯೇ ?'

'ಅದಕ್ಕಲ್ಲ....'

'ಮತ್ತೆ....'

'ನಮ್ಮಲ್ಲಿ ಒಂದು ಗಾದೆ ಹೇಳ್ತಾರೆ....'

'ಏನು ಗಾದೆ ?'

"ಮೇಲೆ ಬಂದು ಬಿದ್ದ ಸೂಳೆ ಮೂರು ಕಾಸಿಗೂ ಬೇಡಾಂತ. ನಿಮ್ಮ ಪಾಲಿಗೆ ನಾನೆಲ್ಲಿ ಹಾಗಾಗ್ತೀನೋಂತ ಭಯ."

"ನನ್ನ ವಿಷಯದಲ್ಲಿ ನೀನು ಅಂಥ ಅನುಮಾನ, ಭಯ ಯಾವುದೂ ಇಟ್ಕೊಕೋಬೇಡಾ ನೀಲಾ. ನನ್ನ ಪಾಲಿಗೆ ನೀನು ಸೂಳೆಯಲ್ಲ...."

"ಮತ್ತೆನ್ನೇನು ?"

"ಕೈ ಹಿಡಿದ ಹೆಂಡತಿಗಿಂತಲೂ ಹೆಚ್ಚು, ನೀನು ನನ್ನ ಪ್ರೇಯಸಿ. ನಾನು, ನನ್ನದು ಅಂತ ಇರೋದೆಲ್ಲಾ ಇವತ್ತಿನಿಂದ ನಿನ್ನದು."

"ನನ್ನಾಣೆಗೂ...."

"ನಿನ್ನಾಣೆಗೂ....ನನ್ನಾಣೆಗೂ....ಇರೋ ಸ್ವಲ್ಪ ಹೊತ್ತೂನೂ ಬರೀ ಈ ಮಾತಿನಲ್ಲೇ ಕಳೆಯಬೇಕೇ ನೀಲಾ....?"

—ಎಂದು ಮಾಧವರಾಯ ನೀಲಳನ್ನು ತಬ್ಬಿ ಕೋಣೆಯತ್ತ ನೋಡಿದ.

ನೀಲಳಿಗೂ ಆ ಸಂಜ್ಞೆಯ ಅರ್ಥ ಅರಿವಾಯಿತು. ಮಾಧವರಾಯನ ತೊಡೆಯಿಂದ ಮೇಲೆದ್ದು ಕೋಣೆಯ ಕಡೆ ಹೊರಟಳು.

ಆದರೆ ಅವಳು ನಡೆಯುವುದಕ್ಕೆ ಅವಕಾಶ ಕೊಡದೆ, ಮಾಧವರಾಯ ತಾನೇ ಅವಳನ್ನು ತೋಳಿನಲ್ಲಿ ಎತ್ತಿಕೊಂಡು ಕೋಣೆಯ ಕಡೆಗೆ ನಡೆದ.

ತನ್ನನ್ನು ಎತ್ತಿ ಹಿಡಿದ ಅವನ ತೋಳಿನಲ್ಲೇ ಮೈ ಹೊರಳಿಸಿ, ನೀಲಾ ಅವನ ಮುಖವನ್ನು ತನ್ನ ಮುಖದತ್ತ ಎಳೆದುಕೊಂಡಳು.

## ೧೬

ಮಾಧವರಾಯನ ಮನೆಯಲ್ಲೇ ನೀಲಾಳ ಪ್ರತ್ಯೇಕ ನೃತ್ಯಪ್ರದರ್ಶನವಾದ ಬಳಿಕ, ಅದರ ಮಾರನೆಯ ದಿನ ಪಟ್ಟಣದಿಂದ ಬಂದವರಿಗೆ, ಚಿ ರಂಗದ ಉತ್ಸವಕ್ಕೆ ನೆರೆದ ಊರು, ಪರ ಊರಿನ ಗಣ್ಯರಿಗೆ, ಆ ಉತ್ಸ ಯಶಸ್ವಿಯಾಗಲು ನೆರವಾದ ಎಲ್ಲರಿಗೂ, ಮಾಧವರಾಯ ದೇವಾಲಯದ ಭರ್ಜರಿಯಾದ ಔತಣ ಮಾಡಿಸಿದ.

ಔತಣವಾದ ಬಳಿಕ,ಆಹ್ವಾನಿತರಾಗಿ ಬಂದ ಶಾಮಯ್ಯಂಗಾರ್ಯರು ನಾಗರತ್ನ ಮೊದಲಾದ ಎಲ್ಲರಿಗೂ ಯಾರಿಗೂ ಯಾವುವೇ ಬಗೆಯ ಅತೃಪ್ತಿಗೆ ಕಾರಣವಾಗದಂತೆ, ಸಂಭಾವನೆ ಉಡುಗೊರೆಗಳ ವಿತರಣೆಯಾದ ಬಳಿಕ, ಪಟ್ಟಣದಿಂದ ಬಂದವರೆಲ್ಲ ಹೊರಡಲು ಸಿದ್ಧರಾದರು.

ಕೇವಲ ಒಂದೇ ಒಂದು ದಿನ ನೀಲಳ ಸಂಗಸೌಖ್ಯವನ್ನು ಅನುಭವಿಸಿದ ಮಾಧವರಾಯನಿಗೆ, ಅವಳನ್ನು ಉಳಿದವರೊಂದಿಗೆ ಪಟ್ಟಣಕ್ಕೆ ಕಳಿಸುವುದು, ಕರುಳು ಕೊಯ್ದಷ್ಟು ಯಾತನೆಗೆ ಕಾರಣವಾದರೂ, ತಾತ್ಕಾಲಿಕವಾಗಿ ತಮ್ಮಿಬ್ಬರ ಸಖ್ಯದ ವಿಷಯ ಬಹಿರಂಗವಾಗಬಾರದೆಂಬ ಉದ್ದೇಶದಿಂದ, ಅವಳನ್ನು ತಡೆಯುವ ಪ್ರಯತ್ನವನ್ನು ಮಾಡದೆ, ಸಂಭಾವನೆ–ಉಡುಗೊರೆಗಳ ವಿಷಯದಲ್ಲೂ ಅವಳು ಉಳಿದವರಿಗಿಂತ ತನಗೆ ಪ್ರಿಯಳು ಎಂಬ ಅನುಮಾನ ಬರದಂತೆ ಎಚ್ಚರವಹಿಸಿ ಬೀಳುಕೊಟ್ಟ.

ಹೊರಡುವ ಹೊತ್ತಿನಲ್ಲಿ ಶಾಮಯ್ಯಂಗಾರ್ಯರು, ಮಾಧವರಾಯನಿಗೆ—

"ನೀವು ನನಗೆ ಜೀವನದಲ್ಲಿ ಮಾಡಿದ ಈ ಮಹೋಪಕಾರಕ್ಕೆ ಕೃತಜ್ಞತೆಯನ್ನು ಸೂಚಿಸುವುದಕ್ಕೆ ನನಗೆ ಶಕ್ತಿಯಿಲ್ಲ. ಆದರೆ ಭಗವಂತನಲ್ಲಿ ನಾನು ಪ್ರಾರ್ಥಿಸುವುದಿಷ್ಟೇ: ಆತ ನಿಮಗೆ ಎಷ್ಟು ಔದಾರ್ಯ ನೀಡಿದಾನೋ ಅದಕ್ಕೆ ನೂರುಮಡಿಯಾಗಿ ಸಂಪತ್ತು, ಅದನ್ನು ಯಥಾ ಸಾವಕಾಶವಾಗಿ ಅನುಭವಿಸಲು ಬೇಕಾಗುವಷ್ಟು ಆರೋಗ್ಯ, ಆಯುಸ್ಸನ್ನು ಕೊಡಲಿ. ಎಲ್ಲಕ್ಕಿಂತ ಹೆಚ್ಚಾಗಿ ನಾನು ಹೇಳುವುದಿಷ್ಟೆ: ದೇವರು ಕೊಟ್ಟದ್ದನ್ನು ಉಳಿಸಿಕೊಳ್ಳಿ. ಪಟ್ಟಣಕ್ಕೆ ಬಂದರೆ, ಬಡವನ ಮನೇಗೂ ಬಂದು ಹೋಗಿ, ಬಡವನ ಆತಿಥ್ಯ ಸ್ವೀಕರಿಸಬೇಕು."

—ಎಂದು ಹೇಳಿದರು.

ಆದರೆ ತಮಗೆ ನಮಸ್ಕರಿಸಿದ ಶಂಕರಮ್ಮನನ್ನು ಆಶೀರ್ವದಿಸುವ ಹೊತ್ತಿನಲ್ಲಿ, ಅವರ ಕಣ್ಣುಗಳು ತುಂಬಿ ಬಂದು, ಗಂಟಲು ಕಟ್ಟಿ—

"ತಾಯಿ, ನೀನು ಸಾಕ್ಷಾತ್ ಅನ್ನಪೂರ್ಣೇಶ್ವರಿ. ಈ ಎರಡು ದಿನ ನೀವು ನನಗೆ ಇಟ್ಟದ್ದು ಅನ್ನವಲ್ಲ, ಅಮೃತ. ಈ ವಿಶ್ವಾಸದ ಋಣ ತೀರಿಸೋ ಯೋಗ್ಯತೆ ನನಗಿಲ್ಲ. ಇನ್ನು ನಿಮಗೆ ನಾನು ಬುದ್ಧಿವಾದ

ಹೇಳಲೇ ? ಆದರೂ ಮುದುಕರದು ಬಹಳ ಚಪಲ ಬುದ್ಧಿ. ಏನೋ ಹೇಳಬೇಕೂಂತ ನಾಲಿಗೆ ತುಡೀತಾ ಇದೆ. ಹೇಳು ಅಂದರೆ ಹೇಳ್ತೀನಿ."

—ಎಂದರು.

"ಹೇಳಿ ಅಯ್ಯಂಗಾರ್ಯರೇ. ನೀವು ನನಗೆ ತಂದೆಯಿದ್ದ ಹಾಗೆ. ನೀವೇನೇ ಹೇಳಿದರೂ ನಾನು ವ್ಯತ್ಯಾಸ ತಿಳಿದುಕೊಳ್ಳೋಲ್ಲ. ಏನಿದ್ದರೂ ಹೇಳಿ."

—ಎಂದಳು ಶಂಕರಮ್ಮ.

"ಇನ್ನೇನೂ ಇಲ್ಲ ತಾಯಿ, ನಿಮ್ಮ ಯಜಮಾನರ ಕೈ.ಕೈಯಲ್ಲ, ಬಂಗಾರದ ಬೊಡ್ಡಿ ಕಾಲುವೆ ; ಅದರ ತೂಬು ತೆಗೆದರೆ ಕಾವೇರಿಯೂ ಖಾಲಿ ಯಾಗುತ್ತೆ. ಅದನ್ನು ಸ್ವಲ್ಪ ಎಚ್ಚರವಾಗಿ ಕಾಪಾಡಿಕೋಬೇಕಮ್ಮಾ. ಅನ್ನದ ಅಗಳು ಬಿದ್ದಕಡೆ ಕಾಗೆಗಳ ಬಳಗ ಹೇಳದೆ ಕೇಳದೆ ಬಂದು ನೆರೆಯುತ್ತವೆ. ನೀವು ಎಚ್ಚರವಾಗಿಲ್ಲದೆ ಇದ್ದರೆ, ಕಾಗೆಗಳ ಜೊತೇಲಿ ಗೂಗೆಗಳೂ ಬಂದು, ಮನೆಗೆ ಅಶುಭ ಕೋರಬಹುದು. ನಿಮ್ಮ ಯಜಮಾನರಿಗೆ ಇದೆಲ್ಲಾ ತಿಳಿಯೋ ಹಾಗೆ ಕಾಣೊಲ್ಲ. ಆದ್ದರಿಂದ ಈಗ ನಿನ್ನ ಕಣ್ಣೇ ಈ ಮನೆಗೆ ಏಳುಸುತ್ತಿನ ಕೋಟೆಯಾಗಬೇಕು. ಅಷ್ಟೇ ನಾನು ಹೇಳಬೇಕಾದ್ದು. ಮದುಕ ಏನೋ ಹೇಳಿದಾಂತ ಬೇಜಾರು ಮಾಡಿಕೋ ಬೇಡ ತಾಯಿ."

ಅಯ್ಯಂಗಾರ್ಯರು ಆ ಮಾತಾಡಿದಾಗ, ಅಲ್ಲಿದ್ದ ಮಾಧವರಾಯ, ಚಂದ್ರಯ್ಯ, ನಾಗರತ್ನ–ಒಬ್ಬೊಬ್ಬರೂ ಆ ಮಾತುಗಳ ಅರ್ಥವನ್ನು ಒಂದೊಂದು ರೀತಿಯಾಗಿ ಗ್ರಹಿಸಿದರು.

ಆದರೆ ಶಂಕರಮ್ಮ ಮಾತ್ರ ಆ ಮಾತುಗಳಲ್ಲಿ ಏನೂ ಅರ್ಥ ಗ್ರಹಿಸಲು ಯತ್ನಿಸದೆ—

"ಈ ಮನೆಗೆ ನನ್ನ ಕಣ್ಣೆಂಥ ಕಾವಲಾಗುತ್ತೆ ? ನನ್ನ ಕಣ್ಣಿಗೆ ಅಷ್ಟು ಶಕ್ತಿಯಿಲ್ಲ. ಎಲ್ಲಾ ಚೆನ್ನಾಗಿರಲಿ ಅಂತ ನೀವು ಆಶೀರ್ವದಿಸಿ. ನಿಮ್ಮ ಆಶೀರ್ವಾದವೇ ಈ ಮನೆಯನ್ನು ಕಬ್ಬಿಣದ ಕೋಟೆಯಾಗಿ ಕಾಪಾಡುತ್ತೆ"—ಎಂದಳು.

"ಹಾಗಿದ್ದರೆ, ನಾನು ಹೃತ್ಪೂರ್ವಕವಾಗಿ ಹರಸುತ್ತೇನೆ. ಆದರೂ ನನ್ನ ಮಾತು ಮರೆತುಬಿಡಬೇಡ ತಾಯಿ"

—ಎಂದು ಹೇಳಿದ ಅಯ್ಯಂಗಾರ್ಯರು, ಎಲ್ಲರಿಂದಲೂ ಹೊರಡಲು ಅಪ್ಪಣೆ ಪಡೆದು, ತಮ್ಮ ಪಕ್ಕದಲ್ಲಿ ನಿಂತಿದ್ದ ನಾಗರತ್ನಳಿಗೆ—

"ನೀವೆಲ್ಲಾ ಗಾಡೀಲಿ ಕೂತುಕೊಂಡು ಮುಂದಕ್ಕೆ ಹೊರಡಿ. ಎರಡು ದಿನದಿಂದ ಕೂತು ಕೂತು ನನ್ನ ಕಾಲು ಹಿಡಿದುಕೊಂಡ ಹಾಗಿವೆ. ಅಷ್ಟು ದೂರ ನಡೆದುಕೊಂಡು ಬಂದು, ಆಮೇಲೆ ಗಾಡಿ ಹತ್ತುತ್ತೀನಿ."

ಎಂದು ಹೇಳಿದರು.

ಅವರು ಅಷ್ಟು ಹೇಳಿದ ಬಳಿಕ, ಬೇರೆ ದಾರಿಯೇ ಕಾಣದೆ ನಾಗರತ್ನ, ಮಾಧವರಾಯರು, ಶಂಕರಮ್ಮನಿಗೆ ನಮಸ್ಕರಿಸಿ—

"ನಾನು ಬರ್ತೀನಿ. ಇದೇ ವಿಶ್ವಾಸ ಯಾವಾಗಲೂ ಇಟ್ಕೊಳೋಬೇಕು."

—ಎಂದು ಹೇಳಿದಳು.

"ನಿನ್ನ ಮಗಳನ್ನು ಚೆನ್ನಾಗಿ ನೋಡಿಕೋ ನಾಗರತ್ನಮ್ಮ, ಸರಸ್ವತಿ ನಿನ್ನ ಮಗಳಿಗೆ ಸಂಪೂರ್ಣವಾಗಿ ಒಲಿದಿದಾಳೆ. ಅಂಥ ಮಕ್ಕಳು ಹುಟ್ಬೋದು ಪೂರ್ವಜನ್ಮದ ಪುಣ್ಯ."

—ಎಂದು ಹೇಳಿದಳು ಶಂಕರಮ್ಮ.

"ಎಲ್ಲಾ ನಿಮ್ಮಾಶೀರ್ವಾದ ಕಣಮ್ಮ"

—ಎಂದಳು ನಾಗರತ್ನ.

"ನಿಮಗೆ ತಿಳೀದು ತಾಯಿ, ಇವಂಗೆ ಸರಸ್ವತಿ ಒಲಿದರೂ, ಇವರು ಪೂಜಿಸೋದು ಲಕ್ಷ್ಮೀನೇ."

—ಎಂದರು ಅಯ್ಯಂಗಾರ್ಯರು ಚುರುಕಾದ ನಗು ನಗುತ್ತಾ.

"ಪಾಪ ! ಬಡತನ ಹಾಗೆ ಮಾಡಿಸುತ್ತೆ. ಅದಕ್ಕೆ ಯಾರು ಹೊಣೆ.?"

—ಸಹಾನುಭೂತಿಯಿಂದ ಹೇಳಿದಳು ಶಂಕರಮ್ಮ.

"ಬಡವನ ಹೊಟ್ಟೆ ಅನ್ನ ಕೇಳುತ್ತೆಯೇ ಹೊರತು ಬಳಪಕ್ತಿ ಯಾಗೂಂತ ಹೇಳೊಲ್ಲ—ಹೋಗಲಿ ಬಿಡಿ ಎಲ್ಲೀ ಮಾತು.. .ಹೂ, ನಾಗರತ್ನ, ಗಾಡಿ ಹತ್ತು."

—ಎಂದು ನಾಗರತ್ನಳನ್ನು ಬಲವಂತವಾಗಿ ಗಾಡಿಗೆ ಹತ್ತಿಸಿ, ಗಾಡಿಯಿಂದ ಹೊರಟ ಬಳಿಕ, ಮಾಧವರಾಯನಿಗೆ, ಶಂಕರಮ್ಮನಿಗೆ—

"ನಾನಿನ್ನು ಬರ್ತೀನಿ. ಅಪ್ಪಣೆಕೊಡಬೇಕು."

—ಎಂದು ಹೇಳಿ, ಚಂದ್ರಯ್ಯನಿಗೆ—

"ಚಂದ್ರಯ್ಯ, ನನ್ನ ಜೊತೇಲಿ ಅಷ್ಟುದೂರ ಬಾ"

—ಎಂದು ಹೇಳಿ, ದೊಣ್ಣೆಯನ್ನು ಊರಿಕೊಂಡು ಮುಂದೆ ನಡೆದರು.

"ಯಜಮಾನರನ್ನು ಬಹಳ ದೂರ ನಡಿಸಬೇಡಿ, ಚಂದ್ರಯ್ಯ"

—ಎಂದು ಹೇಳಿ ಶಂಕರಮ್ಮ ಮನೆಯೊಳಗೆ ಹೋದಳು.

ಮಾಧವರಾಯನೂ ಅದೇ ಮಾತು ಹೇಳಿ ಹೆಂಡತಿಯನ್ನು ಹಿಂಬಾಲಿಸಿದ.

ಚಂದ್ರಯ್ಯ ಅಯ್ಯಂಗಾರ್ಯರೊಂದಿಗೆ ಮುಂದೆ ನಡೆದ.

ಮಾಧವರಾಯನ ಮನೆಯಿಂದ ಅಷ್ಟುದೂರ ಹೋದಬಳಿಕ ಅಯ್ಯಂಗಾರ್ಯರೇ—

"ಚಂದ್ರಯ್ಯ, ಅಮ್ಮನವರ ಜೊತೇಲಿ ನಾನೊಂದು ಮಾತಾಡಿದೆ. ಅದು ಕೇಳಿ ನಿನಗೆ ಬೇಸರವಾಯಿತೇನೋ, ಆದರೆ ಆ ಮಾತನ್ನು ನಾನು ನಿನ್ನನ್ನು ಉದ್ದೇಶಿಸಿ ಹೇಳಲಿಲ್ಲ."

—ಎಂದು ಮೌನವನ್ನು ಮುರಿದು ಹೇಳಿದರು.

ಯಾವ ಮಾತನ್ನು ಲಕ್ಷ್ಯದಲಿಟ್ಟುಕೊಂಡು ಅಯ್ಯಂಗಾರ್ಯರು ಅದನ್ನು ಹೇಳುತ್ತಿದ್ದಾರೆ ಎಂಬುದು ಚಂದ್ರಯ್ಯನಿಗೂ ಅರ್ಥವಾಗಿ—

''ಹಾಗಿದ್ದರೆ ಯಾರನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿದಿರಿ ?"

—ಎಂದು ಮರುಪ್ರಶ್ನೆ ಮಾಡಿದ.

''ಅದನ್ನು ಹೇಳೋಕೇ ನಿನ್ನ ಅಷ್ಟುದೂರ ನನ್ನ ಜೊತೇಲಿ ಬಾಂತ ಅಂದದ್ದು.... ಮಾಧವರಾಯರ ವಿಷಯ ನಿನಗೆ ಚೆನ್ನಾಗಿ ಗೊತ್ತೆ ಚಂದ್ರಯ್ಯ ?"

"ಗೊತ್ತು"

—ಅಯ್ಯಂಗಾರ್ಯರ ಪ್ರಶ್ನೆಯ ಅರ್ಥ ತಿಳಿಯದೆ ಹೇಳಿದ ಚಂದ್ರಯ್ಯ.

"ಗೊತ್ತು ಎಂದರೆ, ನನ್ನ ಹಾಗೆ 'ಗೊತ್ತು' ಎಂದು ಹೇಳುವಷ್ಟು ಮಟ್ಟಿಗೇ ಗೊತ್ತೋ, ಅಥವಾ ಅವರ ಅಂತರಂಗ ಪರಿಚಯವಿದೆಯೋ ?"

"ಈಗ ಒಂದು ವರ್ಷದಿಂದ ನೋಡ್ತಾ ಇದೀನಿ ಅವರನ್ನ. ನನ್ನಲ್ಲಿ ಅವರು ಯಾವ ವಿಷಯಾನೂ ಮುಚ್ಚುಮರೆ ಮಾಡಿಲ್ಲ."

"ಹಾಗಿದ್ದರೆ ಸರಿ. ನಾನು ಈ ಮಾತು ಕೇಳಿದೆ ಅಂತ ನೀನೇನೂ

ತಿಳುಕೋಬೇಡ. ರಾಯರ ಯೋಗಕ್ಷೇಮವೃತ್ತಿಯಿಂದಲೇ ಈ ಮಾತು ನಾನು ಕೇಳ್ತಾ ಇರೋದು....ರಾಯರಿಗೆ ಹೆಂಗಸರ 'ಶೋಕಿ' ಏನಾದರೂ ಇದೆಯೇ ?"

"ನನಗೆ ತಿಳಿದಮಟ್ಟಿಗೆ ಅವರಿಗೆ ಇರೋದು ಚದುರಂಗದ ಹುಚ್ಚೊಂದೇ. ಅದು ಬಿಟ್ಟು ಬೇರೆ ಯಾವುದೂ ಇದ್ದ ಹಾಗಿಲ್ಲ."

"ನಿಜವೇ ? ನಾನು ಹೊಸಬ ಅಂದುಕೊಂಡು ಮುಚ್ಚುಮರೆ ಮಾಡುತ್ತಿಲ್ಲ ತಾನೇ?"

"ಭಗವಂತನ ಪಾದಸಾಕ್ಷಿಯಾಗಿಯೂ ನಾನು ಏನೂ ಮುಚ್ಚುಮರೆ ಮಾಡುತ್ತಿಲ್ಲ."

"ಹಾಗಿದ್ದರೆ, ನೀನು ರಾಯರನ್ನು ಸ್ವಲ್ಪ ಹುಷಾರಾಗಿ ನೋಡಿಕೋಬೇಕು ಚಂದ್ರಯ್ಯ"

""ಏಕೆ""

"ನಿನ್ನ ಯಜಮಾನಂಗೆ ಈಗ ಹೊಸಹುಚ್ಚು ಹಿಡೀತಾ ಇರೋ ಹಾಗಿದೆ. ಹಿಡಿದಿದೇಂತ ಹೇಳೋಕೆ ನನಗೆ ಧೈರ್ಯ ಸಾಲದು. ಆದರೆ ವಾಸನೆ ಮಾತ್ರ ಬಹಳ ಜೋರಾಗಿದೆ."

ಅಯ್ಯಂಗಾರ್ಯರು ಹೇಳಿದುದನ್ನು ಕೇಳಿ ಚಂದ್ರಯ್ಯ ಹೌಹಾರಿದ.

"ಹಾಗೆಂದ್ರೇನು ಸ್ವಾಮಿ ?"

"ಚದುರಂಗದಾಟದ ರಹಸ್ಯ ನಿನಗೆ ಹೇಳಕೊಡ್ತಾ ನಾನು 'ನಿನ್ನ ಕೈ ನಿನ್ನ ಕಾಯನ್ನು ನಡೆಸುತ್ತಿರುವಾಗ, ನಿನ್ನ ತಲೆ ಇದಿರಾಳಿಯ ಆಟ ಆಡ್ತಾ ಇರಬೇಕು' ಅಂತ ಹೇಳಿದ್ದು ನೆನಪಿದೆಯೆ ?"

"ಇದೆ"

"ಚದುರಂಗದಾಟದ ಈ ಮಾತು ಜೀವನಕ್ಕೂ ಅಷ್ಟೇ ಮಟ್ಟಿಗೆ ಅನ್ವಯಿಸುತ್ತೆ ಚಂದ್ರಯ್ಯ. ದೇವರು ನಮಗೆ ಕೊಟ್ಟಿರೋದು ಎರಡೇ ಕಣ್ಣು. ಆದರೆ ಜೀವನದ ಚದುರಂಗದಾಟದಲ್ಲಿ ಗೆಲ್ಲಲು ಈ ಎರಡು ಕಣ್ಣು ಸಾಲದು—ಆದ್ದರಿಂದ ನಮ್ಮ ಬುದ್ಧಿ ಹತ್ತು ಕಣ್ಣಾಗಬೇಕು. ಈ ಕಣ್ಣು ಕೆಟ್ಟರೂ ಆ ಕಣ್ಣು ಚುರುಕಾಗಿರಬೇಕು ..."

"ನಿಜ"

"ನೀನು ಈಗ ಆ ಕಣ್ಣುಗಳನ್ನು ಬಿಚ್ಚಿ, ನಿನ್ನ ಯಜಮಾನರಿಗೆ ಕಾವಲಾಗಬೇಕು."

"ಅವರಿಗೆ ಅಂಥ ಭಯ ಏನು ಬಂದಿದೆ ?"

"ಹೆಣ್ಣಿನ ಮೋಹದ್ದು"

"ಹೌದೇ"

"ಹೂ"

"ಯಾರು ?"

"ನಾಗರತ್ನನ ಮಗಳು ನೀಲಾಸಾನಿ ಕಡೆ ನಿಮ್ಮ ಯಜಮಾನರು ಕಣ್ಣು ಜೋಲು ಬಿಟ್ಟಿರೋ ಹಾಗಿದೆ. ಬರೀ ಕಣ್ಣು ಜೋಲು ಬಿಟ್ಟಿರೋದೇ ಅಲ್ಲ, ಮೈಯನ್ನೂ ಆಗಲೇ ಒಪ್ಪಿಸಿಬಿಟ್ಟಿದಾರೇಂತ ನನಗೆ ಅನುಮಾನ. ನಿನ್ನ ಯಜಮಾನರನ್ನು ಸ್ವಲ್ಪ ಸರಿಯಾಗಿ ನೋಡಿಕೋ."

"ಹಾಗೇ ?—ನಿಮಗಿದೆಲ್ಲಾ ಹೇಗೆ ತಿಳೀತು ? ನಾಗರತ್ನ ಏನಾದರೂ ಹೇಳಿದಳೇ ?"

"ನಾಗರತ್ನ ನನ್ನ ಉಪಪತ್ನಿ ನಿಜ, ಆದರೆ ವ್ಯಾಪಾರ ರಹಸ್ಯವನ್ನು ಬಿಟ್ಟು ಕೊಡುವ ಅಡ್ಡ ಕಸುಬಿಯಲ್ಲ."

"ಮತ್ತೆ ?"

"ಹೆಚ್ಚೇನೂ ಕೆದಕಿ ಕೇಳಬೇಡ ಚಂದ್ರಯ್ಯ. ಆದರೆ ಇಷ್ಟು ಮಾತ್ರ ಖಂಡಿತವಾಗಿಯೂ ಹೇಳಬಲ್ಲೆ. ಚಾಲು-ಚಲನೆ ನೋಡಿದರೆ, ನಾಗರತ್ನ ನಿಮ್ಮ ಯಜಮಾನರಿಗೆ ನೀಲಾನ ಗಂಟುಹಾಕೋ ಪ್ರಯತ್ನ ಮಾಡಿರೋ ಹಾಗೆ ಕಾಣುತ್ತೆ. ಅದು ನಿಮ್ಮ ಯಜಮಾನರಿಗೂ ಹಿತವಾಗಿರೋ ಹಾಗಿದೆ."

"ಹಾಗೇ—"

—ಎಂದು ಚಂದ್ರಯ್ಯ ಏನೋ ಹೇಳಲು ಹೋಗಿ, ಮತ್ತೇನೋ ಆಲೋಚಿಸಿ—

"ಅಲ್ಲಾ ಸ್ವಾಮಿ, ನಾನು ಹೀಗೆ ಹೇಳ್ತೀನೀಂತ ನೀವೇನೂ ತಿಳಕೋಬೇಡಿ. ನಮ್ಮ ಧಣಿಗಳಿಗೆ ಇನ್ನೂ ವಯಸ್ಸು ಚಿಕ್ಕದು. ನಿಮ್ಮ ವಯಸ್ಸಿನಲ್ಲಿ ಅರ್ಥ ಇರಬಹುದು. ಈ ವಯಸ್ಸಿನಲ್ಲಿ ನಿಮಗೆ ಉಪಪತ್ನಿ ಬೇಕೂಂತ ಅನಿಸಿದರೆ, ಯಜಮಾನರು ಬಯಸೋದು ತಪ್ಪೆ ?"

"ಹಾಗಂತ ಹೇಳಿದೋರು ಯಾರು ?"

"ಮತ್ತೆ ?"

"ಗಂಡಸು ಅಂತ ಅನ್ನಿಸಿಕೊಳ್ಳೋಕೆ ಮೀಸೆ ಹ್ಯಾಗಿರಬೇಕೋ ಹಾಗೇ ಸೂಳೇನೂ ಇರಬೇಕು. ಒಬ್ಬ ಹೆಂಗಸನ್ನ ಅನುಭೋಗಿಸಿ 'ತೃಪ್ತಿಯಾಯಿತೋ ಭಗವಂತಾ' ಅನ್ನೋನೂ ಒಬ್ಬ ಗಂಡಸೇ ? ಅವನು ನಾಮರ್ದಾ. ಈ ವಯಸ್ಸಿನಲ್ಲೂ ನಾನು ಹೆಂಡತಿ ಅಲ್ಲದೆ, ಒಬ್ಬ ಸೂಳೆ ಸಾಲದು ಅಂತ ಇಬ್ಬರನ್ನ ಇಟ್ಟಿದೀನಿ. ಅಂಥೋನು ನಾನು. ನಿಮ್ಮ ರಾಯರು ಒಬ್ಬ ಸೂಳೆ ಇಟ್ಟುಕೊಳ್ತೀನಿ ಅಂದ್ರೆ ಬೇಡ ಅನ್ತೀನಾ ?"

"ಮತ್ತೆ ?"

"ಈ ಸಂಬಂಧ ಒಳ್ಳೇದಲ್ಲಾಂತ...."

"ಯಾಕೆ, ನಾಗರತ್ನ ನಿಮ್ಮ 'ಕಟ್ಟವಾಳ' ಅಲ್ಲವೇ ?"

"ಹೌದು."

"ಹಾಗಾದ್ರೆ ನೀಲಾ ನಿಮ್ಮ ಮಗಳೇ ಆದ ಹಾಗಾಯಿತಲ್ಲಾ. ಅದರಲ್ಲೇನು ತಪ್ಪು ಬಂತು ? ನಿಮ್ಮ ಮಗಳು ಕೆಟ್ಟೋಳು ಆಗೋದು ಸಾಧ್ಯವೇ ?"

"ನೀಲಾ ನನ್ನ ಮಗಳೇ ಆಗಿದ್ರೆ, ನಾನೇ ಅವಳನ್ನು ನಿಮ್ಮ ಯಜಮಾನರಿಗೆ ಧಾರೆ ಎರೆದು ಕೊಡ್ತಾ ಇದ್ದೆ."

"ಮತ್ತೆ—ನಾಗರತ್ನ ನಿಮ್ಮವಳಾಗಿದ್ದೂ, 'ಹಿತ್ತಲುಬಾಗಿಲು' ತೆಗೆಯೋ ಅಂಥೋಳೇ ?"

"ಊಹು. ಆ ವಿಷಯದಲ್ಲಿ ನಾಗರತ್ನ ನಿಯತ್ತುಗಾತಿ."

"ಹಾಗಂದ್ರೆ ನೀಲಾ ನಿಮ್ಮ ಮಗಳಲ್ಲದೆ, ಬೇರೆಯವರ ಮಗಳು ಹೇಗೆ ಆಗ್ತಾಳೆ, ಅಯ್ಯಂಗಾರ್ ಸ್ವಾಮಿಗಳೇ ?"

ಅಯ್ಯಂಗಾರ್ಯರ ಮಾತೇ ಅರ್ಥವಾಗದವನಂತೆ ಕೇಳಿದ ಚಂದ್ರಯ್ಯ.

"ಅದೆಲ್ಲಾ ಒಂದು ದೊಡ್ಡ ಕಥೆ. ನೀಲಾ ನಾಗರತ್ನಳ ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲ, ಸಾಕು ಮಗಳು. ನಾಗರತ್ನಳ ತಂಗಿ ಸುಂದರಿ ಅಂತ ಒಬ್ಬಳು ಇದ್ದಳು. ಸುಂದರಿ ಆ ಹೆಸರಿಗೆ ತಕ್ಕ ಹಾಗೇ ಇದ್ದಳು. ಆದರೆ ಅವಳ ಸೌಂದರ್ಯ ಎಷ್ಟು ಅಪರೂಪವಾಗಿತ್ತೊ, ಅವಳ ಗುಣ ಅಷ್ಟೇ ಕುರೂಪವಾಗಿತ್ತು. ಹಣ ಎಂದರೆ ಏನು ಮಾಡುವುದಕ್ಕೂ

ಹೇಳುತ್ತಿರಲಿಲ್ಲ. ಕೇವಲ ಆ ಕಾರಣಕ್ಕಾಗಿಯೇ ಅವಳು ತನಗೆ ಶಾಸ್ತ್ರೋಕ್ತವಾಗಿ ಗೆಜ್ಜೆಪೂಜೆಯಾಗಿದ್ದವನನ್ನೂ ಕೈಬಿಟ್ಟು, ಸುಲ್ತಾನರ ಸೇನೆಯಲ್ಲಿದ್ದ ಫ್ರೆಂಚ್ ಸರದಾರನೊಬ್ಬನನ್ನು ಕಟ್ಟಿಕೊಂಡು, ಅವನಿಗೆ ನೀಲಾನ ಹಡೆದು ಈ ಹುಡುಗಿ ಎರಡು ವರ್ಷದ ಕೂಸಾಗಿದ್ದಾಗ ತೀರಿಕೊಂಡಳು. ಆಮೇಲೆ ನಾಗರತ್ನ ಈ ಹುಡುಗಿಯನ್ನು ಸಾಕಿ ಬೆಳೆಸಿದಳು. ಹುಡುಗಿ ಸಣ್ಣದಾಗಿರುವಾಗಲೇ ಗಾಜಿನ ಗೊಂಬೆಯ ಹಾಗಿದ್ದುದರಿಂದ, ಇವಳನ್ನು ಬೆಳೆಸಿ, ದೊಡ್ಡವಳಾಗಿ ಮಾಡಿದರೆ, ಮಕ್ಕಳಿಲ್ಲದ ತನಗೆ ಇವಳು ವೃದ್ಧಾಪ್ಯದಲ್ಲಿ ಒಳ್ಳೆ ಊರೆಗೋಲಾಗಬಹುದು ಎಂಬ ಆಸೆಯಿಂದ ನಾಗರತ್ನ ಈ ಹುಡುಗಿಗೆ ಯಾವುದಕ್ಕೂ ಕಡಿಮೆ ಮಾಡದೆ, ಇವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳೇ ಆಗಿದ್ದಿದ್ದರೆ ಎಷ್ಟು ಅಕ್ಕರೆಯಿಂದ ಸಾಕುತ್ತಿದ್ದಳೋ ಅದಕ್ಕೂ ಮಿಗಿಲಾಗಿ ಬೆಳೆಸಿದಳು. ಈ ನೀಲಾ ನನ್ನ ತೊಡೆಯ ಮೇಲೆ ಆಡಿ ಬೆಳೆದ ಹುಡುಗಿಯಾದುದರಿಂದ ಇವಳ ಗುಣಾನ ನಾನು ಚೆನ್ನಾಗಿ ಬಲ್ಲೆ. ಇವಳು ರೂಪದಲ್ಲಷ್ಟೇ ಅಲ್ಲ, ಗುಣದಲ್ಲೂ ಆ ತಾಯಿಯ ಮಗಳೇ! ಕಹಿ ಸೋರೆಬಳ್ಳೀಲಿ ಸೀಗುಂಬಳ ಬಿಡುತ್ತದೆಯೇ? ಅದಕ್ಕೇ ನಾನು ನಿಮ್ಮ ಯಜಮಾನರಿಗೆ ಈ ಗ್ರಹ ಎಲ್ಲಿ ಗಂಟು ಬೀಳುತ್ತದೆಯೋ ಎಂದು ಹೆದರುತ್ತಾ ಇರುವುದು. ಹೇಗಾದರಾಗಲಿ ಚಂದ್ರಯ್ಯ; ಮಾಧವರಾಯ, ಈ ಬೆರಕೆ ರಕ್ತದ ಹುಡುಗಿ ಬಲೇಗೆ ಬೀಳದ ಹಾಗೆ ನೋಡಿಕೋ. ಇಲ್ಲಿ ನೀನು ನಿಗವಾಗಿರು. ಅಲ್ಲಿ ನಾನೂ ಏನಾಗುತ್ತದೋ ನೋಡ್ತಾ ಇರ್‍ತೀನಿ."

—ಎಂದು ಅಯ್ಯಂಗಾರ್ಯರು ತಮ್ಮ ಭೀತಿಯ ಕಾರಣವನ್ನು ಚಂದ್ರಯ್ಯನಿಗೆ ವಿವರಿಸಿ ಹೇಳಿದರು.

ಅವರು ಹೇಳಿದುದನ್ನೆಲ್ಲಾ ಕೇಳಿ, ಕ್ರಮೇಣ ಚಂದ್ರಯ್ಯನಿಗೂ ಅದರ ಭೀತಿ ಆವರಿಸಿತು.

"ಆಯ್ತು ಅಯ್ಯಂಗಾರ್ ಸ್ವಾಮಿಗಳೇ, ನಾನೂ ನನ್ನ ಕೈಲಾದಷ್ಟು ಮಾಡ್ತೀನಿ. ಆದರೆ ನನಗಿರೋದು ಒಂದೇ ತೊಂದರೆ...."

"ಏನು?"

"ನಾನು ನಾಗರವಳ್ಳೀಲಿ ಇರೋಲ್ಲ. ಇವತ್ತೋ ನಾಳೇನೋ ಅನುರಾಧಪುರಕ್ಕೆ ಹೊರಟುಹೋಗ್ತೀನಿ. ನನ್ನ ಮನೆ ಮಠ ಇರೋದೆಲ್ಲಾ ಅಲ್ಲಿ. ಇಲ್ಲಿ ಹೇಗೆ ಕಾವಲು ಕಾಯಲಿ ಅಂತ ಯೋಚನೆ ಮಾಡ್ತಾ ಇದೀನಿ."

''ಅವೆಲ್ಲಾ ಸರಿಯೆ. ನಿನಗೂ ತೊಂದರೆ ಇದೇಂತ ನಾನು ಬಲ್ಲೆ. ನನ್ನ ಹಾಗೇ ನೀನೂ ಅಮ್ಮಾವರು ಕೈಯಿಂದ ಇಟ್ಟ ಅನ್ನ ಉಂಡಿದೀಯೋ ಇಲ್ಲವೋ ?"

" ಉಂಡಿದೀನಿ "

" ಆ ತಾಯಿ ಮಹಾತಾಯಿ. ಆಕೆ ಉಸ್ ಅಂದ್ರೆ ಯಾರ ವಂಶವೂ ಉದ್ಧಾರವಾಗೊಲ್ಲ. ಈ ಗ್ರಹ ಯಜಮಾನರಿಗೆ ಗಂಟುಬೀಳೋ ಭಯ ಬಂದಿರೋದು, ನಮ್ಮಿಬ್ಬರಿಂದ. ನಮ್ಮ ಚದುರಂಗದಾಟದ ಹುಚ್ಚು ಇಲ್ಲ ದಿದ್ದರೆ, ಇವೆಲ್ಲಾ ಆಗ್ತಾನೇ ಇರಲಿಲ್ಲ. ಆದ್ದರಿಂದ ನಮ್ಮ ಹುಚ್ಚು, ಆ ಮಹಾತಾಯಿ ಸಂಸಾರ ಸೌಭಾಗ್ಯದ ಪಾಲಿಗೆ ಕಿಚ್ಚಾಗದ ಹಾಗೆ ನೋಡಿ ಕೊಳ್ಳೋ ಜವಾಬ್ದಾರೀನೂ ನಮ್ಮದೇ. ಇಲ್ಲದೇ ಹೋದರೆ, ದೇವರೆದು ರಿಗೆ ನಾವು ಕೈ ಜೋಡಿಸಿ 'ತಪ್ಪು ನಮ್ಮದೇ' ಅಂತ ಒಪ್ಪಿಕೊಳ್ಳ ಬೇಕಾಗುತ್ತೆ. ಅದೆಲ್ಲಾ ಯೋಚನೆ ಮಾಡೇ ನಾನೂ ಹೇಳ್ತಾ ಇದೀನಿ. ನಮ್ಮ ವಂಶ ಉರಿದು ಹೋಗಬಾರದು ಅಂತ ಇದ್ದರೆ, ನಾವು ಈಗಲೇ ಹುಷಾರಾಗಿರೋದು ಮೇಲು. "

ಅಯ್ಯಂಗಾರ್ಯರ ಮಾತನ್ನು ಕೇಳಿ ಚಂದ್ರಯ್ಯನಿಗೆ, ಅವರ ಮಾತು ಗಳು ಎಷ್ಟು ಕಠೋರವೋ, ಅಷ್ಟೇ ಸತ್ಯ ಎಂದು ಮನವರಿಕೆಯಾಯಿತು.

" ಆಯ್ತು ಸ್ವಾಮಿ, ನಿಮ್ಮ ಮಾತು ಮರೆಯೊಲ್ಲ. "

—ಎಂದು ವಚನ ಕೊಟ್ಟ.

" ಹಾಗಿದ್ರೆ ಸರಿ. ನೀನಿನ್ನು ಹಿಂದಕ್ಕೆ ಹೋಗು.... "

" ನಿಮ್ಮನ್ನು ಗಾಡೀವರೆಗೂ ತಲುಪಿಸಿ ಹೋಗ್ತೀನಿ. "

"ಅದೇನೂ ಬೇಡ, ನನ್ನ ಕೈಲಿ ಬಹಳ ದೂರ ನಡೆಯೋಕಾಗಲ್ಲ ಅಂತ ನಾಗರತ್ನಳಿಗೆ ಗೊತ್ತಿದೆ. ನನಗೋಸ್ಕರ ಗಾಡಿ ನಿಲ್ಲಿಸಿಕೊಂಡಿರ್‍ತಾಳೆ. ನೀನು ನನ್ನ ಯೋಚನೆ ಬಿಟ್ಟು ನಾನು ಹೇಳಿದ ವಿಷಯದ ಯೋಚನೆ ಮಾಡು."

—ಎಂದರು ಅಯ್ಯಂಗಾರ್ಯರು.

" ಏನಾಗ್ತದೋ ಆಗಲಿ, ನಿಮ್ಮ ಆಶೀರ್ವಾದ ಒಂದಿರಲಿ."

—ಎಂದ ಚಂದ್ರಯ್ಯ, ಹಿಂದಿರುಗಿ ಹೊರಡಲು ಸಿದ್ಧನಾಗಿ.

" ಸರಿ, ನಾನಿನ್ನು ಬರ್‍ತೀನಿ. "

—ಎಂದು ಹೇಳಿ, ಚಂದ್ರಯ್ಯನನ್ನು ಬಿಟ್ಟು ಅಯ್ಯಂಗಾರ್ಯರು ಬೀಸುಗಾಲು ಹಾಕುತ್ತಾ ಮುಂದೆ ನಡೆದರು.

ಚಂದ್ರಯ್ಯ ನಿಂತಲ್ಲಿಯೇ ನಿಂತು ಅವರು ಮುಂದೆ ಹೋಗುವುದನ್ನೇ ನೋಡುತ್ತಿದ್ದ. ಅಷ್ಟುದೂರ ನಡೆದು, ರಸ್ತೆಯ ತಿರುವನ್ನು ಸುತ್ತಿ, ಅಯ್ಯಂಗಾರ್ಯರು ರಸ್ತೆಯ ಬದಿಯ ತೋಟದ ಬೇಲಿಯ ಹಿಂದೆ ಮರೆಯಾದರು.

ಅವರು ಕಣ್ಣು ಮರೆಯಾದರು—

ಆದರೆ ಅವರು ಆಡಿದ ಮಾತುಗಳು ಮಾತ್ರ, ಆಗಲೂ ಆಡುತ್ತಿದ್ದಂತೆಯೇ ಚಂದ್ರಯ್ಯನ ಕಿವಿಯಲ್ಲಿ ಮೊಳಗುತ್ತಿದ್ದವು.

## ೧೭

ನಾಲ್ಕು ದಿವಸಗಳ ಕಾಲ, ನಾಗರವಳ್ಳಿಯನ್ನು ನಗರದ ಹಾಗೆ ಗಿಜಗುಟ್ಟುವಂತೆ ಮಾಡಿದ ಚದುರಂಗದ ಉತ್ಸವ ಮುಗಿದು ಹೋಗಿ, ನಾಗರವಳ್ಳಿಯಲ್ಲಿ ಉತ್ಸವದ ಮೊದಲು ಎಷ್ಟು ಜನ ಇದ್ದರೋ, ಅಷ್ಟು ಜನರಿದ್ದೂ, ಊರು ಜನಶೂನ್ಯವಾದಂತೆ ಭಣಗುಟ್ಟತೊಡಗಿತು.

ಊರಿನಂತೆಯೇ ಮಾಧವರಾಯನ ಮನೆಯೂ, ಮನವೂ ಶೂನ್ಯವಾಗಿ ಭಣಗುಟ್ಟುತ್ತಿತ್ತು; ಮನೆಗಿಂತಲೂ ಹೆಚ್ಚಾಗಿ ಮಾಧವರಾಯನ ಮನಸ್ಸು.

ಒಂದು ದಿನ, ಕೇವಲ ಒಂದೇ ಒಂದು ದಿನ. ನೀಲಾಸಾನಿಯ ಲಾವಣ್ಯ ಮಧುವನ್ನೀಂಟಿದ ಮಾಧವರಾಯನ ಹೃದಯ, ಗಳಿಗೆಗೊಮ್ಮೆ, ಕ್ಷಣಕೊಮ್ಮೆ ಆ ಸುಖವನ್ನು ನೆನೆದು, ಮತ್ತೆಷ್ಟು ಬೇಗ ಆ ಸುಖವನ್ನು ಪಡೆದೇನು ಎಂದು ಹಾರೈಸುತಿತ್ತು. ದಿನದಿನವೂ ಗಂಜಾಂಗೆ ಹೋಗಿಬರಬೇಕೆಂದು ಅವನ ಹೃದಯ ಹಾತೊರೆಯುತ್ತಿತ್ತು.

ಆದರೆ ಅವನ ಆ ಬಯಕೆಯು ಈಡೇರುವ ದಾರಿಯಲ್ಲಿ, ಬಹುದೊಡ್ಡ ಆತಂಕವಾಗಿ, ಚಂದ್ರಯ್ಯ ನಾಗರವಳ್ಳಿಯಲ್ಲೇ ಕುಳಿತಿದ್ದ.

ಚಂದ್ರಯ್ಯ, ಅಯ್ಯಂಗಾರ್ಯರಿಗೂ ತನಗೂ ನಡೆದ ಸಂಭಾಷಣೆಯ ವಿಷಯವನ್ನಾಗಲೀ, ತಮ್ಮಿಬ್ಬರ ಮನದಲ್ಲಿ ಮೂಡಿದ ಅನುಮಾನದ

ವಿಷಯವನ್ನಾಗಲಿ ಮಾಧವರಾಯನಿಗೆ ಸುಳಿವು ಕೊಡದಿದ್ದರೂ, ಆತನಿಗೆ ತನ್ನ ವಿಷಯದಲ್ಲೇನೋ ಸಂಶಯ ಮೂಡಿದೆ ಎಂಬ ಅಳುಕು ಮಾಧವ ರಾಯನನ್ನು ಬಾಧಿಸುತ್ತಲೇ ಇತ್ತು. ಏನಾದರೊಂದು ಮಾತು ತೆಗೆದು, ಆ ಅಳುಕು ಅಕಾರಣವೋ, ಸಕಾರಣವೋ ಎಂಬುದನ್ನು ಕಂಡುಕೊಳ್ಳ ಬೇಕೆಂಬ ಇಚ್ಛೆ ಮಾಧವರಾಯನಲ್ಲಿ ಆಗಾಗ ಮೂಡಿದರೂ, ತಾನಾಗಿಯೇ ಆ ವಿಷಯದಲ್ಲಿ ಕುತೂಹಲ ವ್ಯಕ್ತಪಡಿಸಿದರೆ, ಪ್ರಾಯಶಃ ಚಂದ್ರಯ್ಯನಲ್ಲಿ ಇದ್ದಿರಬಹುದಾದ ಅನುಮಾನ ಸ್ಥಿರವಾಗಲು ತಾನೇ ಎಲ್ಲಿ ಎಡೆಮಾಡಿ ಕೊಟ್ಟಂತಾಗುತ್ತದೋ ಎಂಬ ಭೀತಿಯಿಂದ, ಮಾಧವರಾಯ ತನ್ನ ಅಳು ಕನ್ನು ನಡೆ-ನುಡಿಯಲ್ಲಿ ಕೊಂಚವೂ ವ್ಯಕ್ತಪಡಿಸದೆ ಜಾಗರೂಕನಾಗಿದ್ದ.

ಏನಾದರೂ ಮಾತು ಬಂದರೆ ಸಂದರ್ಭೋಚಿತವಾಗಿ, ತನ್ನ ಅನು ಮಾನ-ಭೀತಿಗಳ ವಿಷಯವನ್ನು ಪ್ರಸ್ತಾಪಿಸಿ, ಮಾಧವರಾಯನನ್ನು ಎಚ್ಚ ರಿಸಬೇಕೆಂದು ಚಂದ್ರಯ್ಯನೂ ಹೊತ್ತು ಕಾಯುತ್ತಿದ್ದ.

ಹಾಗೇ ಆ ನಿರೀಕ್ಷೆಯಿಂದ ನಾಗರವಳ್ಳಿಯಲ್ಲಿ ಒಂದು ವಾರ ಕಾಲ ಕಳೆದ.

ಆದರೆ ಮಾಧವರಾಯ, ಚಂದ್ರಯ್ಯ ನಾಗರತ್ನಳ ವಿಷಯವಾಗಲಿ, ನೀಲಾಳ ವಿಷಯವಾಗಲಿ ಎತ್ತಲು ಅವಕಾಶವನ್ನೇ ಕೊಡಲಿಲ್ಲ. ಯಾವಾ ಗಲಾದರೊಮ್ಮೆ ಪ್ರಾಸಂಗಿಕವಾಗಿ ಚಂದ್ರಯ್ಯನೇ ಅವರ ಸುದ್ದಿ ಎತ್ತಿ ದಾಗಲೂ—

"ಅವರ ವಿಷಯ ಆಗಿಹೋಯಿತಲ್ಲ ಚಂದ್ರಯ್ಯ, ಇನ್ನೇಕೆ ಅವರ ಸುದ್ದಿ ? ಇನ್ನು ಮೇಲಾದರೂ ಅದನ್ನೆಲ್ಲಾ ಮರೆತು, ಇಷ್ಟು ದಿನ ಕೈಬಿಟ್ಟು ಹೋದ ಮನೆಗೆಲಸಗಳ ವಿಚಾರ ಯೋಚನೆ ಮಾಡೋಣ"

—ಎಂದು ತಾನು ಅವರ ವಿಷಯದಲ್ಲಿ ಅತ್ಯಂತ ನಿರುತ್ಸಾಹಿಯಾಗಿ ರುವಂತೆ ಮಾತಾಡಿ, ಆ ಮಾತುಗಳು ಮುಂದುವರಿಯದಂತೆ ತುಂಡು ಹಾಕು ತ್ತಿದ್ದ.

ಮಾಧವರಾಯ ಆ ರೀತಿ ಮಾತಾಡಿದಾಗ, ಒಮ್ಮೊಮ್ಮೆ ಚಂದ್ರಯ್ಯ ನಿಗೆ, ಮಾಧವರಾಯನ ವಿಷಯದಲ್ಲಿ ತಾನೂ ಅಯ್ಯಂಗಾರ್ಯರೂ ಪಟ್ಟ ಅನುಮಾನ ವಿನಾ ಕಾರಣವಾದುದೇನೋ ಎಂದು ಅನಿಸಿದರೂ, ಆತನಿಗೆ ಅಯ್ಯಂಗಾರ್ಯರ ಬುದ್ಧಿತೀಕ್ಷ್ಣತೆಯಲ್ಲಿದ್ದ ನಂಬಿಕೆ, ಹಾಗೂ ಮಾಧವ

ರಾಯನಲ್ಲಿ ಒಮ್ಮೊಮ್ಮೆ ಅಕಾರಣವಾಗಿ ವ್ಯಕ್ತವಾಗುತ್ತಿದ್ದ ಅಸಹನೆ, ಉದ್ರೇಕಗಳನ್ನು ಕಂಡಾಗ ಮೂಡುತ್ತಿದ್ದ ಸಂದೇಹಗಳಿಂದಾಗಿ, ಮತ್ತೆ ಹಳೆಯ ಅನುಮಾನ ಹೆಡೆಯೆತ್ತಿ ತಾನು ಹುಷಾರಾಗಿರುವುದು ಅಗತ್ಯ ಎನಿಸುತ್ತಿತ್ತು.

ಹಾಗನಿಸಿದಾಗ ಚಂದ್ರಯ್ಯನಿಗೆ ಉಸಿರು ಕಟ್ಟುವಂತೆ ಮಾಡುತ್ತಿದ್ದ ಯೋಚನೆ—

"ಒಂದು ವೇಳೆ ರಾಯರಿಗೆ, ಸೀಲಾಳಲ್ಲಿ ವ್ಯಾಮೋಹವಿರುವುದು ನಿಜವಾಗಿ, ಏನೇ ಎಚ್ಚರಿಸಿದರೂ, ಆ ಎಚ್ಚರಿಕೆಯನ್ನು ಅವರು ಕೇಳದೆ ಹೋದರೆ ಅವರನ್ನು ತಡೆಯಬಲ್ಲ ಶಕ್ತಿ ನನಗಿದೆಯೇ ?

"ನನ್ನ ವಿಷಯ ನಿನಗೇಕೆ ಬೇಕು ? ಬಾಯಿ ಮುಚ್ಚಿಕೊಂಡು ಎಲ್ಲಿರಬೇಕೋ ಅಲ್ಲಿರು' ಎಂದು ಗದರಿಸಿದರೆ ಪ್ರತ್ಯುತ್ತರ ಹೇಳುವ ಬಲವಾದರೂ ನನಗಿದೆಯೇ ? '—ಎಂಬುದು.

ಅಗತ್ಯ ಒದಗಿದರೆ ಹಾಗೆ ಮಾತನಾಡಬಲ್ಲ ನಿಷ್ಠುರತೆ ಮಾಧವರಾಯನಲ್ಲಿದೆ ಎಂಬುದು ಚಂದ್ರಯ್ಯನಿಗೆ ಗೊತ್ತಿತ್ತು. ಖುಷಿ ಸ್ವಭಾವದ, ಧಾರಾಳಿಯಾದ ಮಾಧವರಾಯ ಒಮ್ಮೊಮ್ಮೆ ಅತ್ಯಂತ ನಿಷ್ಠುರನಾಗಿ ವರ್ತಿಸುತ್ತಿದ್ದುದನ್ನು ಚಂದ್ರಯ್ಯನೇ ನೋಡಿದ. ಹಾಗೆ ಸಿಟ್ಟು ಕೆರಳಿದಾಗ, ಮಾಧವರಾಯನ ಕಣ್ಣುಗಳಲ್ಲಿ ಮಾರಿತನ ಹೊಳೆಯುತ್ತಿದ್ದುದನ್ನೂ, ಅವನ ಕೈ ಕತ್ತಿಗೆ ತುಡುಕುವಂತೆ, ಯಾವಾಗಲೂ ಹತ್ತಿರವಿರುತ್ತಿದ್ದ ಅಲಂಕಾರದ ದಂತದ ಹಿಡಿಯ ಮರದ ಕೋಲಿನತ್ತ ಧಾವಿಸುತ್ತಿದ್ದುದನ್ನೂ ಒಂದೆರಡು ಬಾರಿ ಚಂದ್ರಯ್ಯ ಕಂಡು, ತನಗೆ ತಾನೇ—

" ರಾಯರು ಆಡಿದರೆ ಅರಗಿಳಿ ; ಕೆಣಕಿದರೆ ಕೃಷ್ಣ ಸರ್ಪ "

—ಎಂದು ಹೇಳಿಕೊಂಡಿದ್ದ.

ಯಾವಾಗಲಾದರೊಮ್ಮೆ ಪ್ರಕಟವಾಗುತ್ತಿದ್ದ, ಮಾಧವರಾಯನ ಆ ಕರಾಳರೂಪದ ನೆನಪಿದ್ದುದರಿಂದಲೇ, ಚಂದ್ರಯ್ಯನಿಗೆ ಮಾಧವರಾಯನೊಂದಿಗೆ ಸ್ನೇಹಪಿದ್ದರೂ, ಸಲಿಗೆ ತೆಗೆದುಕೊಳ್ಳಲು ಭಯವಾಗುತ್ತಿತ್ತು.

ಈ ಭಯ, ಅಸಹಾಯಕತೆಯ ಭಾವನೆಗಳು, ಚಂದ್ರಯ್ಯನ ನಾಲಿಗೆಗೆ ಕಡಿವಾಣ ಬಿಗಿದು, ಅವನ ಮನದ ಅಳುಕನ್ನು ಬಾಯಿಬಿಟ್ಟು ಆಡದಂತೆ ಮಾಡಿತ್ತು. ಮಾಧವರಾಯ ತಾನಾಗಿಯೇ ಈ ಸುದ್ದಿ ಎತ್ತದೆ

ತಾನೇನೂ ಮಾತನಾಡುವುದು ಸಾಧ್ಯವಿಲ್ಲವೆಂಬುದನ್ನು ಅರಿತುಕೊಂಡ ಚಂದ್ರಯ್ಯನಿಗೆ, ಒಮ್ಮೊಮ್ಮೆ—

"ರಾಯರ ಹತ್ತಿರ ಈ ವಿಷಯ ನಾನಾಗಿಯೇ ಮಾತನಾಡುವುದು ಸಾಧ್ಯವಿಲ್ಲ. ಹೋಗಲಿ. ಅಮ್ಮನವರಿಗಾದರೂ, ಈ ಅನುಮಾನ ತಿಳಿಸಿ ಎಚ್ಚರವಾಗಿರಿ"—ಎಂದು ಹೇಳಬೇಕು ಎಂಬ ಚಪಲ ಮೂಡುತ್ತಿತ್ತು.

ಆದರೆ, ತನ್ನ ಸಂಸಾರ ಜೀವನಕ್ಕೆ ಯಾವ ಬಗೆಯ ಆಪತ್ತಿನ ಭೀತಿಯೂ ಇಲ್ಲವೆಂಬ ಅಚಲ ಭರವಸೆಯಿಂದ, ಯಾವ ಚಿಂತೆಯನ್ನೂ ಕಾಣದ ಮಗುವಿನಂತೆ ಸದಾ ಸುಹಾಸ ನಗುವಿನಿಂದ ಬದುಕಿನಲ್ಲಿ ಬೆಳಕು ಚೆಲ್ಲುವ ಜ್ಯೋತಿಷ್ಮತೀ ಬಳ್ಳಿಯಂತೆ ಇದ್ದ ಶಂಕರಮ್ಮನ ಮುಖವನ್ನು ನೋಡಿದಾಗ, ಆಕೆಯ ಚಿತ್ತದ ಚಿಗುರಿಗೆ, ತನ್ನ ಅನುಮಾನದ ಉರಿ ಹೊತ್ತಿಸಲು ಚಂದ್ರಯ್ಯನ ಮನಸ್ಸೇ ಹೇಸುತ್ತಿತ್ತು.

ಅತ್ತ ಆ ಭಯ, ಅಸಹಾಯಕತೆ. ಇತ್ತ ಈ ಹೇಸಿಗೆಯ ಭಾವನೆ. ಇವೆರಡರ ನಡುವೆ ಸಿಕ್ಕ ಚಂದ್ರಯ್ಯ, ಉರಿ–ದರಿಗಳ ಮಧ್ಯೆ ಸಿಕ್ಕ ಮೃಗದಂತೆ ಮಿಡುಕುತ್ತಾ ದಿನ ದೂಡುತ್ತಿದ್ದ.

ಹಾಗೇ ಒಂದು ವಾರ ಕಾಲ ಕಳೆದು, ಒಂದು ದಿನ, ಆತನು ಅಷ್ಟು ದಿನಗಳಿಂದ ನಿರೀಕ್ಷಿತ, ಅನುರಾಧಪುರದ ಮನೆಯಿಂದ 'ಬುಲಾವ್' ಬಂದು, ಚಂದ್ರಯ್ಯ ನಾಗಲಾಪುರದ ಯೋಗಕ್ಷೇಮವನ್ನು ಬಿಟ್ಟು, ತನ್ನ ಮನೆಯ ಯೋಚನೆ ಮಾಡಬೇಕಾಯಿತು.

ಅನುರಾಧಪುರದಿಂದ ಚಂದ್ರಯ್ಯನಿಗೆ 'ಬುಲಾವ್' ಬಂದಿದೆ ಎಂಬುದನ್ನು ಕೇಳಿದ ನಾಗಭೂಷಣರಾಯರೇ—

"ನೀನು ಹೋಗು ಚಂದ್ರಯ್ಯ, [illegible] ಬಂದ ಹಾಗಿನಂತಿಲ್ಲ"

—ಎಂದು ತಾವೇ ಆ ವಿಷಯವನ್ನು ಪ್ರಸ್ತಾಪ ಮಾಡಿದರು.

"[illegible], ಮಳೆಗಾಲ ಹತ್ತಿರವಾಯಿತು. ಊರಿನಲ್ಲಿ ಗದ್ದೆ ಹದಗೊಳಿಸಲು ವಿಚಾರಿಸಿ ವ್ಯವಸ್ಥೆ ಮಾಡಿಕೊಳ್ಳಬೇಕು. ಗದ್ದೆ ಸರಿಯಾಗಿ ಕೈಗೆ ಬಂದರೆ, [illegible] ವರ್ಷದಷ್ಟು ಕಷ್ಟ ಹಿಂದಕ್ಕೆ ತಾಪತ್ರಯ ಇರೋದಿಲ್ಲ. ಆ ವಿಷಯವನ್ನೇ ಜ್ಞಾಪಿಸಿ, ಮನೆಯವಳು ಆಳು ಕಳಿಸಿದ್ದಾಳೆ."

—ಎಂದು ಚಂದ್ರಯ್ಯ ತಾನು ಅಮರಾಪುರಕ್ಕೆ ಹೋಗಲು, ಬಲ ವತ್ತರವಾಗಿ ಒದಗಿ ಬಂದ ಕಾರಣವನ್ನು ವಿವರಿಸಿ ಹೇಳಿದ.

"ಅಂದರೆ ಹೊರಟೇಬಿಡಬೇಕೆ ?"

"ಹೂ. ನನ್ನದು ಬಹಳ ಪರಾವಲಂಬಿ ಬೇಸಾಯ. ಎತ್ತಿಲ್ಲ, ಗಾಡಿಯಿಲ್ಲ. ಗೊಬ್ಬರ ಗೋಡು ಎಲ್ಲಕ್ಕೂ ಕಂಡವರ ಕೈ ಕಾಯಬೇಕು. ಎದುರಿಗೇ ಇದ್ದು ಮುಂಚಿತವಾಗಿಯೇ ಎಲ್ಲಕ್ಕೂ ಏರ್ಪಾಟುಮಾಡಿಕೊಳ್ಳದೇ ಹೋದರೆ, ಆಮೇಲೆ ಚಿಕ್ಕ ಪುಟ್ಟದಕ್ಕೂ ಪರದಾಡಬೇಕಾಗುತ್ತೆ."

"ಅಂತೂ ನಾನು ನಿನ್ನನ್ನು ನಿಲ್ಲಿಸಿಕೊಂಡಿದ್ದು ನಿನಗೆ ತುಂಬಾ ಅನಾನುಕೂಲವಾಯಿತೇನ್ನು."

"ಹಾಗೇನು ಇಲ್ಲ. ನಿಮಗೋಸ್ಕರ ನಾನು ಇಲ್ಲಿ ನಿಂತನೇ ? ನಾನು ಇಲ್ಲಿ ನಿಂತದ್ದು ನನಗೋಸ್ಕರವಾಗಿಯೇ."

"ಆದರೂ ನಿನ್ನ ಗೃಹಕೃತ್ಯಕ್ಕೆ ತೊಂದರೆಯಾಯಿತು— ಈ ಉತ್ಸವ ಹಚ್ಚಿಕೊಂಡು. ಆಯಿತು—ಆಗೋದು ಆಗಿಹೋಯಿತು. ಈಗ ಅದನ್ನೆಲ್ಲಾ ಅಂದುಕೊಂಡು ಏನು ಫಲ ? ನೀನು ಯಾವುದಕ್ಕೂ ತಾಪತ್ರಯ ಮಾಡಿಕೊಳ್ಳಬೇಡ."

—ಎಂದು ಚಂದ್ರಯ್ಯ ಕೇಳದೆಯೇ ನೂರು ವರಹ ತೆಗೆದುಕೊಟ್ಟು—

"ಇದು ಇಟ್ಟುಕೋ. ಹೆಚ್ಚೇನಾದರೂ ಬೇಕಾದರೆ, ಸಂಕೋಚ ಮಾಡಿಕೊಳ್ಳದೆ ಹೇಳಿ ಕಳಿಸು."

—ಎಂದು ಹೇಳಿದ.

"ದುಡ್ಡು ಕಾಸಿಗೆ ಈಗ ನನಗೇನೂ ತಾಪತ್ರಯವಿಲ್ಲ. ನೀವು ಸಂಭಾವನೆ ಅಂತ ಕೊಟ್ಟರೋಪೇ ಬೇಕಾದ ಹಾಗಾಗುತ್ತೆ."

—ಎಂದು ಚಂದ್ರಯ್ಯ ಹೇಳಿದರೂ—

"ಆ ದುಡ್ಡನ್ನು ಗೃಹಕೃತ್ಯಕ್ಕೆ ಬಳಸಿ ಕೈ ತೊಳೆದುಕೋಬೇಡ. ನಿನ್ನ ಹೆಂಡತಿಗೆ ಅಷ್ಟು ಒಡವೆ ಮಾಡಿಸಿಡು; ನಾಲ್ಕು ಒಳ್ಳೆ ಸೀರೆ ಕುಬಸ ತೆಗೆದುಕೊಡು—ಬರೋ ಗೌರಿ ಹಬ್ಬಕ್ಕೆ. ನಾವು ಹೊರಗೆ ಮೋಜು ಮಾಡ್ತಾ, ಮನೆಯೋರು ಒಳಗೆ ನವೆಯೋದು ಒಳ್ಳೇದಲ್ಲಾ"

—ಎಂದು ಹೇಳಿ. ಚಂದ್ರಯ್ಯ ಮಾಧವರಾಯನ ವಿಶ್ವಾಸಕ್ಕೆ [illegible]

"ನನ್ನ ಮನೆ, ಹೆಂಡತಿ–ಮಕ್ಕಳು ಅಂದ್ರೆ ಇಷ್ಟು ವಿಶ್ವಾಸ ತೋರಿಸೋ ಮನುಷ್ಯ, ತನ್ನ ಕೈಹಿಡಿದೋರಿಗೆ ಕೇಡು ಅರೀತಾನೆಯೇ? ನನ್ನದೇ ಪಾಪಿ ಅನುಮಾನ''

—ಎಂದುಕೊಳ್ಳುವಂತೆ ಮಾಡಿದ.

ಮಾಧವರಾಯನ ಆ ಔದಾರ್ಯವನ್ನೂ ಮೀರಿಸುವಂತಿತ್ತು ಶಂಕರಮ್ಮನ ಔದಾರ್ಯ.

ಚಂದ್ರಯ್ಯ ಊರಿಗೆ ಹೊರಡುತ್ತಾನೆ ಎಂಬುದನ್ನು ತಿಳಿದ ಶಂಕರಮ್ಮ ಉತ್ಸವಕ್ಕಾಗಿ ರಾತ್ರಿರಾತ್ರಿಯಾಗಿ ಮಾಡಿ, ಮನೆಯಲ್ಲಿ ಮಿಕ್ಕ ಹಪ್ಪಳ ಸಂಡಿಗೆ ಅವಲಕ್ಕಿ, ಒಬ್ಬಟ್ಟು, ರವೆಗಳನ್ನು ಕಟ್ಟಿಕೊಟ್ಟು, ಚಂದ್ರಯ್ಯನ ಮಕ್ಕಳಿಗಾಗಿ ಬಗೆಬಗೆಯ ತಿಂಡಿಗಳನ್ನು ಮಾಡಿ, ಅದೇ ಸಾಲದೆಂಬಂತೆ, ಚಂದ್ರಯ್ಯನ ಹೆಂಡತಿಗೆ ಕೊಡಬೇಕೆಂದು ತನ್ನ ಉಡುಗೊರೆಯಾಗಿ, ಎರಡು ಸೀರೆ, ಎರಡು ಖಣ ಕೊಟ್ಟಳು.

ಅದೆಲ್ಲವನ್ನೂ ನೋಡಿ ಚಂದ್ರಯ್ಯನಿಗೆ ಬಾಯಿಕಟ್ಟಿ ಹೋದಂತಾಯಿತು.

"ಇದೆಲ್ಲಾ ಏನಮ್ಮಾ! 'ಉಂಡೂ ಹೋದರು, ಕೊಂಡೂ ಹೋದರು' ಎಂಬ ಗಾದೆ ನಿಜ ಮಾಡೋಕಾ? ಈಗೇನು ಮನೇಲಿ ಮದುವೆ, ಮುಂಜಿ ಆಯ್ತೂಂತ ಹೆಂಡತಿ ಮಕ್ಕಳಿಗೆಲ್ಲಾ ಉಡುಗೊರೆ ಕೊಡ್ತೀರ."

—ಎಂದು ಚಂದ್ರಯ್ಯ ಹೇಳಿದಾಗ—

"ಅವರೂ ನೀನೂ ನಡೆಸಿದ ಚದುರಂಗದ ಹಬ್ಬ ಯಾವ ಮದುವೆ–ಮುಂಜೀಗೆ ಕಡಿಮೆಯಾಗಿತ್ತು ಹೇಳು. ಅದನ್ನೆಲ್ಲಾ ಮುಂದೆ ನಿಂತು ನಡಿಸಿದೋನು ನೀನು ಚಂದ್ರಣ್ಣ. ನಿನಗೆ ಕೊಡೋದು ಅವರು ಕೊಟ್ಟರೆ, ತಂಗೀಗೆ ಕೊಡೋದು ನಾನು ಕೊಡಬೇಕೋ ಬೇಡವೋ? ಮದುವೆಯಾದೋರಿಗೆ ಒಂಟಿ ಉಡುಗೊರೆ ಕೊಡಲೂ ಬಾರದಂತೆ, ತೆಗೆದುಕೊಳ್ಳಲೂ ಬಾರದಂತೆ. ಹಾಗಂತ ಶಾಸ್ತ್ರ ಹೇಳಿದೆಯಂತೆ. ಅದಕ್ಕೇ ಕೊಟ್ಟೆ."

—ಎಂದು ಶಾಸ್ತ್ರದ ಮಾತಾಡಿ, ಚಂದ್ರಯ್ಯ ಪ್ರತ್ಯುತ್ತರ ಕೊಡದಂತೆ ಮಾಡಿದಳು ಶಂಕರಮ್ಮ.

"ಶಂಕರಕ್ಕ, ನಿನ್ನ ಮಾತಿಗೆ ಉತ್ತರ ಕೊಟ್ಟು, ಬಾಯಿ ಮುಚ್ಚಿಸೋ ಶಕ್ತೀನ ದೇವರು ನನಗೆ ಕೊಟ್ಟಿಲ್ಲ. ನೀವಿಬ್ಬರೂ ಗಂಡ ಹೆಂಡತಿ ಸೇರಿ

ಕೊಂಡು ಏನೇನು ಚಾಕ್ರೀರೋ ಮಾಡಿ. ಅಂತೂ ಸ್ನೇಹಿತನಾಗಬೇಕೂಂತ ಬಂದೋನ್ನ, ವಿಶ್ವಾಸದ ಬೀತ ಕೊಟ್ಟು ಆಳು ಮಾಡಿಕೊಂಡು ಬಿಟ್ರಿ. ನಾನು ನಿಮ್ನ ಕೇಳಿಕೊಳ್ಳೋದಿಷ್ಟೆ ಶಂಕರಕ್ಕ—ಯಾವ ಗಳಿಗೇಲಿ ಬೇಕಾದ್ರೂ, ನನ್ನ ತಲೆ ಕೊಟ್ಟು ನಿಮ್ಮ ಸೇವೆ ಮಾಡೋಕೆ ನಾನು ಸಿದ್ಧ. ಯಾವಾಗ ಬೇಕಾದರೂ ಹೇಳಿ ಕಳಿಸು."

—ಎಂದು ಹೇಳಿದ ಚಂದ್ರಯ್ಯ.

"ನಾನು ದೇವರನ್ನ ಯಾವಾಗಲೂ ಬೇಡೋದು ಏನು ಗೊತ್ತೆ ಚಂದ್ರಣ್ಣ ?"

''ಏನು ಶಂಕರಕ್ಕ ?''

"ನಮ್ಮ ಅಗತ್ಯಕ್ಕೆ ಬೇರೆಯೋರು ತಲೆ ಕೊಡುವಂಥ ಪ್ರಸಂಗ ಯಾವಾಗಲೂ ತರಬೇಡ ಅಂತಾಲೇ ನಾನು ದೇವರನ್ನು ಬೇಡೋದು."

"ನಾನು ಬೇಡೋದೂ ಅಷ್ಟೆ ಶಂಕರಕ್ಕ. ಆದರೂ ಏನೇ ಸಮಯ ಬಿದ್ದರೂ, ನಿನ್ನ ಗುಲಾಮನಾಗಿ ದುಡಿಯೋಕೆ ನಾನಿದೀನಿ ಅಂತ ಅನ್ನೋದನ್ನ ಮರೀಬೇಡ."

"ನಿನ್ನ ವಿಶ್ವಾಸ ತೋರಿಸೋಕೆ ನಮಗೆ ಅಂಥ ಸಂದರ್ಭ ಬರಬೇಕೂಂತ ಕೋರ್‍ತಿಯಾ ?"

" ಛೆ, ಛೆ, ದೇವರಾಣೆಗೂ ಹಾಗಲ್ಲ. ನಾನು ಬೇಡೋದು 'ದೇವರೆ, ಇವರ ಸಂತೋಷಕ್ಕೆ ಸೇವೆ ಮಾಡೋ ಸಂದರ್ಭ ನನಗೆ ಒದಗಿಸಿ ಕೊಡು' ಎಂತ."

"ನೀನಷ್ಟು ಬೇಡಿಕೊಂಡ್ರೆ, ಇವತ್ತಲ್ಲ ಇನ್ನು ಹತ್ತು ವರುಷಕ್ಕೆ ದೇವರು ನಮಗೂ, 'ಬಂದು ದುಡಿ' ಅಂತ ಹೇಳೋ ಅವಕಾಶ ಕೊಟ್ಟೇ ಕೊಡ್ತಾನೆ. ಈಗಿಷ್ಟು ಮಾತಾಡ್ತೀಯಲ್ಲಾ—ನಾಳೆ ಅಂಥ ಹೊತ್ತು ಬಂದಾಗ ಅದು ಹೇಗೆ ದುಡಿತೀಯೋ ನಾನು ನೋಡ್ತೀನಿ. ಆಗ ಸರಿಯಾಗಿ ಚಾಕರಿ ಮಾಡದೆ ಹೋದ್ರೆ ನನ್ನ ಕೈಲಲ್ಲ, ನನ್ನ ಮಗನ ಕೈಲಿ ಕಿವಿ ಹಿಂಡಿಸಿಕೊಳ್ಳಬೇಕಾಗುತ್ತೆ. ಹುಷಾರಾಗಿರು."

—ಎಂದು ನಗುತ್ತಾ ಹೇಳಿದಳು ಶಂಕರಮ್ಮ.

ಆ ಕಾಲ ಬರಲಿ, ಇರೋ ಕಿವೀ ಜೊತೇಗೆ, ಇನ್ನೆರಡು ಕಿವಿ ತಗ್ಲಿಸಿಕೊಂಡು ಬರ್‍ತೀನಿ."

—ಮಾಧವರಾಯನ ಸಾವಿಗೆ ತನ್ನ [illegible] ಹೇಳಿದಳು ಶಂಕರಮ್ಮ.

"ಅದಕ್ಕೇ ಚಂದ್ರ[illegible] ಇನ್ನೊಂದು [illegible] ದಿನ ಇದ್ದು ಹೋಗೋಣಂತ ಹೇಳಿದೆ. ಅವನಿಗೆ [illegible]"

"ಹೋಗ್ದೆ ಇನ್ನೆಷ್ಟು ದಿನ ಇಲ್ಲಿರೋಕೆ ಸಾಧ್ಯ? ನಮಗೆ ಬೇಜಾರೂಂತ ಅವ ಇಲ್ಲಿ ಕೂತುಬಿಟ್ಟಿರೆ, ಅಲ್ಲಿ ಆತನ ಸಂಸಾರ ನಡೀಬೇಕಲ್ಲಾ..."

"ಅದೂ ನಿಜವೇ. ಅದಕ್ಕೇ ನಾನೂ ಬಲವಂತ ಮಾಡಲಿಲ್ಲ. ಆದ್ರೂ ಈ ಬೇಜಾರು ಅನುಭವಿಸೋದು ಇದೆಯಲ್ಲಾ ಇದು ಬಹಳ ಕಷ್ಟ ಶಂಕರಿ. ಏನುಬೇಕಾದರೂ ಅನುಭವಿಸಬಹುದು, ಈ ಬೇಜಾರು ಮಾತ್ರ ಬೇಡ. ಕೈ ಕಾಲಿಗೆಲ್ಲಾ ಕಬ್ಬಿಣದ ಸರಪಳಿ ಹಾಕಿದ ಹಾಗಾಗಿದೆ—"

"ಹೂ, ಹಾಗೇ ಅನಿಸುತ್ತೆ"

"ಅದಕ್ಕೇ ನಾನೊಂದು ಯೋಚನೆ ಮಾಡಿದೀನಿ ಶಂಕರೀ...."

"ಏನು?"

"ನೀನೂ ಬರೋದಾದ್ರೆ ಹೇಳು....ಎಲ್ಲಿಯಾದರೂ ಎರಡು ದಿನ ಊರು ಬಿಟ್ಟು ಹಾಯಾಗಿ ಕಾಲ ಕಳೆದು ಬರೋಣ."

"ನೀವು ಬೇಕಾದ್ರೆ ಹೋಗಿ ಬನ್ನಿ."

"ನೀನು...."

"ಸದ್ಯ....ಇಷ್ಟು ದಿನದಿಂದ ಹರಡಿಕೊಂಡಿದ್ದ ಮನೇನ ಇನ್ನೂ ಅಚ್ಚುಕಟ್ಟೇ ಮಾಡಿಲ್ಲ. ಈಗಿರೋ ಹಾಗೇ ಮನೆ ಬಿಟ್ಟು ಹೋದರೆ ಓಡೊಕ್ಕಲು ಅಂತ ನಗ್ತಾರೆ. ಎರಡು ದಿನ ಎಲ್ಲಿಗಾದ್ರೂ ಹೋಗಿ ನಿಮ್ಮ ಬೇಜಾರು ಕಳಕೊಂಡು ಬನ್ನಿ...."

"ನಿನಗೆ ಈಗಲೇ ಬೇಜಾರಾಗಿದೆ....ಇನ್ನು ನಾನು ಹೊರಟುಹೋದರೆ, ನಿನಗೆ ಇದ್ದದ್ದೂ ಬೇಜಾರಾಗೊಲ್ವೇ?

"ಹೆಣ್ಣು ಹೆಂಗಸು, ನನಗೆಂಥ ಬೇಜಾರು. ಬೆಳಿಗ್ಗೆ ಎಲ್ಲಾ ಮನೆಗೆಲಸ ಮಾಡಿಕೊಂಡು, ಸಾಯಂಕಾಲ ದೇವಸ್ಥಾನಕ್ಕೆ ಹೋಗಿ ಪುರಾಣ ಕೇಳಿಕೊಂಡು ಬಂದ್ರೆ ಎಲ್ಲಾ ಬೇಜಾರೂ ಕಳೆದುಹೋಗುತ್ತೆ."

"ಹಾಗಾದ್ರೆ, ನಾನು ಹೋಗಿ ಬರಲೆ.....

"ಖಂಡಿತ ಹೋಗಿ ಬನ್ನಿ....ಎಲ್ಲಿಗೆ ಹೋಗ್ತೀರಾ?"

"ಎಲ್ಲೀಂತ ಯೋಚನೆ ಮಾಡಿಲ್ಲ. ದೂರಬಾರ ಹೋಗೋಕೆ ಇದು ಸಮಯವಲ್ಲ. ಎರಡು ದಿನ ಪಟ್ಟಣಕ್ಕೆ ಹೋಗಿ, ಅಯ್ಯಂಗಾರ್ಯರ ಜೊತೇಲಿ ಕಾಲ ಕಳೆದು ಬರೋಣಾಂತ ಇದೀನಿ. ಅದಕ್ಕೇ ನಿನ್ನನ್ನು ಕರೆದದ್ದು...."

"ನನಗೂ ಪಟ್ಟಣಕ್ಕೆ ಹೋಗಿ ಬರಬೇಕೂಂತ ಆಸೆ ಇದೆ."

"ಹಾಗಾದರೆ ಬರ್ತೀಯಾ?"

"ಈಗ ಬೇಡ. ನನಗೆ ಪಟ್ಟಣದಲ್ಲಿ ನಡೆಯೋ ದಸರಾ ಉತ್ಸವ ನೋಡಬೇಕೂಂತ ಆಸೆಯಿದೆ. ಆಗ ಬರ್ತೀನಿ. ಈಗ ನೀವು ಒಬ್ಬರೇ ಹೋಗಿ ಬನ್ನಿ."

—ಎಂದಳು ಶಂಕರಮ್ಮ.

ಶಂಕರಮ್ಮ ಅಷ್ಟು ಹೇಳಿದುದೇ ಸಾಕೆಂದು, ಮಾಧವರಾಯ, ಮರುದಿನವೇ ಪಟ್ಟಣಕ್ಕೆ ಹೊರಡಲು ಸಿದ್ಧತೆಗಳನ್ನು ಆರಂಭಿಸಿದ.

ನಾಗರವಳ್ಳಿಯನ್ನು ಬಿಟ್ಟ ಗಳಿಗೆಯಿಂದ ಗಾಡಿಯ ಕುದುರೆಗಳನ್ನು ನಾಗಾಲೋಟದಿಂದ ಓಡಿಸಿ, ಎರಡು ದಿನಗಳ ಪ್ರಯಾಣವನ್ನು ಒಂದೂವರೆ ದಿನದಲ್ಲೇ ಮುಗಿಸಿ ಮಾಧವರಾಯ ಗಂಜಾಂ ಅನ್ನು ಸೇರಿದ.

## ೧೯

ಹೇಳದೇ ಕೇಳದ ಇದ್ದಕ್ಕಿದ್ದಂತೆ ಮನೆಬಾಗಿಲಿಗೆ ಬಂದ ಮಾಧವ ರಾಯನನ್ನು ಕಂಡು, ನಾಗರತ್ನಳಿಗೆ ಆಶ್ಚರ್ಯವಾದಷ್ಟೇ ಸಂತೋಷವೂ ಆಯಿತು. ಅದರೊಂದಿಗೆ ಆಕೆಯ ಮನಸ್ಸಿನಲ್ಲಿ ಮೂಡಿದ ಅನುಮಾನವೂ ಮಾಯ ವಾಯಿತು.

ತಾನು, ಮಾಧವರಾಯನೊಂದಿಗೆ ದಿನಗಳನ್ನು ಕಳೆಸಲು ಮಾಡಿದ ಪ್ರಯತ್ನ, ಅಯ್ಯಂಗಾರ್ಯರಿಗೆ ಇಷ್ಟವಿಲ್ಲವೆಂಬುದು ನಾಗರತ್ನಳಿಗೆ ಸ್ಪಷ್ಟವಾಗಿತ್ತು.

ನೀಲು ಚದುರಂಗದಾಟದ ಸಮಯದಲ್ಲಿ ಮಾಧವರಾಯನತ್ತ ಕಣ್ಣು ಹಾಯಿಸಿದುದನ್ನೇ ಕಂಡು ಕಿಡಿಕಿಡಿಯಾದ ಅಯ್ಯಂಗಾರ್ಯರು, ಪಟ್ಟಣಕ್ಕೆ ಹಿಂತಿರುಗಿದ ಬಳಿಕ, ತಮ್ಮ ಅಭಿಪ್ರಾಯವನ್ನು ಇದ್ದದ್ದು ಸ್ಪಷ್ಟಗೊಳಿಸಿ—

"ಮಾಧವರಾಯನತ್ತ ನೀನಾಗಲಿ, ನೀಲಾ ಆಗಲಿ ಬಳಿ ಬೀಸುವುದು ನನಗೆ ಖಂಡಿತವಾಗಿಯೂ ಇಷ್ಟವಿಲ್ಲ. ಹಾಗೇನಾದರೂ ಆದರೆ ಸಹಿಸುವುದೂ ಇಲ್ಲ."

—ಎಂದು ಖಡಾಖಂಡಿತವಾಗಿ ಹೇಳಿದ್ದರು.

ನಾಗರತ್ನ ಅವರ ಮಾತನ್ನು ಪ್ರತಿಭಟಿಸಿ

"ನೀಲಾ ಅಂಥಹುಡುಗೀಗೆ ಗಿರಾಕಿಗಳನ್ನ ಹುಡುಕಿಸೋಕೆ ನಾನು ಊರು ಕೇರಿ ಹುಡುಕಿಕೊಂಡು ಅಲೀಬೇಕೆ? ಮನೆ ಬಾಗಿಲಿಗೇ ನೂರು ಜನ ಬಂದು, ಅವಳುಪ್ಪಕ್ಕೂ ಸುಮ್ಮನೆ ಗೆಜ್ಜೆಪೂಜೆ ಮಾಡಿಕೊಂಡು ಹೋಗೋಕೆ ಕಾದಿರುವಾಗ, ಕಂಡು ಕಂಡೋರ ತಲೆಗೆ ಅವಳನ್ನ ಕಟ್ಟೋಕೆ ನನಗೇನು ತೆವಲು: ಏನೋ ನಿಮಗೆ ಬೇಕಾದವರಲ್ಲಂತ ಅವಳನ್ನ ಅಲ್ಲಿಗೆ ಕರೆದುಕೊಂಡು ಹೋದೆ. ಅದೇ ನನ್ನ ತಪ್ಪು?"

—ಎಂದಿದ್ದಳು.

"ಅದು ನಿನ್ನ ತಪ್ಪಲ್ಲ. ಅವರು ಒಬ್ಬರನ್ನೊಬ್ಬರು ನೋಡಿ ನಕ್ಕದ್ದು?"

"ಅದಕ್ಕೂ ನನಗೂ ಏನು ಸಂಬಂಧ? ಸಾವಿರ ಜನರ ಎದುರಿಗೆ ನಿಂತಿರೋ ಹುಡುಗೀನ ನೀವು ನೋಡಬೇಡಿ ಅಂತ ಸಾಹುಕಾರರಿಗೆ ಕಣ್ಣು ಕಟ್ಟಾ ಹಾಕೋಕೆ ಶಕ್ತಿ ನನಗಿದೆಯೆ? ಅವರು ನೋಡಿದಾಗ ಇವಳೂ ನೋಡಿರಬಹುದು, ನಕ್ಕಿರಬಹುದು. ಅದಕ್ಕೆಲ್ಲಾ ನಾನೆಲ್ಲಿ ಕಾವಲು ಕಾಯಲಿ?"

"ಇಲ್ಲಿ ನೋಡು ನಾಗರತ್ನ, ಅಪ್ಪನಿಗೆ ಟೋಪಿ ಕಲಿಸೋ ವಿದ್ಯೆ ನನ್ನ ಹತ್ತಿರ ತೋರಿಸಬೇಡ. ನಿನ್ನ ಕುಮ್ಮಕ್ಕು ಇಲ್ಲದೆಯೋದರೆ ನೀಲಾ ನಗೋದು ಕಣ್ಣು ಅತ್ತಿತ್ತ ತಿರುಗಿಸೋಕೂ ಅವಳಿಗೆ ಧೈರ್ಯ ಇಲ್ಲ. ಇವತ್ತೇನು, ಈಗ ಒಂದು ವರ್ಷದ ಕೆಳಗೆ, ಅವಳು ನೃತ್ಯ ಕಲಿಯೋಕೆ ಮೊದಲು, ಕಿಟಕೀಲಿ ನಿಂತು ಯಾರನ್ನೋ ನೋಡಿದಳಂತ, ನೀನೇ ಅವಳ ಬೆನ್ನು ಹಸಿರುಗಟ್ಟೋ ಹಾಗೆ ಹೊಡೆದದ್ದು ನನಗಿನ್ನೂ ಮರೆತುಹೋಗಿಲ್ಲ. ಅದಾದ ಮೇಲೆ ಎಷ್ಟೋ ಸಲ, ನಾನೂ ಅವಳನ್ನ ಗುಡಿಯ, ತೇರಿನ ಸಮಯದಲ್ಲಿ ನೋಡಿದೀನಿ. ಸಾವಿರ ಜನ ಅವಳ ಕಡೆ ನೋಡಿದ್ರೂ ಅವಳ ಕಣ್ಣು ನೆಲದ ಮೇಲಿರುತ್ತೆ ವಿನಾ, ಜನಾನ ನೋಡೋದಿರಲಿ. ತಲೆ ಮೇಲಕ್ಕೆತ್ತಿ

ಆಕಾಶ ಕೂಡಾ ನೋಡೋದಿಲ್ಲ. ಅವಳಿಗೆ ನಿನ್ನ ಭಯ ಎಷ್ಟಿದೆ ಅನ್ನೋದನ್ನ ನಾನು ಚೆನ್ನಾಗಿ ಬಲ್ಲೆ. ಆದ್ದರಿಂದ ನೀನು ಕಾಣದೆ, ನಿನಗೆ ತಿಳೀದೆ ನೀಲಾ ರಾಯರನ್ನು ನೋಡಿ ನಕ್ಕಳು ಅಂದರೆ, ನಾನಲ್ಲ, ನನ್ನ ನೆರಳು ಕೂಡಾ ನಂಬೋದಿಲ್ಲ. ಅದಕ್ಕೇ ಈ ಚಾಟೂಕಿ ಎಲ್ಲಾ ನನ್ನ ಹತ್ತಿರ ತೆಗೀಬೇಡಾಂತ ಹೇಳಿದ್ದು."

"ಹೋಗ್ಲಿ....ಮಾತಿಗೆ ಮಸಲಾ ನಿಮ್ಮ ಮಾತು ನಿಜಾಂತಲೇ ಇಟ್ಕೊಂಡ್ರೂ, ಅದ ತಪ್ಪೇನು? ನೀಲಾ ಚೆನ್ನಾಗಿಲ್ವೇ ಅಥವ ಮಾಧವರಾಯರಿಗೆ ಸುಖಪಡೋ ಪ್ರಾಯ ಮಿಕ್ಕುಹೋಗಿದೆಯೋ? ಬ್ರಹ್ಮ ಅವರವರು ಜೊತೆಯಾಗಿರೋದು ಬರೆದಿದ್ರೆ ಇದ್ದುಕೊಂಡು ಹೋಗಲಿ: ಅದೇನು ಆಗಬಾರದ ಸಂಬಂಧಾನೇ?"

"ಬ್ರಹ್ಮ ಗಂಟುಹಾಕೋದನ್ನ ತಪ್ಪಿಸೋಕೆ ಯಾರಿಂದಲೂ ಸಾಧ್ಯವಿಲ್ಲ. ಆದರೆ ನೀನು ಗಂಟುಹಾಕೋದನ್ನ ತಪ್ಪಿಸೋಕೆ ಸಾಧ್ಯವಿದೆ, ನಾಗರತ್ನ. ಹಾಗೇನಾದ್ರೂ ಆದರೆ, ಅದನ್ನ ಮುರಿಯೋಕೆ ನಾನು ಸಿದ್ಧವಾಗಿದೀನಿ."

"ಅದೇನು ನಿಮಗಷ್ಟು ಹಟ? ನೀಲಾ ಏನಾದ್ರೂ ನಿಮಗೆ ವಿಷ ಇಟ್ಟಿದಾಳೆಯೇ?"

"ಇಲ್ಲ."

"ಅಥವಾ ಅವಳಿಗೆ ನೀವು ಯಾರನ್ನಾದರೂ ನೋಡಿದೀರ...."

"ಈ ಜನ್ಮದಲ್ಲಿ ಅದೊಂದು ಪಾಪಾನೇ ನಾನು ಮಾಡದೆ ಇರೋದು."

"ನೀವು ಹೀಗೆ ಮಾತಾಡಿದ್ರೆ ಅದಕ್ಕೆ ನಾನೇನು ಹೇಳಲಿ? ನಿಮ್ಮ ಮನಸ್ಸಿನಲ್ಲಿ ಏನಿದೇಂತ ಸ್ಪಷ್ಟವಾಗಿ ಹೇಳಿಬಿಡಿ."

"ಮೊದಲೇ ಹೇಳಿಬಿಟ್ಟೆನಲ್ಲಾ, ಮಾಧವರಾಯರ ಹೊಸ್ತಿಲ ಮೇಲೆ ನೀಲಾ ನೆರಳು ಬೀಳಕೂಡದು. ಹಾಗೇನಾದ್ರೂ ಆಗಿ, ರಾಯರ ಹೆಂಡತಿ ಶಂಕರಮ್ಮನೋರ ಕಣ್ಣಲ್ಲಿ ಒಂದು ಹನಿ ನೀರು ಕಂಡಿತೋ, ಅವತ್ತು ನನಗೂ ನಿನಗೂ ಕೊನೆ. ಅಷ್ಟೇ ಅಲ್ಲ, ನಾನೇ ನಿನಗೆ ಮೊದಲ ವೈರಿ. 'ಮುದುಕ, ಇವನಿಂದ ಏನಾದೀತು, ಅಂತ ಅಂದುಕೊಂಡಿದೀಯೋ ಏನೋ. ಬೇಕಿದ್ದರೆ ಅದೂ ಒಂದು ಕೈ ನೋಡು...."

—ಎಂದು ತೀವ್ರ ಪ್ರತೀಕಾರದ ಬೆದರಿಕೆಯನ್ನು ಮುಂದೊ
ಹೇಳಿದರು, ಅಯ್ಯಂಗಾರ್ಯರು.

"ನಿಮ್ಮ ಮಾತೇ ನನಗೆ ಅರ್ಥವಾಗೋಲ್ಲ. ನಾನಾಗಲಿ ನೀಲ ಆಗಲಿ ಈಗ ಏನು ಮಾಡಬಾರದ್ದು ಮಾಡಿದೀವೀಂತ ಇಷ್ಟೆಲ್ಲಾ ಕೂಗ ತ್ತೀರಾ ?"

"ನೀವು ಏನು ಮಾಡಿದೀರೋ ಬಿಟ್ಟಿದೀರೋ ಅದು ನಿಮ್ಮ ಅಂ ರಾತ್ಮನಿಗೆ ಗೊತ್ತು, ಆ ಭಗವಂತನಿಗೆ ಗೊತ್ತು. ನಾನಿನ್ನೂ ಏನು ಆಗಿಲ್ಲಾಂತಲೇ ನಂಬಿಕೊಂಡಿದೇನೆ. ಅದಕ್ಕೇ ಬರೀ ಎಚ್ಚರಿಕೆ ಮಾತ ಹೇಳ್ತಾ ಇರೋದು. ನಿಗವಾಗಿರು."

—ಎಂದು ಹೇಳಿ ಹೋಗಿದ್ದರು ಅಯ್ಯಂಗಾರ್ಯರು.

ಅವರ ಆ ಮಾತುಗಳನ್ನು ಕೇಳಿದಾಗ ನಾಗರತ್ನ ಹಾವನ್ನು ಮುಟ್ಟಿ ದಂತಾಗಿ ಗಡಗಡ ನಡುಗಿದ್ದಳು.

ಅವರ ಆ ಬೆದರಿಕೆಯ ಹಿನ್ನೆಲೆಯ ಮೇಲೆ, ನಾಗರವಳ್ಳಿಯಿಂದ ಹೊರಡುವ ಹೊತ್ತಿನಲ್ಲಿ, ಅಯ್ಯಂಗಾರ್ಯರು ತಮ್ಮೆಲ್ಲರನ್ನೂ ಮುಂದೆ ಕಳಿಸಿ ತಾವೊಬ್ಬರೇ ಹಿಂದುಳಿದುದನ್ನು ಯೋಚಿಸಿದಾಗ, ನಾಗರತ್ನಳಿಗೆ ಅಯ್ಯಂಗಾರ್ಯರು,ಮಾಧವರಾಯರು ತನ್ನ ಮನೆಯ ಕಡೆ ಸುಳಿಯುದಂ ಊದಿದಾರೇನೋ ಎಂಬ ಚಿಂತೆ ಮೂಡಿ—

"ಹಾಗಾದರೆ ಏನು ಗತಿ ? ಏನೋ ಆಸೆ ಪಟ್ಟುಕೊಂಡು ಬಂಗಾ ದಂಥ ಹುಡುಗಿಯನ್ನು ಅನ್ಯಾಯವಾಗಿ ಮಾಧವರಾಯನಿಗೆ ಒಪ್ಪಿ ದಂತಾಯಿತಲ್ಲಾ."

—ಎಂದು ಹಳಹಳಿಸತೊಡಗಿದ್ದಳು.

ಆ ಭೀತಿಯಿಂದಲೇ, ಒಂದೆರಡು ಬಾರಿ ನೀಲಾಳನ್ನು—

"ನೀನು ಮಧ್ಯೆ ಬಾಯಿ ಹಾಕಿ ಕೆಲಸ ಎಲ್ಲಾ ಕೆಡಿಸಿಬಿಟ್ಟಿ ಮೂದೇವಿ ಮುಂಡೆ: ಅವತ್ತು ನೀನೇ ಮ್ಯಾಲೆ ಬಿದ್ದು ಮೈ ಒಪ್ಪಿಸ ಹೋಗಿದ್ರೆ, ಅವಯ್ಯನಿಗೆ, ಆನೆ ಕಟ್ಟಿ ಹಿಂದಕ್ಕೆಳಿಸಿದರೂ ನಿನ್ನ ಹತ್ತಿ ಬರದೆ ಹೋಗ್ತಾ ಇರಲಿಲ್ಲ. ಈಗ ಆತನ ಆತುರಾನೂ ತೀರಿ ಹೋಯ್ತು ಮತ್ತೆ ಬರ್ತಾರೇನ್ನಲಿಕ್ಕೆ ಅಡ್ಡವಾಗೋಕೆ, ಇವರೂ ಹುಟ್ಟಿಕೊಂಡರ

—ಎಂದು ಗದರಿಕೊಂಡಿದ್ದಳು.

ನಾಗರತ್ನ ಹಾಗೆ ಹೇಳಿದಾಗ, ನೀಲಾ ಆ ಮಾತನ್ನು ನಂಬದೆ—

''ಯಾರು ಏನೇ ಹೇಳಿದ್ರೂ ಅವರು ಬಂದೇ ಬರ್ತಾರೆ. ನೋಡ್ತಾ ಇರು.''

—ಎಂದು ಧೈರ್ಯ ಬಿಡದೆ ಹೇಳಿದ್ದಳು.

ಈಗ—

ತನ್ನ ಭಯ ಸುಳ್ಳಾಗಿ, ನೀಲಳ ಭರವಸೆಯೇ ಸತ್ಯವಾಗಿ ಮಾಧವ ರಾಯ ತನ್ನ ಮನೆಬಾಗಿಲಿಗೇ ಬಂದುದನ್ನು ಕಂಡು, ನಾಗರತ್ನಳಿಗೆ ಕಳೆದು ಹೋದ ನಿಧಿ ಸಿಕ್ಕಷ್ಟು ಸಂತೋಷವಾಯಿತು.

ಆ ಸಂತೋಷದಿಂದಲೇ ಮಾಧವರಾಯನನ್ನು ಸ್ವಾಗತಿಸಿ, ಒಳಗೆ ಬಂದು ಕುಳಿತ ಮೇಲೆ—

''ಯಾವಾಗ ಊರಿಗೆ ಬಂದಿರಿ ?''

—ಎಂದು ಕೇಳಿದಳು.

''ಇವತ್ತೆ''

''ಎಲ್ಲಿ ಇಳಿದುಕೊಂಡಿದೀರಾ ? ಯಜಮಾನರನ್ನು ನೋಡಿದ್ದಿರಾ ?"

''ಊಹೂ. ಬಂದವನು ನೆಟ್ಟಗೇ ಬಂದೆ. ಇವತ್ತು ಸಂಜೇನೋ, ನಾಳೆಬೆಳಿಗ್ಗೇನೋ ಅಯ್ಯಂಗಾರ್‍ಯರನ್ನು ನೋಡಬೇಕು ಎಂದುಕೊಂಡಿದೇನೆ. ನೀಲಾ ಚೆನ್ನಾಗಿದಾಳೆಯೇ ?''

ಮಾಧವರಾಯ ಶಾಮಯ್ಯಂಗಾರ್‍ಯರನ್ನು ನೋಡಿಲ್ಲವೆಂದು ಹೇಳಿ ದುದು ನಾಗರತ್ನಳಿಗೆ ಧೈರ್ಯವನ್ನು ನೀಡಿತು.

"ಊರು ಬಿಟ್ಟೋರು ನೆಟ್ಟಗೆ ಇಲ್ಲೀಗೇ ಬಂದ್ರಾ? ಹಂಗಾದ್ರೆ, ಸ್ನಾನ, ಊಟ, ಯಾವುದೂ ಇನ್ನೂ ಆಗಿಲ್ಲಾನ್ನಿ....''

''ಅದೆಲ್ಲಾ ಮಾತು ಆಮೇಲಾಗಲಿ, ನೀಲಾ ಹೇಗಿದಾಳೆ?''

ಆತ್ಯಾತುರದಿಂದ ಪ್ರಶ್ನೆ ಮಾಡಿದ ಮಾಧವರಾಯ.

ನೀಲಾಳ ಬಗ್ಗೆ ಆತನಿಗಿದ್ದ ಆತುರವನ್ನು ಕಂಡು ನಾಗರತ್ನಳ ಹೊಟ್ಟೆಗೆ ಹಾಲು ಹುಯ್ದಂತಾಗಿ—

"ಅವಳ ವಿಷಯ ಏನು ಹೇಳಬೇಕೋ. ನನಗೊಂದೂ ಹೇಳೋಕೇ ತೋಚೊಲ್ಲ"—ಎಂದಳು.

"ಏಕೆ ?"

ನೀಲಾ ಮಹಾ ವಿಚಿತ್ರ ಹುಡುಗಿ. ಅವಳಿಗೆ ನೀವು ಏನು ಮೋಡಿ ಮಾಡಿಬಿಟ್ಟಿದೀರೋ ಏನೋ. ನಾಗರವಳ್ಳಿಯಿಂದ ಬಂದಷ್ಟೇ ಬಂದದ್ದು— ಊಟ ಬೇಡ ತಿಂಡಿ ಬೇಡ, ನಿದ್ರೆ ಇಲ್ಲ ನೀರಡಿಕೆಯಿಲ್ಲ—ಸುಮ್ಮನೆ ನವೀತಾ ಇದಾಳೆ. ಗಟ್ಟಿಯಾಗಿ ಏನಾದ್ರೂ ಅಂದ್ರೆ 'ನನ್ನ ನಾಗರವಳ್ಳಿಯಿಂದ ಯಾಕೆ ಕರೆದುಕೊಂಡು ಬಂದೆ' ಅಂತ ಕಣ್ಣಿಂ ತುಂಬಾ ನೀರು ಹಾಕ್ತಾಳೆ. ಇಂಥ ಹುಡುಗೀನ ನೀವೆಲ್ಲಾದ್ರೂ ಕಂಡಿದ್ರಾ, ಕೇಳಿದ್ರಾ .....ಒಂದೇ ದಿನಕ್ಕೆ ಹೀಗೆ ಒಬ್ಬರಿಗೊಬ್ಬರು ಕಚ್ಚಿಕೊಳ್ಳೋದನ್ನ.

—ಎಂದು ತಲೆದೂಗುತ್ತಾ ಹೇಳಿದಳು ನಾಗರತ್ನ.

ನಾಗರತ್ನ ಹೇಳಿದುದನ್ನು ಕೇಳಿ, ನೀಲಳ ಬಗ್ಗೆ ಮಾಧವರಾಯನ ಮೋಹದ ಜ್ವಾಲೆಗೆ ತೈಲವನ್ನು ಎರೆದಂತಾಗಿ, ಆ ಬೇಗೆಯನ್ನು ಸಹಿಸ ಲಾಗದೆ—

"ಈಗ ನೀಲಾ ಎಲ್ಲಿದಾಳೆ ?"

—ಎಂದು ಉಸಿರು ಕಟ್ಟುವಷ್ಟು ವೇಗವಾಗಿ ಕೇಳಿದ.

"ಸರಿಹೋಯ್ತು ಬಿಡಿ. ಅವಳಿಗೆ ಆತುರಾಂದ್ರೆ, ಅವಳ ಹತ್ತರಷ್ಟು ಆತುರಾ ನಿಮಗೆ ! ನಾವೇನಾರ ಅವಳನ್ನತಿಂದುಬಿಟ್ಟಿದೀವೀಂತ ಭಯಾನ ? ....ಅಬ್ಬಬ್ಬ, ಇಷ್ಟು ಆತುರ ನಾನೆಲ್ಲೂ ಕಾಣಲಿಲ್ಲ...."

—ಎಂದು ನಗುತ್ತಾ—

"ನೀಲಾ....ನೀಲಾ...."

—ಎಂದು ಕರೆದಳು.

"ಅವಳನ್ನ ಕರೆಯೋದೇನೂ ಬೇಡ. ಅವಳು ಎಲ್ಲಿದಾಳೆ ಹೇಳು. ನಾನೇ ಅಲ್ಲಿಗೆ ಹೋಗ್ತೀನಿ."

"ಹಂಗಾ ನಿಮ್ಮಿಷ್ಟ, ಅಟ್ಟದ, ಮೇಲಿನ ಕೋಣೆಲಿದಾಳೆ."

—ಎಂದು ಹೇಳಿ ನಾಗರತ್ನ ಮೆಟ್ಟಲಿನ ದಾರಿಯನ್ನು ಮಾಧವರಾಯ ನಿಗೆ ತೋರಿಸಿದಳು.

ಮಾಧವರಾಯ ಮಿಂಚಿನ ವೇಗದಿಂದ ಮಹಡಿಯನ್ನು ಹತ್ತಿ, ಅಲ್ಲಿ ನೀಲಳ ಕೋಣೆ ಯಾವುದಿರಬಹುದೆಂದು ನೋಡಿದ. ಅವನು ಹಾಗೆ

ಕೋಣೆಯಿಂದ ಹೊರಬಂದು, ಮಾಧವರಾಯನನ್ನು ನೋಡಿ, ತಟಕ್ಕನೆ ಅಲ್ಲಿಯೇ ನಿಂತು, ಕಣ್ಣು ಅರಳಿಸಿ ಆತನನ್ನೇ ನೋಡಿದಳು.

ಒಂದು ಕ್ಷಣಕಾಲ ಮಾಧವರಾಯನು ಹಾಗೇ ಅವಳನ್ನು ನೋಡಿ, ಬಳಿಕ ಎರಡನೇ ದಾಪಿನಲ್ಲಿ ತವಿಬ್ಬರ ನಡುವೆ ಇದ್ದ ಅಂತರವನ್ನು ಕಡಿದು—

"ನೀಲಾ... ನೀಲಾ...."

—ಎನ್ನುತ್ತಾ, ಅವಳನ್ನು ಬಿಗಿದಪ್ಪಿ, ತನ್ನ ತೋಳಿನೊಳಗೆತ್ತಿ ಕೊಂಡು, ಕೋಣೆಯೊಳಗೆ ಕರೆದೊಯ್ದು, ಅವಳನ್ನು ಎತ್ತಿಕೊಂಡಿದ್ದ ಹಾಗೇ ಕೋಣೆಯ ಕದವನ್ನು ಕಾಲಿನಿಂದ ಮುಚ್ಚಿ, ನೀಲಳನ್ನು ಕೋಣೆ ಯಲ್ಲಿ ಹಾಸಿಗೆ ಹಾಸಿದ್ದ ಮಂಚದ ಮೇಲೆ ಮಲಗಿಸಿ ಹಾಗೇ ಅವಳನ್ನು ಬಿಗಿದುಕೊಂಡು, ಅವಳು ಯಾವ ಮಾತೂ ಆಡದಂತೆ, ಅವಳ ತುಟಿಗಳನ್ನು ತನ್ನ ತುಟಿಯಿಂದ ಮುಚ್ಚಿ ಅವಳ ಪಕ್ಕದಲ್ಲಿ ಒರಗಿದ.

ನೀಲಳ ದರ್ಶನದಿಂದ ತನ್ನಲ್ಲಿ ಮೂಡಿದ ಪ್ರಣಯಾವೇಗ ತೀರಿ ಹೋಗುವವರೆಗೂ ಮಾಧವರಾಯ ತಾನೂ ಮಾತನಾಡಲಿಲ್ಲ; ನೀಲಳಿಗೂ ಮಾತನಾಡಲು ಅವಕಾಶ ಕೊಡಲಿಲ್ಲ.

ಆ ಬಳಿಕ, ಹಾಗೇ ಎದ್ದು, ಮೃದುವಾದ ದಿಂಬಿನ ಮೇಲೆ, ಹೆರಡಿದ ಕೂದಲಿನ ಹಾಸಿನ ಮೇಲೆ ಮಲಗಿದ ನೀಲಾಳ ಮುಖವನ್ನು ನೋಡುತ್ತಾ—

"ನನ್ನ ಅರಗಿಣಿ ಕ್ಷೇಮವೇ?"

—ಎಂದು ಕೇಳಿದ.

ಆತನ ಪ್ರಶ್ನೆಯನ್ನು ಕೇಳಿ ನೀಲಾ ಮೃದುವಾಗಿ ನಗುತ್ತಾ—

"ಈಗ ನನ್ನ ನೆನಪು ಬಂದಿತೇ?....ಅಬ್ಬಾ! ನಿಮ್ಮದು ಶುದ್ಧ ಬಿರು ಗಾಳಿಯ ಸಹವಾಸ! ನಿಮ್ಮ ಆತುರದಲ್ಲಿ ನಾನು ಬದುಕುತ್ತೇನೋ ಸಾಯು ತ್ತೇನೋ ಅನ್ನುವ ಹಾಗೆ ಮಾಡಿಬಿಟ್ಟಿರಿ. ಎಲ್ಲಾದರೂ ಇಷ್ಟು ಆತುರ ಉಂಟೆ?"

—ಎಂದು ಕೇಳಿದಳು.

"ಆತುರ, ಆದರ ವಿಷಯ ನಿನಗೇನು ಗೊತ್ತು ಹೇಳು. ಹುಚ್ಚು ಹಿಡಿಸೋದು ನಿನಗೆ ಗೊತ್ತು.

"ಪಾಪ! ಅದಕ್ಕೇ ಇಲ್ಲಿಗೆ ಬರಲಿಕ್ಕೆ ಇಷ್ಟು ದಿನ ಬೇಕಾಯಿತೋ

ಏನೋ? ಅದೆಲ್ಲಾ ಬರೀ ನಾಟಕ; ಎದುರಿಗೆ ಬಂದಾಗಲೇ ನಮ್ಮ ನೆನಪು."

"ನೀನು ಹೀಗೆ ಹೇಳ್ತೀಯಾಂತ ನನಗೆ ಗೊತ್ತು. ಆದರೇನು ಮಾಡಲಿ—ನಿನ್ನಷ್ಟು ನಾನು ಸ್ವತಂತ್ರನಾಗಿಲ್ಲ."

"ಹಾಗಾದರೆ ನನ್ನ ಹಣೆಬರಹ ಇಷ್ಟೇ ಅನ್ನಿ...."

—ಮಾಧವರಾಯನ ಮಾತಿನಿಂದ ನಿರಾಶಳಾದಂತೆ ಹೇಳಿದಳು ನೀಲಾ.

"ಅಂದರೆ—?"

"ಒಂದು ದಿನ ಜೊತೆಗಿದ್ದರೆ, ಮತ್ತೆ ಇಪ್ಪತ್ತು ದಿನ ದೂರ ಇರ ಬೇಕು...."

"ಹಾಗಾದರೆ ನಾನು ಬದುಕೋದು ಸಾಧ್ಯವೇ ?"

"ಇಲ್ಲಾಂದ್ರೆ ಏನು ಮಾಡ್ತೀರ ?"

"ನಾನು ಅದನ್ನೇ ಯೋಚನೆ ಮಾಡ್ತಾ ಇದೀನಿ. ಒಂದು ನಾಲ್ಕು ದಿನ ಅವಕಾಶ ಕೊಡು. ಅಷ್ಟರಲ್ಲಿ, ನಾವಿಬ್ಬರೂ ಯಾವಾಗಲೂ ಜೊತೆ ಯಾಗೇ ಇರೋದಕ್ಕೆ ಏರ್ಪಾಟು ಮಾಡ್ತೀನಿ."

"ಇದನ್ನು ಹೇಳಿ ಹೋಗಬೇಕೂಂತ ಬಂದಿದೀರೋ, ಅಥವಾ...."

"ಊಹೂ, ಹಾಗೇನಿಲ್ಲ; ಈ ಸಲ ನಿನ್ನ ಜೊತೇಲಿ ಮೂರು ನಾಲ್ಕು ದಿನ ಇದ್ದು ಹೋಗಬೇಕೂಂತಲೇ ಬಂದಿರೋದು."

"ಸದ್ಯ ಬದುಕಿದೆ! ನಿಮ್ಮ ಆತುರ ಕಂಡು, ಬಂದ ಹಾಗೇ ಹೋಗೋಕೆ ಸಿದ್ಧವಾಗಿ ಬಂದಿದೀರೇನೋಂತ ಅಂದುಕೊಂಡಿದ್ದೆ. ಈಗ ಪ್ರಾಣ ಬಂದಹಾಗಾಯಿತು."

—ತನ್ನ ಸಮೀಪದಲ್ಲಿದ್ದ ಮಾಧವರಾಯನ ಮುಖವನ್ನು ಎದೆಗೊತ್ತಿ ಕೊಂಡು ಹೇಳಿದಳು ನೀಲಾ.

ಅವಳ ವಕ್ಷಸ್ಥಳದ ಬಿಸಿಸೋಂಕಿನಿಂದ, ಮಾಧವರಾಯನೊಳಗಿದ್ದ ಕಾಮಾಗ್ನಿ ಮತ್ತೆ ಪ್ರಜ್ವಲಿಸಿ, ಹಾಗೇ ಅವಳನ್ನು ತನ್ನತ್ತ ಸೆಳೆದುಕೊಳ್ಳಲು ಯತ್ನಿಸಿದ.

"[illegible]"

—ಎಂದು ಬಲವಂತವಾಗಿ ಅವನ ತೋಳತೆಕ್ಕೆಯಿಂದ ಬಿಡಿಸಿ ಕೊಂಡು—

"ನಾನೆಲ್ಲೂ ಓಡಿಹೋಗೊಲ್ಲ. ಎದ್ದು ಸ್ನಾನ, ಫಲಾಹಾರ ಮುಗಿಸಿ." —ಎಂದಳು.

"ನೀನು ಜೊತೇಲಿರೋವಾಗ, ಸ್ನಾನ, ಊಟ, ಫಲಹಾರ ಎಲ್ಲಾ ಯಾರಿಗೆ ಬೇಕು ಹೇಳು ?"

"ಹಾಗಂದ್ರೆ ನನ್ನೇ ತಿಂದು ಹೊಟ್ಟೆತುಂಬಿಸಿಕೊಳ್ಳೋ ಯೋಚನೆಯೋ ನಿಮ್ಮದು !"

—ನೀಲಾ ನಗುತ್ತಾ ಕೇಳಿದಳು.

"ಹಾಗಾದರೂ ಆಗಬಹುದು."

"ಆದರೆ ಈಗ ನಾನು ಅದಕ್ಕೂ ಉಪಯೋಗವಿಲ್ಲ: ನನ್ನನ್ನು ತಿಂದರೂ ನಿಮಗೆ ಅರೆಹೊಟ್ಟೆ ಊಟಾನೇ ಆಗೋದು."

"ಏಕೆ ?"

"ಮತ್ತೆ—ಈಗ ನನ್ನ ಮೈಯಲ್ಲಿ ಏನಿದೆ ? ಬರೀ ಮೂಳೆ, ಚಕ್ಕಳ. ಬೆಳಗಿನಿಂದ ಫಲಾಹಾರವಿಲ್ಲದೆ ಮೈಯೆಲ್ಲಾ ಬತ್ತಿಹೋದಹಾಗಾಗಿದೆ. ನಿಮಗೆ ಬೇಡವಾದರೆ ಹೋಗಲಿ. ನನಗಾದರೂ ಅಷ್ಟು ಫಲಹಾರ ಮಾಡಿ ಬರಲು ಅವಕಾಶ ಕೊಡಿ. ನಾನು ತೃಪ್ತಳಾದ ಮೇಲೆ ಬೇಕಾದರೆ ನೀವು ನನ್ನನ್ನು ತಿಂದು ತೃಪ್ತಿಪಡಬಹುದು."

"ಹಾಗಿದ್ದರೆ ಇನ್ನೂ ನಿನ್ನ ಬೆಳಗಿನ ಉಪಹಾರ ತೀರಿಲ್ಲವೇ ?"

"ಉಹೂ, ಇವತ್ತು ಎದ್ದದ್ದೇ ತಡ."

"ಏಕೆ ?"

"ಮೊದಲು ಹೊತ್ತಿಗೆ ಮುಂಚೆ ಮಲಗಿ, ಹೊತ್ತಿಗೆ ಮುಂಚೆ ಏಳು ತ್ತಿದ್ದೆ."

"ಈಗ ?"

"ರಾತ್ರಿ ನಿದ್ರೆ ಕೆಡಿಸೋಕೆ ನೀವೊಬ್ಬರು ಹುಟ್ಟಿಕೊಂಡಿರಲ್ಲಾ ? ಕಣ್ಣೆದುರಿಗೆ ಇದ್ದರೆ ಒಂದು ತರಹ, ಇಲ್ಲದಿದ್ದರೆ ಒಂದು ತರಹ ನಿದ್ರೆ ಕೆಡಿ ಸುತ್ತೀರ."

—ಮಾಧವರಾಯನ ತುಟಿಯನ್ನು ಹಿಂಡಿ ಹೇಳಿದಳು ನೀಲಾ.

"ಅಂತೂ ನನ್ನಿಂದ ನಿನಗೆ ತುಂಬಾ ತೊಂದರೆ ಎನ್ನು."

"ಇಲ್ಲ ಎಂದರೆ ಸುಳ್ಳು ಹೇಳಿದಹಾಗಾಗುತ್ತೆ."

"ಹಾಗಿದ್ದರೆ ನನಗೆ ಸರಿಯಾದ ಶಿಕ್ಷೆಯೇ ಕಾದಿದೆ."

"ಹೂ."

"ಏನು ಶಿಕ್ಷೆ ಕೊಡುತ್ತೀಯ ?"

"ಏನು ಶಿಕ್ಷೆ ಕೊಡಬೇಕು ಹೇಳಿ. ನೀವು ಕೇಳಿದಂಥ ಶಿಕ್ಷೆ ಕೊಡುತ್ತೇನೆ."

"ಹಾಗಿದ್ದರೆ ಒಂದು ಕೆಲಸ ಮಾಡು ನೀಲಾ. ನನ್ನಿಂದ ನಿನ್ನ ನಿದ್ರೆಗೆ ಭಂಗವಾಯಿತು ತಾನೇ...."

"ಹೌದು."

"ಅದಕ್ಕೆ ಸರಿಯಾದ ಶಿಕ್ಷೆ ಎಂದರೆ—ನಾನು ಇಲ್ಲಿರುವಷ್ಟುದಿನ, ನನಗೆ ಒಂದು ಗಳಿಗೆಯೂ ನಿದ್ದೆ ಮಾಡೋಕೆ ಅವಕಾಶ ಕೊಡಬೇಡ ; ಪೂರಾ ರಚ್ಚು ತೀರಿಸಿಕೊಂಡು ಬಿಡು, ಆಗಬಹುದೇ ?"

—ನೀಲಳ ಸಡಿಲವಾದ ಹೆರಳನ್ನು ತನ್ನ ಕೆನ್ನೆಗೆ ಸವರಿಕೊಳ್ಳುತ್ತಾ, ನಗುತ್ತಾ ಹೇಳಿದ ಮಾಧವರಾಯ.

ಅವನ ಮಾತನ್ನು ಕೇಳಿ, ನೀಲಳು ನಗುತ್ತಾ—

"ಹಾಗೇ ಆಗಲಿ....ಈಗ ಮೊದಲು ಸ್ನಾನಕ್ಕೆ ಏಳಿ. ನಿಮಗೆ ಸ್ನಾನ ಮಾಡಿಸಿ, ಫಲಹಾರ ಮಾಡಿಸಿದ ಮೇಲೇ ನಾನಿನ್ನು ಫಲಹಾರದ ಮುಖ ಕಾಣಬೇಕು. ಎಲ್ಲದಕ್ಕೂ ಕಾಯಿಸಬೇಡಿ. ಅದು ಕೆಟ್ಟ ಅಭ್ಯಾಸ."

—ಎಂದು ನೀಲಾ ಮಂಚದಿಂದ ಮೇಲೆದ್ದು ಜಾರಿದ ತನ್ನ ವಸ್ತ್ರಗಳನ್ನು ಸರಿಪಡಿಸಿಕೊಳ್ಳುತ್ತಾ ಹೇಳಿದಳು.

"ಅಂದ ಹಾಗೆ ಮರತೇ ಬಿಟ್ಟಿದ್ದೆ, ಇಲ್ಲಿ ಬಾ ನೀಲಾ...."

—ಎಂದು ತನ್ನಿಂದ ದೂರ ನಿಂತ ನೀಲಳನ್ನು ಹತ್ತಿರಕ್ಕೆ ಕರೆದ ಮಾಧವರಾಯ.

"ಈಗ ಬೇಡ ಅಂದರೆ.....ಮತ್ತೆ ಆರಂಭಿಸಿದಿರಲ್ಲಾ...."

—ಮಾಧವರಾಯನತ್ತ ಕೆಣಕು ನೋಟದಿಂದ ನೋಡುತ್ತಾ, ಹೇಳಿದಳು ನೀಲಾ

"ಅದಕ್ಕಲ್ಲ, ನಿನಗೆ ಕೊಡಬೇಕೂಂತ ಏನೋ ಒಂದು ಸಾಮಾನು ತಂದಿದ್ದೆ. ನಿನ್ನ ಗದ್ದಲದಲ್ಲಿ ಆ ವಿಷಯನೇ ಮರೆತುಹೋಗಿತ್ತು"

"ನಾನೇ ಅಲ್ಲನೇ ಗದ್ದಲ ಮಾಡಿದ್ದು...."

—ಎಂದು ಹೇಳುತ್ತಾ ನೀಲಾ ಮೆಲ್ಲಗೆ ಅವನ ಬಳಿ ನಡೆದಳು.

ತನ್ನ ಬಳಿ ಸಾರಿದ ನೀಲಳನ್ನು ಹಾಗೇ ತೊಡೆಯ ಮೇಲೆ ಕೂರಿಸಿ ಕೊಂಡು, ತನ್ನ ಅಂಗಿಯೊಳಗಿಟ್ಟುಕೊಂಡಿದ್ದ ಚಿನ್ನದ ಮೊಗ್ಗಿನ ಸರವನ್ನು ಹೊರತೆಗೆದು, ಅದನ್ನು ತಾನೇ ನೀಲಳ ಕತ್ತಿಗೆ ಕಟ್ಟಿ—

"ನಿನ್ನ ಕತ್ತಿಗೆ ಈ ಸರ ಎಷ್ಟು ಚೆನ್ನಾಗಿ ಒಪ್ಪುತ್ತದೆ ಚಿನ್ನಾ...."

—ಎಂದು ಹೇಳಿ, ಅವಳ ತುಟಿಗಳನ್ನು ಚುಂಬಿಸಿ—

"ಈಗ ನಡಿ—ಸ್ನಾನ, ಊಟ ಏನೇನು ಮಾಡಿಸುತ್ತೀಯೋ ಮಾಡಿಸು."

—ಎಂದು ಹೇಳಿದ

"ನೀವು ಸರ ಕೊಟ್ಟಮೇಲೆ ಅದರ ಸಾಲ ತೀರಿಸದೆ ಹಾಗೇ ಹೋದರೆ ಸುಮ್ಮನೆ ಬಿಡುತ್ತೀರಾ ನೀವು...."

—ಎನ್ನುತ್ತಲೇ ನೀಲಾ, ಅವನ ತೊಡೆಯ ಮೇಲಿನಿಂದ ಹಾಸಿಗೆಗೆ ಉರುಳಿ, ಅವನನ್ನು ತನ್ನ ಮೇಲೆ ಎಳೆದುಕೊಂಡಳು.

## ೨೦

ಅತ್ತ ನೀಲಾ—ಮಾಧವರಾಯ ಸರಸ—ಸಲ್ಲಾಪದಲ್ಲಿ ನಿರತರಾಗಿದ್ದಾಗ ಇತ್ತ ನಾಗರತ್ನ ಬೇರೊಂದು ಬಗೆಯ ಚಿಂತೆಗೆ ಬಲಿಯಾಗಿದ್ದಳು.

ಬರುವನೋ ಇಲ್ಲವೋ ಎಂಬ ಚಿಂತೆಗೆ ನಾಗರತ್ನಳನ್ನು ಒಳಗು ಮಾಡಿದ ಮಾಧವರಾಯ ನಾಗರವಳ್ಳಿಯಿಂದ ಬಂದುದು, ಮೊದಲು ನಾಗರತ್ನಳಿಗೆ ಸಂತೋಷಕ್ಕೆ ಕಾರಣವಾಗಿ, ಬಳಿಕ, ಅಯ್ಯಂಗಾರ್ಯರ ಎಚ್ಚರಿಕೆ ನೆನಪಾಗಿ ದೊಡ್ಡ ಭೀತಿಯುಕ್ತ ಚಿಂತೆಗೆ ಕಾರಣವಾಗಿತ್ತು.

ನೀಲಾ—ಮಾಧವರಾಯನ ಸಂಬಂಧಕ್ಕೆ ಅಯ್ಯಂಗಾರ್ಯರು ಅಡ್ಡಿ ಬಂದುದು, ಹೆಡೆ ಎತ್ತಿದ ಕೃಷ್ಣಸರ್ಪವೇ ಅವಳ ಮಾರ್ಗದಲ್ಲಿ ಅಡ್ಡಿ ಬಂದಂತಾಗಿತ್ತು. ಅಯ್ಯಂಗಾರ್ಯರ ವಿಷಯದಲ್ಲಿ ನಾಗರತ್ನಾಗೆ ಅಷ್ಟೊಂದು

ಆ ಭಯಕ್ಕೆ ಅಯ್ಯಂಗಾರ್ಯರು ತನ್ನ 'ಯಜಮಾನರು' ಎಂಬುದೊಂದೇ ಕಾರಣವಾಗಿರಲಿಲ್ಲ. ಸಿಟ್ಟಾದರೆ, ಅವರ ಕ್ರೋಧ ಎಷ್ಟು ದೂರ ಹೋಗಬಹುದು ಎಂಬುದನ್ನು ಅವಳು ಕಣ್ಣಾರೆ ಕಂಡಿದ್ದಳು, ಕಿವಿಯಾರ ಕೇಳಿದ್ದಳು. ಎಂಥ ಬೆದರಿಕೆಯನ್ನೂ ನಿಜವಾಗಿ ಮಾಡಬಲ್ಲಷ್ಟು ಬಲ ಅವರಲ್ಲಿತ್ತು.

ಅಯ್ಯಂಗಾರ್ಯರಲ್ಲಿದ್ದ ಬಲ ಅವರ ಶ್ರೀಮಂತಿಕೆಯದಲ್ಲ, ಜನಾನುರಾಗದ್ದು.

ಚದುರಂಗದ ಆಟದಲ್ಲಿ ಅತ್ಯಂತ ಪ್ರವೀಣರಾಗಿದ್ದ ರಾಮಯ್ಯಂಗಾರ್ಯರಿಗೆ, ಆ ಪ್ರಖ್ಯಾತಿಯಿಂದಾಗಿ ಎಲ್ಲಕಡೆಯೂ ಪ್ರವೇಶವಿತ್ತು. ದಿವಾನ್ ಪೂರ್ಣಯ್ಯನವರು, ಬಕ್ಷಿ ಶ್ರೀನಿವಾಸರಾಯರು, ಬಾದಾಮಿ ರಘುನಾಥರಾಯರು ಮೊದಲಾಗಿ, ನವಾಬರು, ದಿವಾನರು, ಶ್ರೀಮಂತರು ಸರದಾರರು ಎಲ್ಲರ ಮನೆಯ ಬಾಗಿಲೂ ಅವರಿಗೆ ತೆರೆದಿತ್ತು. ಅಗತ್ಯ ಬಿದ್ದಾಗ ಸ್ವಯಂ ಸುಲ್ತಾನರನ್ನೂ ಸಹ ಕಂಡು ಮಾತನಾಡಿ ಬರುವ ಶಕ್ತಿ ಅವರಿಗಿತ್ತು. ಅವರು ಸಾಮಾನ್ಯವಾಗಿ ತಮಗಿದ್ದ ಈ ಪ್ರಭಾವವನ್ನು, ಸ್ವಂತ ಉಪಯೋಗಕ್ಕಾಗಲೀ, ಯೋಗ್ಯತೆಯಿಲ್ಲದವರ ಉದ್ಧಾರಕ್ಕಾಗಲೀ ಬಳಸುತ್ತಿರಲಿಲ್ಲವಾದುದರಿಂದ, ಅವರ ಮಾತಿಗೆ ಹೆಚ್ಚಿನ ಬೆಲೆಯಿತ್ತು.

ನಗರದ ಶ್ರೀಮಂತರಿಗೆ, ಅಧಿಕಾರಿಗಳಿಗೆ ರಾಮಯ್ಯಂಗಾರ್ಯರಲ್ಲಿ ಎಷ್ಟು ಗೌರವವಿತ್ತೋ, ಸಾಮಾನ್ಯ ಜನರಿಗೆ ಅಷ್ಟೇ ಪ್ರೀತಿಯಿತ್ತು. ಶ್ರೀವೈಷ್ಣವರ ಗುಂಪಿನಲ್ಲಷ್ಟೇ ಅಲ್ಲ, ಸ್ಮಾರ್ತರು ಮೊದಲಾಗಿ ಎಲ್ಲ ಬ್ರಾಹ್ಮಣ ಕೋಮಿನವರೂ ಅಯ್ಯಂಗಾರ್ಯರಲ್ಲಿ ಅಪಾರ ವಿಶ್ವಾಸವನ್ನಿಟ್ಟುಕೊಂಡಿದ್ದರು. ಪೇಟೆಯ ವರ್ತಕರು, ಗರಡಿಯವರು, ಒಕ್ಕಲಿಗರು, ಪರಿವಾರದವರು, ಮುಸ್ಲಿಮರು ಎಲ್ಲರೂ ಅಯ್ಯಂಗಾರ್ಯರನ್ನು 'ಅಣ್ಣಾ' ಎಂದೇ ಸಂಬೋಧಿಸುತ್ತಿದ್ದರು. ಹೀಗೆ ಹಿರಿಯರು–ಕಿರಿಯರು, ಜಾತಿಯವರು–ಪರಜಾತಿಯವರು ಎಲ್ಲರ ಪಾಲಿಗೂ ಅಯ್ಯಂಗಾರ್ಯರು 'ಅಣ್ಣಾ' ಆಗಲು ಕಾರಣ, ಯುಕ್ತ ಸಮಯ ಬಂದಾಗ ಅವರು ಎಲ್ಲರ ಸಹಾಯಕ್ಕೂ, ಕರೆ ಬರಲೆಂದು ಕಾಯದೆ ಧಾವಿಸುತ್ತಿದ್ದುದು.

ಅವರ ಈ ಸರ್ವಜನ ಪ್ರೇಮ, ಸರ್ವಧರ್ಮಾನುರಾಗಕ್ಕೆ, ಗಂಗಾಧರೇಶ್ವರ ದೇವಾಲಯದ ಪ್ರಸಂಗ ಒರೆಗಲ್ಲಾಗಿತ್ತು.

ಮನೆತನದಿಂದ, ಅಧಿಕಾರ ಸೂತ್ರಗಳನ್ನು ಟೀಪುಸುಲ್ತಾನ್ ಸಂಪೂರ್ಣವಾಗಿ ತನ್ನ ಕೈವಶ ಮಾಡಿಕೊಂಡು, ಹೈದರಾಲಿಯಂತೆ ರಾಜಪ್ರತಿನಿಧಿಯಾಗಿ ಆಳದೆ, ಸ್ವಯಂತಾನೇ ಸಾಮ್ರಾಟನೆಂದು ಘೋಷಿಸಿದಾಗ, ಆತನ ನಿಷ್ಠುರ ಇಸ್ಲಾಂ ಧರ್ಮದ ಪ್ರಿಯತೆಯನ್ನು ಅರಿತ ಹಿಂದೂ ಜನ, ತಮ್ಮ ಗುಡಿ ಗುಂಡಾಂತರಗಳಿಗೆ ಯಾವ ಗಳಿಗೆಯಲ್ಲಿ ಏನು ಅಪಾಯ ಬಂದೀತೋ ಎಂದು ಅಂಗೈಯಲ್ಲಿ ಜೀವ ಹಿಡಿದು ಬಾಳಬೇಕಾದಂಥ ಪರಿಸ್ಥಿತಿ ಪ್ರಾಪ್ತವಾಯಿತು.

ಹಿಂದೂ ಮತ, ಹಿಂದೂ ದೇವರು, ದೇವಾಲಯಗಳ ಬಗ್ಗೆ ಟಿಪ್ಪೂ ಸುಲ್ತಾನನಿಗಿದ್ದ ಭಯಂಕರ ತಾತ್ಸಾರದ ವಿಷಯದಲ್ಲಿ ರಾಜಧಾನಿಯ ಜನ ಬಗೆಬಗೆಯ ಕಥೆಗಳನ್ನು ಕೇಳಿದ್ದರು. ದೇವಾಲಯಗಳ ಮೇಲೆ ವಕ್ರದೃಷ್ಟಿ ಬಿದ್ದಾಗ ಸುಲ್ತಾನರ ಕ್ರೋಧ ಎಷ್ಟು ದೂರ ಹೋಗಬಹುದೆಂಬುದಕ್ಕೆ, ಆತ ಪಟ್ಟಣದಲ್ಲಿ ಕಟ್ಟಿಸಿದ ಮಸೀದಿಯ ಅಡಿಗಲ್ಲಾದ ಎಷ್ಟೋ ಶಿಲೆಗಳು ಮೂಕಸಾಕ್ಷಿಯಾಗಿದ್ದವು.

ರಾಜಧಾನಿಯ ಹೊರಗಿನ ವಿಷಯ ಏನಿದ್ದರೂ, ಟಿಪ್ಪುಸುಲ್ತಾನ್, ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿದ್ದ ಯಾವ ದೇವಾಲಯದ ಮೇಲೂ ತನ್ನ ಕ್ರೂರ ದೃಷ್ಟಿಯನ್ನು ಬೀರಿರಲಿಲ್ಲ. ರಂಗನಾಥಸ್ವಾಮಿಯಂತೂ ಆತನ ಪಾಲಿಗೆ ಮನೆದೇವರೇ ಆಗಿದ್ದ. ಆ ಭಕ್ತಿಯಿಂದಲೋ, ಅಥವಾ ರಾಜಧಾನಿಯ ಜನರ ಭಕ್ತಿಗೆ ವಿರುದ್ಧವಾಗಿ ನಡೆದು, ಅವರನ್ನು ಶತ್ರುಗಳನ್ನಾಗಿ ಮಾಡಿಕೊಳ್ಳುವುದು ಅಪಾಯಕಾರಿಯೆಂಬ ದೂರಾಲೋಚನೆಯಿಂದಲೋ—ಹೇಗೋ ಅಂತೂ ಪಟ್ಟಣದಲ್ಲಿದ್ದ ರಂಗನಾಥಸ್ವಾಮಿ ದೇವಾಲಯವೇ ಅಲ್ಲದೆ, ಇತರ ದೊಡ್ಡ ದೇವಾಲಯಗಳಾದ ನರಸಿಂಹಸ್ವಾಮಿ ದೇವಾಲಯ, ಗಂಗಾಧರೇಶ್ವರ ದೇವಾಲಯಗಳು, ಸುಲ್ತಾನರ ಅರಮನೆಗೆ ಅತ್ಯಂತ ಸಮೀಪವಾದ ಸುತ್ತುಪಾಳೆಯದಲ್ಲೇ ಇದ್ದರೂ, ಅವಕ್ಕೆ ಯಾವೊಂದು ಬಗೆಯ ಅಪಾಯವೂ ಒದಗಿರಲಿಲ್ಲ.

ಒಮ್ಮೆ ಇದ್ದಕ್ಕಿದ್ದ ಹಾಗೇ ಗಂಗಾಧರೇಶ್ವರನ ದೇವಾಲಯದ ಮೇಲೆ ಸುಲ್ತಾನರ ಕ್ರೋಧದ ಕಾರ್ಮೋಡ ಕವಿಯಿತು.

ಉಳಿದೆಲ್ಲ ದೇವಾಲಯಗಳಿಗಿಂತಲೂ ಗಂಗಾಧರೇಶ್ವರ ದೇವಾಲಯ,

ಆ ದೇವಾಲಯದ ಗೋಪುರದ ಮೇಲೆ ನಿಂತರೆ ಅರಮನೆಯಲ್ಲಿ ನಡೆಯುವುದನ್ನೆಲ್ಲಾ ನೋಡಬಹುದಾಗಿತ್ತು. ಆ ಸಾಮೀಪ್ಯವೇ ದೇವಾಲಯಕ್ಕೆ ಮುಳುವಾಯಿತು.

ಒಂದು ದಿನ ಇದ್ದಕ್ಕಿದ್ದ ಹಾಗೇ, ಸುಲ್ತಾನನಿಗೆ ಜನಾನಾದವರಿಂದ ಒಂದು 'ಪುಕಾರ್' ಬಂದಿತು—

ಜನಾನಾದ ಸ್ತ್ರೀಯರು ಅರಮನೆಯ ಅಂತಃಪುರದಲ್ಲಿದ್ದ ಕೊಳದಲ್ಲಿ ಸ್ನಾನ ಮಾಡುತ್ತಿದ್ದಾಗ, ನಾಲ್ಕಾರು ಜನ ಬ್ರಾಹ್ಮಣ ಯುವಕರು ಗಂಗಾಧರಸ್ವಾಮಿಯ ದೇವಾಲಯದ ಗೋಪುರವನ್ನು ಹತ್ತಿ ನಿಂತು, ನಗ್ನಾವಸ್ಥೆಯಲ್ಲಿದ್ದ ಅರಮನೆಯ ಸ್ತ್ರೀಯರನ್ನು ಲೇವಡಿಮಾಡಿದರು—ಎಂದು.

ಈ ಮಾತು ಕಿವಿಗೆ ಬೀಳುತ್ತಿದ್ದ ಹಾಗೇ ಟೀಪೂ ಸಿಟ್ಟಿನಲ್ಲಿ ಸಿಡಿಲಾಗಿ ಅಪ್ಪಣೆ ಮಾಡಿದ—

"ಆ ದೇವಾಲಯವನ್ನು ಕಿತ್ತು ನೆಲಸಮ ಮಾಡಿಬಿಡಿ."

ಸುಲ್ತಾನನ ಆಜ್ಞೆಯ ಈ ವಾರ್ತೆ, ಮಿಂಚಿನ ವೇಗದಿಂದ ಕಾಳ್ಗಿಚ್ಚಿನಂತೆ ಪಟ್ಟಣದಲ್ಲಿ ಹರಡಿ, ಪಟ್ಟಣದ ಬ್ರಾಹ್ಮಣ ಸಮಾಜದಮೇಲೆ ಸಿಡಿಲಿನಂತೆ ಎರಗಿತು.

ನಗರದ ಅತ್ಯಂತ ಪ್ರಾಚೀನ ಶಿವಾಲಯಕ್ಕೆ ಇದ್ದಕ್ಕಿದ್ದ ಹಾಗೆ ಒದಗಿದ ವಿಪತ್ತು, ಪಟ್ಟಣದ ಬ್ರಾಹ್ಮಣ ಸಮಾಜವನ್ನೇ ಇಬ್ಭಾಗ ಮಾಡುವ ಸೂಚನೆಗಳು ಕಂಡುಬಂದವು.

ಸುಲ್ತಾನರ ಆಜ್ಞೆಯಿಂದ ಕೆರಳಿದ ಎಷ್ಟೋ ಜನ ಸ್ಮಾರ್ತ ಬ್ರಾಹ್ಮಣರು—

"ಈ ಸುಲ್ತಾನನ ಪಾಶವೀ ಆಜ್ಞೆಗೆ ಶ್ರೀ ವೈಷ್ಣವರ ಪಿತೂರಿಯೇ ಕಾರಣ. ಅವರಿಗೆ ಪಟ್ಟಣದಲ್ಲಿ ಶಿವಾಲಯವಿರುವುದು ಸಹನವಿಲ್ಲ. ಅದಕ್ಕೇ ಸುಲ್ತಾನರಿಗೆ ರಂಗನಾಥಸ್ವಾಮಿಯಲ್ಲಿರುವ ಉತ್ಕಟ ಭಕ್ತಿಯನ್ನು ದುರುಪಯೋಗಪಡಿಸಿಕೊಂಡು, ಗಂಗಾಧರೇಶ್ವರಸ್ವಾಮಿಯ ಮಂದಿರವನ್ನು ನೆಲಸಮ ಮಾಡಿಸಲು ಒಳಸಂಚು ಹೂಡಿದಾರೆ. ದಿವಾನ್ ಪೂರ್ಣಯ್ಯನವರು ಮಾಧ್ವರು. ಅದಕ್ಕೇ ಅವರಿಗೂ ಈ ವಿಷಯದಲ್ಲಿ ಆಸಕ್ತಿಯಿಲ್ಲದೆ ಅವರೂ ಷರೀಕಾಗಿದಾರೆ."

ಎಷ್ಟೋ ಜನ ರಾಜಸ ಸ್ವಭಾವದವರು—

"ನಮ್ಮ ದೇವಾಲಯ ಹೋದ ಬಳಿಕ ನಾವ್ಯಾತಕ್ಕೆ ಬದುಕಿದ್ದೇನು ಸಾರ್ಥಕ. ನಡೆಯೋ ಹೋಗೋಣ ಈ ಶ್ರೀವೈಷ್ಣವರ ಮನೆಗಳಿಗೂ ಬೆಂಕಿ ಹೊತ್ತಿಸಿ. ಗಂಗಾಧರನ ಸಾನ್ನಿಧ್ಯದಲ್ಲೆ ಪ್ರಾಣ ಬಿಟ್ಟುಬಿಡೋಣ. ಹುಟ್ಟಿದ್ದು, ಸತ್ತದ್ದು ಎರಡೂ ಸಾರ್ಥಕವಾಗುತ್ತೆ," ಎಂದು ತೊಡೆತಟ್ಟಿದರು.

ಒಂದರ ಹಿಂದೆ ಒಂದು ಬೆಂಕಿಯ ಅಲೆಗಳಂತೆ ಬಂದ ಈ ದುರ್ವಾರ್ತೆಗಳನ್ನು ಕೇಳಿದ ಶಾಮಯ್ಯಂಗಾರ್ಯರು, ತಾವು ಸುಮ್ಮನಿದ್ದರೆ ಪಟ್ಟಣದಲ್ಲಿ ಬಹು ದೊಡ್ಡ ಹತ್ಯಾಕಾಂಡ ಜರುಗುತ್ತದೆ ಎಂದು ಹೆದರಿ, ಕೆಲವು ಜನ ಅವರ ಶ್ರೀವೈಷ್ಣವ ಮಿತ್ರರು —

"ನೀವೇಕೆ ತಲೆಹಾಕಲು ಹೋಗ್ತೀರಾ ಸುಮ್ಮನಿರಿ. ಈ ಸ್ಮಾರ್ತರು ಬಹಳ ದಂಗೆ ಮಾಡ್ತಾ ಇದಾರೆ. ಅವರಿಗೆ ತಕ್ಕ ಶಾಸ್ತಿ ಆಗಲಿ"

—ಎಂದು ಹೇಳಿದರೂ ಕೇಳದೆ

"ನಿಮ್ಮಂಥವರಿಂದಲೇ ಶ್ರೀವೈಷ್ಣವ ಸಮಾಜಕ್ಕೆ ಈ ಅಪಖ್ಯಾತಿ ಬಂದಿರೋದು."

—ಎಂದು ಅವರ ಮುಖಭಂಗ ಮಾಡಿ, ಸುಲ್ತಾನರ ಬಳಿಗೆ ಓಡಿದರು.

ಕೋಟೆಯ ಹೊರಭಾಗದಲ್ಲಿ, ನದಿಯ ತೀರದಲ್ಲಿ, ನೂತನವಾಗಿ ನಿರ್ಮಿಸಿದ 'ದರಿಯಾದೌಲತ್' ಅರಮನೆಯಲ್ಲಿದ್ದ ಸುಲ್ತಾನರನ್ನು ಕಾಣಲು ಶಾಮಯ್ಯಂಗಾರ್ಯರು, ಮಿರ್ಜಾ ಮೀರ್ ಸಾದಕ್‌ನಿಂದ ವಿಶೇಷ ರಹದಾರಿ ಪಡೆದು, ಹೋಗಿ ಸುಲ್ತಾನರನ್ನು ಕಂಡು ತಾವು ಬಂದ ಕೆಲಸವನ್ನು ಅರಿಕೆ ಮಾಡಿಕೊಂಡರು.

ಆರಂಭದಲ್ಲಿ ಶಾಮಯ್ಯಂಗಾರ್ಯರನ್ನು ವಿಶ್ವಾಸದಿಂದ ಕಂಡ ಸುಲ್ತಾನರು ಅವರು ಬಂದ ರಾಯಭಾರದ ವಾರ್ತೆಯನ್ನು ಕೇಳಿ, ಅವರ ಮೇಲೇ ಕುಪಿತರಾಗಿ—

"ನಿಮ್ಮನ್ನು ನೋಡಲು ಅನುಮತಿ ಕೊಟ್ಟುದೇ ನಮ್ಮ ತಪ್ಪಾಯಿತು. ಈ ವಿಷಯವನ್ನು ಹೆಚ್ಚು ಮಾತು ಬೆಳಸದೆ ಹೊರಟು ಹೋಗಿ. ಇಲ್ಲವಾದರೆ ಈ ವಿಷಯದಲ್ಲಿ ನಿಮ್ಮ ಕೈಯೂ ಇದೆಯೆಂದು ನಿಮ್ಮನ್ನೇ ಶಿಕ್ಷಿಸ

—ಎಂದು ಎಚ್ಚರಿಸಿದ.

" ಆಗಬಹುದು ಮಹಾಸ್ವಾಮಿ, ತಮ್ಮ ಅಪ್ಪಣೆಗೆ ಇದಿರಿಲ್ಲ ಎಂದು ನಾನು ಬಲ್ಲೆ. ನನ್ನ ತಲೆಯ ಮೇಲೆ ಸಿಟ್ಟಿದ್ದರೆ ಅದನ್ನು ತೆಗೆದುಕೊಂಡು ಬಿಡಿ. ಆದರೆ ಕೃಪೆಮಾಡಿ ಗಂಗಾಧರೇಶ್ವರನ ದೇವಾಲಯವನ್ನು ಉಳಿಸಿ ಕೊಡಿ. ನನ್ನ ತಲೆಯೊಂದಿಗೆ ನಮ್ಮ ಜಾತಿಗೆ ಬಂದ ಕೆಟ್ಟ ಹೆಸರು ತೊಡೆದು ಹೋಗಲಿ."

ಎಂದು ಬೇಡಿದರು ಅಯ್ಯಂಗಾರ್ಯರು.

" ಗಂಗಾಧರೇಶ್ವರನ ದೇವಾಲಯವನ್ನು ಕೆಡವಿಸಬೇಕು ಎಂದು ನಾವು ಅಪ್ಪಣೆ ಮಾಡಿದುದು ಏಕೆಂದು ನಿಮಗೆ ಗೊತ್ತೇ ? "

" ಗೊತ್ತು ಮಹಾಪ್ರಭು, ಊರಿನ ಜನರೆಲ್ಲಾ ಆ ವಿಷಯ ಆಡಿ ಕೊಳ್ಳುತ್ತಿದ್ದಾರೆ."

" ಏನೆಂದು ? "

" ಶ್ರೀ ವೈಷ್ಣವರೆಲ್ಲಾ ಸೇರಿ, ಆ ದೇವಾಲಯದ ವಿಷಯದಲ್ಲಿ ಪ್ರಭು ಗಳ ಬುದ್ಧಿಯನ್ನು ಕೆಡಿಸಿದ್ದಾರೆಂದು.

" ಅದು ಸುಳ್ಳು. ನಿಜವಾದ ಕಾರಣ ಅದಲ್ಲ."

" ಹಾಗಿದ್ದರೆ ನಾನು ಅಜ್ಞ. ನಿಜ ಸಂಗತಿ ಏನೆಂದು ಪ್ರಭುಗಳೇ ಅಪ್ಪಣೆ ಕೊಡಿಸಬೇಕು. ನನ್ನ ಕಿವಿಗೆ ಬಿದ್ದುದನ್ನು ನಾನು ಹೇಳಿದೆ."

" ನಡೆದ ವಿಷಯ ಅದಲ್ಲ--"

— ಎಂದು, ಹೇಳಲು ನಾಚಿಕೆಗೇಡಿನದಾದ ಆ ವಿಷಯವನ್ನು ಆದಷ್ಟು ಸೂಕ್ಷ್ಮವಾಗಿ ತಿಳಿಸಿ—

" ಅರಮನೆಗೆ ಅಷ್ಟು ಹತ್ತಿರವಾಗಿ ಆ ದೇವಾಲಯವಿರುವುದು ನಮಗೆ ಮೊದಲೇ ಇಷ್ಟವಿರಲಿಲ್ಲ. ಎಂದೋ ಅದನ್ನು ಅಲ್ಲಿಂದ ಎತ್ತಿಸಿ ಬಿಡಬೇಕು ಎಂದುಕೊಂಡಿದ್ದೆವು. ಆಗ ಬೇಗಂ ಸಾಹಿಬಾರವರೇ ಅದಕ್ಕೆ ಅಡ್ಡಿ ಬಂದು— 'ದೇವರು ಪಕ್ಕದಲ್ಲಿದ್ದರೆ ನಮಗೆ ಆದದ್ದೇನು.ಅ ರಮನೆಯನ್ನು ಆ ದೇವರೇ ಕಾಪಾಡುತ್ತಾನೆ. ಅದನ್ನು ಕೆಡವಿಸಬೇಡಿ' ಎಂದು ನಮ್ಮ ಕೈ ತಡೆದರು. ನಾವೂ ಅವರ ಪ್ರೀತಿಗೆ ಕಟ್ಟುಬಿದ್ದು ಸುಮ್ಮನಾದೆವು. ಈಗ ಬೇಗಂ ಸಾಹಿಬಾರವರಿಗೇ ಅದರ ಮೇಲೆ ಬೇಸರವಾಗಿದೆ. ಅವರೇ ಹೇಳಿದರು—

ಇರಗೊಟ್ಟರೆ, ಈ ಜನ ಸದರ ತಿಳಿದುಕೊಂಡು, ದೇವಾಲಯವನ್ನೇ ಅಲ್ಲದೆ ಅರಮನೆಯನ್ನೂ ಸೂಳೆಗೇರಿ ಮಾಡಿಬಿಡುತ್ತಾರೆ. ಮೊದಲು ಅದನ್ನು ತೆಗೆಸಿಬಿಡಿ, '—ಎಂದು. ಅದಕ್ಕೋಸ್ಕರವೇ ನಾವು ಈ ಅಪ್ಪಣೆ ಮಾಡ ಬೇಕಾಯಿತು."

ಟೀಪು ಹೇಳಿದುದನ್ನು ಕೇಳಿ, ಆದ ಮಹಾಪರಾಧದ ಅರಿವಾಗಿ ದೇವಾಲಯದ ಪರವಾಗಿ ವಾದಿಸಲು ಬಂದ ಶಾಮಯ್ಯಂಗಾರ್ಯರಿಗೂ ನಾಲಿಗೆ ಹಿಡಿದಂತಾಯಿತು. ಸ್ವಲ್ಪಕಾಲ ಸುಮ್ಮನಿದ್ದು ಬಳಿಕ ಹೇಳಿದರು.

"ಆದುದು ಮಹಾಪರಾಧ ಪ್ರಭು."

"ಸರಿಯೆ, ಅದಕ್ಕೆ ತಕ್ಕ ಶಿಕ್ಷೆ ವಿಧಿಸಿದ್ದೇನೆ. ಅದಕ್ಕೇ ಈ ವಿಷಯ ದಲ್ಲಿ ನಿಮ್ಮ ಶಿಫಾರಸು ಬೇಕಿಲ್ಲ ಎಂದು ಹೇಳಿದ್ದು"

"ಆದರೆ ಒಂದು ಮಾತು ಮಹಾಪ್ರಭು."

"ಏನು ?"

"ತಾವು ವಿಧಿಸಿದ ಶಿಕ್ಷೆ ಯೋಗ್ಯವಾದದ್ದೇ. ಆದರೆ ಅದರಲ್ಲಿ ಸ್ವಲ್ಪ ತಪ್ಪಾಗಿದೆ...."

"ಏನು ?"

"ತಪ್ಪುಮಾಡಿದುದು ಯಾರೋ, ಶಿಕ್ಷೆ ಅನುಭವಿಸುವವರು ಯಾರೋ ಆದಂತಾಗಿದೆ. ತಮ್ಮ ಅಜ್ಞೆಯನ್ನು ಕೇಳಿ ನನಗೊಂದು ಕಥೆ ನೆನಪಿಗೆ ಬರುತ್ತಿದೆ...."

"ಏನು ಕಥೆ ?"

"ತಮ್ಮ ಚಿತ್ತಕ್ಕೆ ಆಯಾಸವಾಗದಿದ್ದರೆ ಬಿನ್ನವಿಸುತ್ತೇನೆ."

"ಹೇಳಿ."

"ಹೇಳುತ್ತೇನೆ. ಆದರೆ ಒಂದು ಮನವಿ. ನಾನು ತಮ್ಮ ಸನ್ನಿಧಾನದಲ್ಲಿ ಅರಿಕೆ ಮಾಡಿಕೊಳ್ಳುವುದೆಲ್ಲಾ ಮುಗಿದು, ಪ್ರಭುಗಳು ನ್ಯಾಯ ತೀರ್ಮಾನ ಮಾಡುವವರೆಗಾದರೂ, ತಮ್ಮ ಕಡೆಯವರು, ಗಂಗಾಧರೇಶ್ವರಸ್ವಾಮಿಯ ದೇವಾಲಯವನ್ನು ಕೆಡವದ ಹಾಗೆ ಪ್ರಭುಗಳು ಅಪ್ಪಣೆ ಮಾಡಬೇಕು."

"ಅಷ್ಟು ಆಗಬಹುದು."

—ಎಂದು ಆಗಲೇ ಸಮ್ಮುಖದ ಭಕ್ಷಿಯನ್ನು ಕರೆಸಿ, ತಮ್ಮ ಅಪ್ಪಣೆ

"ಆಯಿತು, ನಿಮ್ಮ ಕಥೆಯೇನೋ ಹೇಳಿ. ಅಲ್ಲಿಯವರೆಗೂ ನಿಮ್ಮ ದೇವರಿಗೆ ಜೀವದಾನ ಮಾಡಿದ್ದೇನೆ."

—ಎಂದು ಹೇಳಿದ.

"ಮಹಾನುಗ್ರಹವಾಯಿತು ಪ್ರಭು...."

—ಎಂದು ಗಂಟಲು ಸರಿಪಡಿಸಿಕೊಂಡು ಹೇಳಿದರು ಶಾಮಯ್ಯಂಗಾರ್ಯರು—

"ಹಿಂದೆ....ಎಂದರೆ, ಎಷ್ಟೋ ನೂರಾರು ವರ್ಷಗಳ ಕೆಳಗೆ, ಒಂದು ದೇಶದಲ್ಲಿ ಒಬ್ಬ ರಾಜನಿದ್ದ. ಮಹಾಪ್ರಭುಗಳ ಹಾಗೇ ಆ ರಾಜನೂ ಅತ್ಯಂತ ಧರ್ಮನಿಷ್ಠ, ನ್ಯಾಯಪರ.

ಅದರಲ್ಲಿಯೂ ಅವನ ನ್ಯಾಯಪರತೆಯಂತೂ ಜಗದ್ವಿಖ್ಯಾತವಾಗಿತ್ತು. ತಪ್ಪು ಮಾಡಿದವರು ಯಾರೇ ಆದರೂ, ರಾಜ, ಉಚ್ಚ-ನೀಚ, ದಯೆ-ದಾಕ್ಷಿಣ್ಯ ಯಾವುದನ್ನೂ ಗಮನಿಸದೆ, ನಿರ್ದಾಕ್ಷಿಣ್ಯವಾಗಿ, ನಿಷ್ಪಕ್ಷವಾಗಿ, ಶಿಕ್ಷೆ ವಿಧಿಸುತ್ತಿದ್ದ.

ಹೀಗಿರುವಾಗ ಒಂದು ದಿನ ಆತನ ಮುಂದೆ ವಿಚಿತ್ರ ಪ್ರಸಂಗವೊಂದು ವಿಚಾರಣೆಗೆ ಬಂದಿತು.

ಆ ಊರಿನಲ್ಲಿ ಒಬ್ಬ ಬಹುಧನಿಕನಾದ ವ್ಯಾಪಾರಿಯಿದ್ದ. ಅವನ ಸಂಪತ್ತಿಗೆ ಆಸೆಪಟ್ಟು ಒಬ್ಬ ಕಳ್ಳ ಒಂದು ದಿನ ಆ ಶ್ರೀಮಂತ ವ್ಯಾಪಾರಿಯ ಮನೆಗೆ ಕನ್ನ ಹಾಕಿದ. ಅವನು ಹಾಕಿದ ಹಿಂದಿನ ದಿನ ಊರಿನಲ್ಲಿ ಭಾರಿ ಮಳೆ ಬಿದ್ದುದರಿಂದ, ಕನ್ನಹಾಕಿದ ಗೋಡೆ ಕುಸಿದು ಬಿದ್ದು, ಕಳ್ಳ ಅದರ ಕೆಳಗೆ ಸಿಕ್ಕುಬಿದ್ದು ಸತ್ತುಹೋದ.

ತನ್ನ ಗಂಡನನ್ನು ಕಳೆದುಕೊಂಡು ಕಳ್ಳನ ಹೆಂಡತಿ, ದೊರೆಯ ಹತ್ತಿರ ಮಾತು ತೆಗೆದುಕೊಂಡು ಬಂದಳು—

"ಮಹಾಸ್ವಾಮಿ ದುರ್ಬಲವಾದ ಗೋಡೆಯನ್ನು ಕಟ್ಟಿಸಿ, ನನ್ನ ಗಂಡನ ಸಾವಿಗೆ ಕಾರಣವಾದ ಆ ವ್ಯಾಪಾರಿಯನ್ನು ಶಿಕ್ಷಿಸಿ, ಅವನಿಂದ ನನಗೆ ಪರಿಹಾರ ಕೊಡಿಸಿಕೊಡಬೇಕು."—ಎಂದು.

ನ್ಯಾಯಪರನಾದ ದೊರೆ, ಅವಳ ವಾದವನ್ನು ಕೇಳಿದ. ಅವಳ ವಾದ ಸಮಂಜಸವೆಂದು ತೋರಿತು. ಆ ಕಾಲದಲ್ಲಿ ಶಿಕ್ಷೆ ಎಂದರೆ, ತಲೆಗೆ

ವ್ಯಾಪಾರಿಯನ್ನು ತಂದು, ಅವನನ್ನು ಶೂಲಕ್ಕೇರಿಸಿ, ಅವನ ಆಸ್ತಿಯನ್ನು ಕಳ್ಳನ ಹೆಂಡತಿಗೆ ಕೊಡಿಸಿಕೊಡಬೇಕು."—ಎಂದು ತನ್ನ ಮಂತ್ರಿಗೆ ಅಪ್ಪಣೆ ಮಾಡಿದ.

ರಾಜನ ಅಪ್ಪಣೆಯಂತೆಯೇ ಮಂತ್ರಿ ವ್ಯಾಪಾರಿಗೆ ಕೈಕೋಳ ಹಾಕಿ, ಎಳೆದುಕೊಂಡು ಬಂದು, ರಾಜನ ಎದುರಿಗೆ ನಿಲ್ಲಿಸಿ, ರಾಜಾಜ್ಞೆಯನ್ನು ತಿಳಿಸಿದ. ವ್ಯಾಪಾರಿಯೂ ಬುದ್ಧಿವಂತ. ಗಾಳಿ ಹೇಗೆ ಬೀಸುತ್ತದೆ ಎಂಬುದನ್ನು ಕಂಡುಕೊಂಡು ಕೈ ಮುಗಿದು—

"ಮಹಾಸ್ವಾಮಿ, ನಾನು ನಿರಪರಾಧಿ, ನನ್ನನ್ನು ಕ್ಷಮಿಸಬೇಕು"—ಎಂದು ಬೇಡಿದ.

"ಹಾಗಾದರೆ ಅಪರಾಧಿ ಯಾರು ?"

—ರಾಜ ಕೇಳಿದ.

"ಗೋಡೆ ಕಟ್ಟಿಸಿದ ನಾನಲ್ಲ ಮಹಾಪ್ರಭು, ಆ ಗೋಡೆಯನ್ನು ಅಷ್ಟು ದುರ್ಬಲವಾಗಿ ಕಟ್ಟಿದ ವಡ್ಡರವನು ನಿಜವಾದ ಅಪರಾಧಿ."

ರಾಜನಿಗೆ ಅದೂ ಸರಿ ಎಂದು ತೋರಿತು. ವ್ಯಾಪಾರಿಯನ್ನು ಬಿಡುಗಡೆ ಮಾಡಿ ವಡ್ಡನನ್ನು ಎಳೆದುಕೊಂಡು ಬರಲು ಅಪ್ಪಣೆ ಮಾಡಿದ.

ಕರ್ಮಚಾರಿಗಳು ರಾಜನ ಅಪ್ಪಣೆಯಂತೆ ವಡ್ಡನನ್ನು ಎಳೆದುಕೊಂಡು ಬಂದರು. ರಾಜ ಅವನ ಮೇಲೆ ವ್ಯಾಪಾರಿ ಹೊರಿಸಿದ ಆಪಾದನೆಯನ್ನು ಹೇಳಿ—

" ನೀನೇನು ಹೇಳುತ್ತೀಯ ಹೇಳು ? "—ಎಂದು ಕೇಳಿದ.

" ನಾನೂ ನಿರಪರಾಧಿ ಪ್ರಭು."

—ಎಂದ ವಡ್ಡ ಬುದ್ಧಿಯನ್ನು ಓಡಿಸಿ ಕೈ ಮುಗಿದು.

" ಹಾಗಾದರೆ ಅಪರಾಧಿ ಯಾರು ? "

" ಈ ಪಟ್ಟಣದ ಸೂಳೆ ! "

ವಡ್ಡನ ಉತ್ತರವನ್ನು ಕೇಳಿ ರಾಜ ಚಕಿತನಾಗಿ—

" ಹೌದೇ? ಅವಳಿಗೂ ಈ ಅಪರಾಧಕ್ಕೂ ಏನು ಸಂಬಂಧ ? "

—ಎಂದು ಕೇಳಿದ.

" ಸಂಬಂಧವಿದೆ ಮಹಾಸ್ವಾಮಿ. ಆ ದಿನ ನಾನು ವರ್ತಕನ

ಸದ್ದು ಮಾಡುತ್ತಾ ಓಡಿ ಬಂದಳು. ಅವಳ ರೂಪವನ್ನು ನೋಡಿ ಮರುಳಾದ ನನ್ನಿಂದ ಗೋಡೆ ಕಟ್ಟುವಾಗ ತಪ್ಪಾಯಿತು. ಆ ಹೊತ್ತಿನಲ್ಲಿ ಅವಳು ಬಂದು ನನ್ನ ಕಣ್ಣನ್ನು ಸೆಳೆಯದಿದ್ದರೆ, ಗೋಡೆ ಕಟ್ಟುವಾಗ ನನ್ನಿಂದ ಬೇಹುಷಾರಿ ಕೆಲಸ ಆಗುತ್ತಿರಲಿಲ್ಲ. ಆದ್ದರಿಂದ ಧರ್ಮಾವತಾರರಾದ ಮಹಾಪ್ರಭುಗಳು, ನಿಜವಾದ ಅಪರಾಧಿಯಾದ ಆ ಸೂಳೆಗೆ ಶಿಕ್ಷೆ ವಿಧಿಸಬೇಕು."

ರಾಜನಿಗೆ ವಡ್ಡನ ಆ ಅಹವಾಲು ಸರಿ ಎಂದು ತೋರಿತು. ಕೂಡಲೇ ವಡ್ಡನನ್ನು ಬಿಡುಗಡೆಮಾಡಿ ಸೂಳೆಯನ್ನು ಹಿಡಿದು ತರಲು ಆಜ್ಞೆಮಾಡಿದ.

ಅವರಂತೆಯೇ ಕರ್ಮಚಾರಿಗಳು ಸೂಳೆಯನ್ನು ಹಿಡಿದು ತಂದು ರಾಜನ ಎದುರಿಗೆ ನಿಲ್ಲಿಸಿದರು. ರಾಜ ಸೂಳೆಗೆ ಅವಳು ಮಾಡಿದ ಅಪರಾಧವೇನು ಎಂಬುದನ್ನು ವಿವರಿಸಿ ಹೇಳಿ—

"ನೀನೀಗ ಶೂಲಕ್ಕೆ ಹತ್ತಬೇಕು"

—ಎಂದು ಹೇಳಿದ.

ರಾಜ ಹೇಳಿದುದನ್ನೆಲ್ಲಾ ಕೇಳಿದ ಸೂಳೆ, ಬಹಳಹೊತ್ತು ಯೋಚನೆ ಮಾಡಿ ಬಳಿಕ—

"ಮಹಾಪ್ರಭು, ನಾನೂ ಈ ಅಪರಾಧಕ್ಕೆ ಹೊಣೆಗಾರಳಲ್ಲ. ಆ ಅಪರಾಧಿಯೇ ಬೇರೆ."

—ಎಂದು ಹೇಳಿದಳು.

"ಹಾಗೇ, ಹಾಗಿದ್ದರೆ ನಿಜವಾದ ಅಪರಾಧಿ ಯಾರು ?"

"ದೇವಸ್ಥಾನದ ಮುಂದಿರುವ ಅರಳಿಕಟ್ಟೆಯ ಮೇಲಿರುವ ಸನ್ಯಾಸಿಗಳು."

"ಹೇಗೆ ? ಅವರು ಹೇಗೆ ಕಾರಣ ?"

—ರಾಜ ವಿಸ್ಮಿತನಾಗಿ ಕೇಳಿದ.

"ಊರಿಗೆ ಈಗೊಬ್ಬ ಸನ್ಯಾಸಿಗಳು ಬಂದಿದ್ದಾರೆ. ಅವರು ಬಹಳ ಮಹಾತ್ಮರು ಎಂಬ ಸುದ್ದಿಯನ್ನು ಕೇಳಿ, ನಾನು ಅವರಿಗೆ ನಮಸ್ಕರಿಸಿ, ಅವರ ಆಶೀರ್ವಾದ ಪಡೆದು ಬರಲೆಂದು ಹೋದೆ. ನನ್ನನ್ನು ನೋಡಿದ ಸನ್ಯಾಸಿಗಳು, ಕಾಮೋದ್ರೇಕಿತರಾಗಿ ನನ್ನನ್ನು ಹಿಡಿದುಕೊಳ್ಳಲು ಬಂದರು.

ಸದ್ದು ಮಾಡಿ, ವಡ್ಡನ ಕಣ್ಣನ್ನು ಸೆಳೆಯಿತು. ಆದುದರಿಂದ ನಿಜವಾಗಿ ಇದೆಲ್ಲಕ್ಕೂ ಆ ಸನ್ಯಾಸಿಗಳೇ ಕಾರಣ. ಆದ್ದರಿಂದ ನ್ಯಾಯಾವತಾರರಾದ ಪ್ರಭುಗಳು, ಶಿಕ್ಷೆ ಏನಿದ್ದರೂ ಆ ಸನ್ಯಾಸಿಗೇ ವಿಧಿಸಬೇಕು.

--ಎಂದು ಪ್ರಾರ್ಥಿಸಿದಳು.

ರಾಜನಿಗೆ ಸೂಳೆಯ ಹೇಳಿಕೆ ಸರಿಯೆಂದು ತೋರಿ, ಆ ಸನ್ಯಾಸಿಯನ್ನು ಹಿಡಿದು ತರಲು ಅಪ್ಪಣೆ ಮಾಡಿದ. ಯಥಾಪ್ರಕಾರ ಕರ್ಮಚಾರಿಗಳು ಆ ಸನ್ಯಾಸಿಯನ್ನು ಹಿಡಿದು ತಂದರು. ಉಳಿದವರಿಗೆ ಹೇಳಿದ ಹಾಗೇ ಸನ್ಯಾಸಿಗೂ ಅವನ ಅಪರಾಧವೇನೆಂದು ಹೇಳಿ—

"ಹೂ. ಶೂಲಕ್ಕೆ ಹತ್ತಲು ಸಿದ್ಧನಾಗು !"

—ಎಂದು ಘರ್ಜಿಸಿದ.

ಅದನ್ನೆಲ್ಲ ಕೇಳಿದ ಸನ್ಯಾಸಿ—

"ರಾಜನೆ, ನಿಜವಾದ ಅಪರಾಧಿಗೆ ಶಿಕ್ಷೆಯಾಗಬೇಕು ಎನ್ನುವ ನ್ಯಾಯನಿಷ್ಠೆ ಅಮೋಘವಾದುದು. ಅದು ನನಗೂ ಸಮ್ಮತವೇ. ನಾನೇ ಅಪರಾಧಿಯಾಗಿದ್ದರೆ ಖಂಡಿತವಾಗಿಯೂ ನನ್ನ ತಲೆಯನ್ನು ಸಂತೋಷವಾಗಿ ನಾನೇ ಕತ್ತರಿಸಿ ಕೆಳಗಿಡುತ್ತಿದ್ದೆ. ಆದರೇನು ಮಾಡಲಿ—ನಾನು ಆ ತಪ್ಪಿಗೆ ಹೊಣೆಗಾರನಲ್ಲ."

—ಎಂದು ಹೇಳಿದ.

"ಹಾಗಾದರೆ ಮತ್ತೆ ಯಾರು ?"

"ಅವರ ಹೆಸರು ಹೇಳಲು ನನಗೆ ಬಹಳ ಅಂಜಿಕೆಯಾಗುತ್ತದೆ. ಅವರು ತಮಗೆ ಬಹಳ ಬೇಕಾದವರು...."

"ಅವರು ಯಾರಾದರಾಗಲಿ—ನ್ಯಾಯದ ಇದಿರು ಮಾನವನಿಗೆ ಬೆಲೆಯಿಲ್ಲ, ಯಾರು ಹೇಳು."

—ಎಂದು ಕೇಳಿದ ರಾಜ.

"ತಾವು ಹಾಗೆ ಹೇಳಿದರೆ ಸರಿ. ನಿಜವಾಗಿಯೂ ಇವೆಲ್ಲಕ್ಕೂ ಮೂಲಭೂತಕಾರಣ ನಿಮ್ಮ ಮಂತ್ರಿಗಳು."

"ನಮ್ಮ ಮಂತ್ರಿಗಳೇ ? ಹೇಗೆ ?"

"ನಾನು ನಿಜವಾದ ಸನ್ಯಾಸಿಯಲ್ಲ, ನಿಜವಾದ ಸನ್ಯಾಸಿಯಾಗಿದ್ದಿ

ನಿಜವಾಗಿಯೂ ನಾನು ಪಕ್ಕದ ಸೀಮೆಯ ಅರಸು. ಮಂತ್ರಿಗಳು ನನ್ನ ರಾಜ್ಯವನ್ನು ವಶಪಡಿಸಿಕೊಂಡು, ನನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದ್ದ ರಿಂದ, ನಾನು ಹೀಗೆ ಸನ್ಯಾಸಿಯ ವೇಷ ಧರಿಸಿ ಅಲೆಯಬೇಕಾಯಿತು. ಆದುರಿಂದ ನಾನು ಸನ್ಯಾಸಿಯ ವೇಷ ಧರಿಸಲು ಕಾರಣರಾದ ತಮ್ಮ ಸಚಿವರೇ ಇವೆಲ್ಲಕ್ಕೂ ಮೂಲ."

ಸನ್ಯಾಸಿ ಹೇಳಿದುದನ್ನು ಕೇಳಿ, ರಾಜನಿಗೆ ಆ ವಾದ ಸತ್ಯವೆಂದು ತೋರಿ ಆಸ್ಥಾನದಲ್ಲೇ ಇದ್ದ ಮಂತ್ರಿಗಳನ್ನು ಖೈದು ಮಾಡಿಸಿ—

"ನೀನೇನು ಹೇಳುತ್ತೀಯ ಇದಕ್ಕೆ?"—ಎಂದು ಕೇಳಿದ.

ಎಲ್ಲಿಲ್ಲೋ ಸುತ್ತಿದ ಉರುಲು ತನ್ನ ಕತ್ತಿಗೆ ಬಂದುದನ್ನು ಕಂಡ ಚತುರ ಮಂತ್ರಿ, ತನ್ನ ತಲೆ ಉಳಿಸಿಕೊಳ್ಳಲು—

"ರಾಜಾಧಿರಾಜ ಮಹಾರಾಜಾ, ನಾನೂ ಅಪರಾಧಿಯಲ್ಲ."

ಎಂದು ಅಡ್ಡಬಿದ್ದು ಹೇಳಿದ.

"ಹಾಗಾದರೆ ಇನ್ನಾರು?"

"ತಾವೇ ಮಹಾಪ್ರಭು"

ಸಚಿವನು ಹೇಳಿದುದನ್ನು ಕೇಳಿ ರಾಜ, ಸಿಡಿಲು ಬಡಿದವನಂತಾಗಿ—

"ನಾನು.... ನಾನು ಹೇಗೆ ಕಾರಣ?"

—ಎಂದು ಪ್ರಶ್ನೆ ಮಾಡಿದ.

"ತಮ್ಮ ಅಪ್ಪಣೆಯಂತೆಯೇ ಈ ಸನ್ಯಾಸಿಯ ರಾಜ್ಯದ ಮೇಲೆ ದಾ ಮಾಡಿ, ಇವನನ್ನು ರಾಜ್ಯಚ್ಯುತನನ್ನಾಗಿ ಮಾಡಿದ್ದು. ಆದ್ದರಿಂದ ಅದ ಹೊಣೆಗಾರಿಕೆಯೇನಿದ್ದರೂ, ಸೇವಕನಾದ ನನಗೆ ಅಪ್ಪಣೆ ಮಾಡಿದ ಪ್ರ ಗಳದು."

ಮಂತ್ರಿ ಹೇಳಿದುದನ್ನು ಕೇಳಿ, ರಾಜ, ಗಾಢವಾಗಿ ಆಲೋಚ ಮಾಡಿದ. ಮಂತ್ರಿಯ ವಾದ ತರ್ಕಸಮಂಜಸವಾದುದೆಂದು ತೋರಿತ ಆ ಕೂಡಲೇ ಸಿಂಹಾಸನದಿಂದ ಎದ್ದು ನಿಂತು—

"ಮಂತ್ರಿಗಳು ಹೇಳಿದುದು ಸರಿ. ನಾನೇ ನಿಜವಾದ ಅಪರಾ ನ್ಯಾಯ ಗೆಲ್ಲಲಿ, ಸತ್ಯ ಬಾಳಲಿ."

—ಎಂದು ಹೇಳಿ ತನ್ನ ಕತ್ತನ್ನು ತಾನೇ ಕತ್ತರಿಸಿಕೊಂಡು ಕೆ

ಆ ರಾಜನ ನ್ಯಾಯನಿಷ್ಠೆಯನ್ನು ಮೆಚ್ಚಿದ ಶಿವ ಪ್ರತ್ಯಕ್ಷನಾಗಿ, ಆ ರಾಜನಿಗೆ ಜೀವದಾನ ಮಾಡಿದನಂತೆ.

ಇದು, ಮಹಾಪ್ರಭು ನಾನು ಕೇಳಿದ ಕಥೆ."

—ಎಂದು ಸುಲ್ತಾನನಿಗೆ ಕೈಮುಗಿದು ಕಥೆ ಮುಗಿಸಿದರು ಶಾಮಯ್ಯಂಗಾರ್ಯರು.

ಅವರು ಹೇಳಿದ ಕಥೆಯನ್ನು ಕೇಳಿ ಸುಲ್ತಾನನಿಗೆ ನಗುವನ್ನು ತಡೆಯಲಾಗದೆ ನಕ್ಕು, ಆ ಬಳಿಕ ನಗುವನ್ನು ತಡೆದುಕೊಂಡು—

"ಆ ಬೇವಕೂಫ್ ರಾಜ, ನಾನು ಇಬ್ಬರೂ ಒಂದೇ ಎಂದು ನಿಮ್ಮ ಅಭಿಪ್ರಾಯವೋ ?"

—ಎಂದು ಕೇಳಿದ.

"ಹಾಗಲ್ಲ ಮಹಾಪ್ರಭು"

"ಮತ್ತಿನ್ನೇನು ?"

"ತಮ್ಮಂಥ ಮಹಾಪ್ರಭುಗಳನ್ನು ಆ ಮೂರ್ಖ ರಾಜನಿಗೆ ಹೋಲಿಸುವಂಥ ಉದ್ಧಟತನವನ್ನು ನಾನೆಂದಿಗಾದರೂ ಮಾಡಿಯೇನೇ? ಆದರೂ ಇಂದು ಗಂಗಾಧರೇಶ್ವರಸ್ವಾಮಿಯ ದೇವಸ್ಥಾನದ ಬಗ್ಗೆ ಮಾಡಿರುವ ಆಜ್ಞೆ, ನಾಳೆ ಬರುವ ತಲೆಮಾರಿನವರ ಬಾಯಲ್ಲಿ, ಅಂಥ ನಗೆಪಾಟಲಿಗೆ ಗುರಿಯಾಗಬಾರದು ಎಂದು ಆ ಕಥೆ ಹೇಳಿದೆ."

"ನಿಮ್ಮ ಕಥೆಗೂ ನಮ್ಮ ಆಜ್ಞೆಗೂ ಏನು ಸಂಬಂಧ ?"

"ಸಂಬಂಧವಿದೆ ಮಹಾಪ್ರಭು. ಯಾರೋ ಪೋಲೀ ಪಟಿಂಗರು ಮಾಡಿದ ಕೆಲಸಕ್ಕೂ ಗಂಗಾಧರೇಶ್ವರಸ್ವಾಮಿಗೂ ಎಲ್ಲಿಯ ಸಂಬಂಧ? ಕೆಟ್ಟ ಕೆಲಸ ಮಾಡಿದವರನ್ನು ಹಿಡಿಸಿ ಕಣ್ಣು ಕೀಳಿಸುವುದು ಬಿಟ್ಟು, ಅದರ ತಪ್ಪಿಗೆ ದೇವಾಲಯ ನೆಲಸಮ ಮಾಡಿಸುವುದು ಎಲ್ಲಿಯ ನ್ಯಾಯ ಮಹಾಸ್ವಾಮಿ? ಈಗಲಾದರೂ ತಾವು ಪರಾಮರ್ಶಿಸಿ, ಅಪ್ಪಣೆಯನ್ನು ಉಪಸಂಹರಿಸಬೇಕು. ಅದೇ ತಮ್ಮ ಕೀರ್ತಿಗೆ ಯುಕ್ತವಾದದ್ದು."

ಶಾಮಯ್ಯಂಗಾರ್ಯರು ಹೇಳಿದುದನ್ನು ಕೇಳಿ ಟೀಪುಸುಲ್ತಾನ್ ಕೊಂಚ ಆಲೋಚನಾಮಗ್ನನಾದ. ಯೋಚಿಸುತ್ತಾ ಯೋಚಿಸುತ್ತಾ ಅವನ ಮನಸ್ಸಿಗೆ ಅಯ್ಯಂಗಾರ್ಯರ ವಾದ ಯುಕ್ತಿಯುಕ್ತವಾದುದು ಎಂದು ಮನವರಿಕೆ

"ನಿಮ್ಮ ವಾದ ಸರಿಯಾಗಿದೆ ಅಯ್ಯಂಗಾರ್ಯರೇ. ನಿಮ್ಮ ಮಾತಿಗೆ ಕಟ್ಟುಬಿದ್ದು ನಮ್ಮ ಆಜ್ಞೆಯನ್ನು ತಡೆಹಿಡಿಯುತ್ತೇವೆ. ಆದರೆ ಒಂದು ಮಾತಂತೂ ಖಂಡಿತ...."

"ಏನು ?"

"ಗಂಗಾಧರೇಶ್ವರಸ್ವಾಮಿ ದೇವಾಲಯದ ಗೋಪುರವಿದ್ದರೆ, ಇನತ್ತಲ್ಲ ನಾಳೆ ಪುಂಡುಜನ ಇಂಥ ಕೆಲಸ ಮಾಡಬಹುದು. ಆದುದರಿಂದ ದೇವಾಲಯವನ್ನು ಉಳಿಸಿ, ಅದರ ಗೋಪುರ ಕೀಳಿಸಿಬಿಡುತ್ತೇನೆ."

"ಪ್ರಭುಗಳ ಮಾತು ಯುಕ್ತವಾದುದು. ಅಪ್ಪಣೆಯಾದರೆ ನಾನೇ ಆ ಕೆಲಸ ಮಾಡುತ್ತೇನೆ. ಅಂತಿಂಥವರು ದೇವರ ತಲೆಯ ಮೇಲೆ ಹತ್ತುವುದು ಬೇಡ."

—ಎಂದು ಬೇಡಿದರು ಅಯ್ಯಂಗಾರ್ಯರು.

"ಆಗಬಹುದು, ಹೇಗಾದರೂ ಸರಿಯೆ. ಅಂತೂ ನಾಳೆಯವೇಳೆಗೆ, ಆ ದೇವಾಲಯದ ಗೋಪುರ ನಮ್ಮ ಕಣ್ಣಿಗೆ ಬೀಳಕೂಡದು. ಇಲ್ಲವೆಂದರೆ ಆ ದೇವರು ದೇವಾಲಯ ಎಲ್ಲಾ ಕಿತ್ತಿಸಿ, ಕಾವೇರಿಗೆ ಎಸೆಸಿಬಿಡುತ್ತೇನೆ. ತಿಳಿಯಿತೇ ? ಹೋಗಿ ನಿಮ್ಮಿಂದ ಆ ದೇವಾಲಯ ಉಳಿಯಿತು."

—ಎಂದು ಹೇಳಿ—

"ಅಂದಹಾಗೆ, ಗಂಗಾಧರೇಶ್ವರಸ್ವಾಮಿ ನಿಮ್ಮ ದೇವರಲ್ಲ. ನಿಮ್ಮ ಜನದಲ್ಲಿ ಒಂದು ಗಾದೆಯಿದೆಯಂತೆ—'ಆನೆ ಅಟ್ಟಿಸಿಕೊಂಡು ಬಂದರೂ ಶಿವಾಲಯದೊಳಗೆ ಹೋಗಬಾರದು' ಅಂತ. ಹಾಗಿರುವಾಗ ನಿಮಗೇಕೆ ಈ ವಿಷಯದಲ್ಲಿ ಇಷ್ಟು ಆಸಕ್ತಿ ?"

—ಎಂದು ಪ್ರಶ್ನೆ ಮಾಡಿದ.

"ಆ ಗಾದೆ ಸುಳ್ಳು ಮಾಡುವುದಕ್ಕೆ ಮಹಾಸ್ವಾಮಿ."

"ಅಂದರೆ...."

"ಸ್ಮಾರ್ತರು ಶ್ರೀವೈಷ್ಣವರು ಅಂದರೆ, ಜನ ಕೌರವ ಪಾಂಡವರು ಅಂತ ತಿಳಿದುಕೊಂಡಿದ್ದಾರೆ. ಅದು ಸುಳ್ಳು ಮಹಾಸ್ವಾಮಿ. ಕೈಗೆ ಐದು ಬೆರಳು ಇದ್ದ ಹಾಗೆ ಈ ಜಾತಿಗಳು ಎಲ್ಲಾ ಸೇರಿಯೂ ಮಾಡುವುದು ಒಂದೇ ಕೆಲಸ....ಭಗವಂತನ ಸೇವೆ. ಅದರಲ್ಲಿ ಉಚ್ಚ, ನೀಚ ಎಣಿಸುವ

ಕಿರುಬೆರಳಿಗಿಂತ ಹೀನವಾದೀತೇ? ಪಟ್ಟಣಕ್ಕೆ ಹತ್ತುಕೋಟೆಯ ಬಾಗಿಲು ಇರುವ ಹಾಗೆ, ದೇವರ ಸನ್ನಿಧಿಗೆ ಹೋಗಲು ಹತ್ತುಮತದ ದಾರಿ. ಯಾರಿಗೆ ಯಾವುದು ಅನುಕೂಲವೊ ಆ ದಾರಿ ಹಿಡಿಯುತ್ತಾರೆ. ಅಷ್ಟೆ."

"ನಿಜ, ನಿಜ, ನಿಮ್ಮ ಮಾತು. ಒಮ್ಮೆ ಶೃಂಗೇರಿಯ ಜಗದ್ಗುರುಗಳೂ ಇದೇ ಮಾತನ್ನೇ ಅಪ್ಪಣೆ ಕೊಡಿಸಿದ್ದರು. ನಿಮ್ಮ ಹಾಗೆ ಕೊಡುವವನಿದ್ದರೆ, ನೂರು ಜಾತಿ ಇರಬಹುದು. ಇಲ್ಲ ಎಂದರೆ, ಒಬ್ಬ ರಂಗನಾಥ ಒಬ್ಬ ಹಕೀಂ ನಂಜುಂಡ ಇಬ್ಬರು ಸಾಕು, ಜಗತ್ತನ್ನು ಉಳಿಸಲಿಕ್ಕೆ ಅಳಿಸಲಿಕ್ಕೆ. ಆಯಿತು—ಹೋಗಿ ನಿಮ್ಮ ಜನಕ್ಕೆ ಹೇಳಿ—ಇಂಥ ತಕ್ಸೀರ್ ಇನ್ನೆಂದಿಗೂ ಆಗಕೂಡದು."

—ಎಂದ ಟೀಪುಸುಲ್ತಾನ್.

ಅದನ್ನು ಕೇಳಿ, ಅಯ್ಯಂಗಾರ್ಯ್ಯರು ಸುಲ್ತಾನನ ಔದಾರ್ಯವನ್ನು ಕೊಂಡಾಡಿ, ಕುರ್ನೀಸಾತು ಮಾಡಿ ಅರಮನೆಯಿಂದ ಹೊರಬಂದರು.

ಅವರು ಹೇಳಿದುದನ್ನು ಕೇಳಿದ ಸ್ಮಾರ್ತರು, ಗೋಪುರ ಹೋದರೂ ಹೋಗಲಿ, ದೇವಾಲಯ ಉಳಿಯಿತಲ್ಲಾ' ಎಂದು ಸಂತುಷ್ಟರಾದರು.

ಪಟ್ಟಣದಲ್ಲಿ ಎದ್ದ ಬಿರುಗಾಳಿ ಯಾವ ಬಲಿಯನ್ನೂ ತೆಗೆದುಕೊಳ್ಳದೆ ಶಾಂತವಾಯಿತು.

ಅಂದಿನಿಂದ ಊರಿನಲ್ಲಿ ಅಯ್ಯಂಗಾರ್ಯ್ಯರ ಗೌರವ ಹೆಚ್ಚಿ, ಅವರ ಮಾತು ಎಂದರೆ ಎಲ್ಲರೂ ಮರ್ಯಾದಿಸುವಂತಾಯಿತು. ಅವರ ಮಾತಿನ ಮರ್ಯಾದೆಯನ್ನು ಉಳಿಸಲು, ಯಾರನ್ನು ಸುಟ್ಟುಬಿಡಲೂ ಪಟ್ಟಣದ ಹಿಂದೂ ಜನ ತಯಾರಾಗಿದ್ದರು. ಟೀಪುಸುಲ್ತಾನನ ಧರ್ಮಶ್ರದ್ಧೆ, ಮೀರ್‌ಸಾದಕನ ಪ್ರಭಾವವನ್ನು ನೆಚ್ಚಿದ ಕೆಲವರು ಮುಸಲ್ಮಾನರು, ಹಿಂದೂ ಹೆಂಗಸರನ್ನು ಕೆಣಕಲು ಹೋಗಿ, ಆ ಸುದ್ದಿ ಅಯ್ಯಂಗಾರ್ಯ್ಯರ ಕಿವಿಗೆ ಬಿದ್ದು ಅವರು, ಆ ಪುಂಡರ ಮೇಲೆ ಗರಡಿಯವರನ್ನು ಛೂ ಬಿಟ್ಟು ಮಗ್ಗಲು ಮುರಿಸಿದುದೂ, ಆ ದೂರನ್ನು ಮುಸಲ್ಮಾನರು ಟೀಪುವಿನ ಬಳಿ ಒಯ್ದಾಗ, ಟೀಪು ಅವರನ್ನೇ ಶಿಕ್ಷಿಸಿದುದೂ ಪಟ್ಟಣವಾಸಿಗಳಿಗೆಲ್ಲಾ ಚೆನ್ನಾಗಿ ತಿಳಿದ ವಿಷಯವಾಗಿತ್ತು.

ಹೀಗೆ 'ಶಾಪಾದಪಿ ಶರಾದಪಿ'ಯಾದ ಅಯ್ಯಂಗಾರ್ಯರು, ನೀಲಾ-ಮಾಧವರಾಯರ ಸಂಬಂಧಕ್ಕೆ ವಿರುದ್ಧವಾಗಿ ಕತ್ತಿ ಎತ್ತಿದ್ದುದು, ಮುತ್ತಿನ ಮೂಗುತಿಯು ಮೂಡಿಸಿದ ಪ್ರಚಂಡವಾದ ತೃಷೆಗೆ ಬಲಿಯಾಗಿ ಹೇಗಾದರೂ ಮಾಧವರಾಯನ ಸ್ನೇಹವನ್ನು ಕಳೆದುಕೊಳ್ಳಬಾರದು ಎಂದು ಸಂಕಲ್ಪ ಮಾಡಿದ ನಾಗರತ್ನಳಿಗೆ ದೊಡ್ಡ ತಲೆನೋವಾಗಿ ಏನು ದಾರಿ ಹಿಡಿಯ ಬೇಕೆಂದು ತೋಚದಾಗಿತ್ತು.

ಈಗ ಅಯ್ಯಂಗಾರ್ಯರು ಎಚ್ಚರಿಸಿದ ಅಪಾಯಕ್ಕೆ ಆಹ್ವಾನನೆಂಬಂತೆ ಮಾಧವರಾಯ ಮನೆಬಾಗಿಲಿಗೇ ಬಂದುದು ನಾಗರತ್ನಳನ್ನು ಮತ್ತಷ್ಟು ತೀವ್ರ ಚಿಂತೆಗೆ ಗುರಿಮಾಡಿತ್ತು.

ಉಳಿದ ಚಿಂತೆ ಏನಿದ್ದರೂ ಒಂದು ಮಾತಂತೂ ಸ್ಪಷ್ಟವಾಗಿತ್ತು—ಮಾಧವರಾಯನನ್ನು ತನ್ನ ಮನೆಯಲ್ಲಿ ಇಟ್ಟುಕೊಳ್ಳಕೂಡದು ಎಂಬುದು.

ಅಯ್ಯಂಗಾರ್ಯರು ಪ್ರತಿದಿನವೂ ನಾಗರತ್ನಳ ಮನೆಗೆ ಬಂದು, ಅವ ಳೊಂದಿಗೆ ಸರಸಸಲ್ಲಾಪ ನಡೆಸಿ ಹೋಗುತ್ತಿದ್ದುದರಿಂದ, ಅವರಿಗೆ ತಿಳಿಯ ದಂತೆ ಮಾಧವರಾಯನನ್ನು ಮನೆಯೊಳಗೆ ಹುದುಗಿಸಿಡುವುದು ಅಸಾಧ್ಯ ವಾಗಿತ್ತು.

ಅಷ್ಟೇಮಟ್ಟಿಗೆ, ಆತನಿಗೆ ಅಯ್ಯಂಗಾರ್ಯರ ಬೆದರಿಕೆಯ ವಿಷಯ ಹೇಳುವುದು, ತಮ್ಮ ಸಂಬಂಧದ ವಿಷಯದಲ್ಲಿ ಮಾಧವರಾಯ ವಿನಾ ಕಾರಣ ಸಂಶಯಪಡಲು ಆಹ್ವಾನ ಕೊಟ್ಟಂತೆ ಎಂಬುದೂ ನಾಗರತ್ನಳಿಗೆ ತಿಳಿದಿತ್ತು.

ಎಲ್ಲಕ್ಕಿಂತ ಹೆಚ್ಚಾಗಿ, ಮಾಧವರಾಯ ಗಂಜಾಂನಲ್ಲೇ ಇದ್ದರೆ, ಆತ ಅಯ್ಯಂಗಾರ್ಯರನ್ನು ನೋಡದಂತೆ ತಡೆಮಾಡುವುದು ದುಸ್ಸಾಧ್ಯ ಎಂಬುದು ಆಕೆಗೆ ಸುಸ್ಪಷ್ಟವಾಗಿತ್ತು.

ಎಂತಲೇ ಈ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಏನು ಮಾಡುವುದು ಎಂದು ನಾಗರತ್ನ ಎಷ್ಟೋ ಹೊತ್ತು ತಲೆಯ ಮೇಲೆ ಕೈ ಹೊತ್ತು ಯೋಚಿಸಿದಳು. ಎಷ್ಟೆಷ್ಟು ಯೋಚಿಸಿದರೂ ಆಕೆಗೆ ಸೂಕ್ತ ಪರಿಹಾರೋಪಾಯ ಕಾಣದೆ, ಒಮ್ಮೆ ಅಯ್ಯಂಗಾರ್ಯರನ್ನೂ, ಒಮ್ಮೆ ಮುತ್ತಿನ ಮೂಗುತಿಯನ್ನೂ, ಒಮ್ಮೆ ಕೈಗೆ ಬಂದ ತುತ್ತು ಬಾಯಿಗೆ ಬರದಂತೆ ಮಾಡಿದ ತನ್ನ ದುರಾದೃಷ್ಟ

ನಾಗರತ್ನ ಹಾಗೆ ಕುಳಿತಿರುವಾಗಲೇ, ತಮ್ಮ ಸರಸ–ಸಲ್ಲಾಪ ಮುಗಿಸಿಕೊಂಡು ನೀಲಾ–ಮಾಧವರಾಯ ಇಬ್ಬರೂ ಮಹಡಿಯಿಂದ ಕೆಳಗಿಳಿದು ಬಂದರು— ಅವಳ ಸಮಸ್ಯೆಯೇ ಜೀವಂತವಾಗಿ ಇದಿರಿಗೆ ಬಂದ ಹಾಗೆ. ಮಾಧವರಾಯನನ್ನು ನೋಡುತ್ತಿದ್ದ ಹಾಗೇ, ನಾಗರತ್ನ ತನ್ನ ಮುಖವನ್ನು ಕವಿದಿದ್ದ ಚಿಂತೆಯ ತೆರೆಯನ್ನು ದೂಡಿ—

"ಏನು ನೀಲಾ ಭಾಳ ಸಂತೋಷವಾಗಿದೀಯ. ಯಜಮಾನರು ಬಹಳ ದೊಡ್ಡ ಉಡುಗೊರೆ ಕೊಟ್ಟಿರಬೇಕು'—ಎಂದಳು.

ಆ ಮಾತಿಗೆ ಮಾತನಾಡದೆ ನೀಲಾ ನಾಗರತ್ನಳಿಗೆ ತನ್ನ ಕತ್ತಿನಲ್ಲಿ ಮಿನುಗುತ್ತಿದ್ದ ಮೊಗ್ಗಿನ ಸರವನ್ನು ತೋರಿಸಿದಳು. ಅದನ್ನು ನೋಡಿದ ನೋಟದಲ್ಲೇ ಅದರ ತೂಕ, ಬೆಲೆ ಎಷ್ಟಿರಬಹುದೆಂದು ಅಂದಾಜುಮಾಡಿದ ನಾಗರತ್ನ ತೃಪ್ತಳಾಗಿ—

"ಪುಣ್ಯವಂತೆ ಕಣಮ್ಮ, ಬಾಯಿಬಿಟ್ಟರೆ ಬಂಗಾರದ ಮಳೆ ಕರೆಯೋ ಯಜಮಾನರನ್ನು ಪಡೆದುಕೊಂಡೆ. ಅವರಿಗೆ ಇವತ್ತು ನಿನ್ನ ಮೇಲಿರೋ ಪ್ರೀತೀನ ಶಾಶ್ವತವಾಗಿ ಕಾಪಾಡಿಕೋ.... ಈಗೆಲ್ಲಿಗೆ, ಯಜಮಾನರನ್ನು ಸ್ನಾನಕ್ಕೆ ಕರೆದುಕೊಂಡು ಹೋಗುತ್ತಾ ಇದೀಯಾ?"

—ಎಂದು ಕೇಳಿದಳು.

"ಹೂ"

"ಹಾಗಿದ್ದರೆ ಯಜಮಾನರ ಸೇವೆ ಮುಗಿಸಿ, ಒಂದು ಗಳಿಗೆ ಬಿಡುವು ಮಾಡಿಕೊಂಡು ಬಾ, ನಿನ್ನ ಹತ್ತಿರ ಒಂದೆರಡು ಮಾತಾಡೋದಿದೆ."

"ನೀನು ಒಂದು ಕೆಲಸ ಮಾಡು ನೀಲಾ, ಸ್ನಾನದ ಮನೆ ಎಲ್ಲಿದೆ ನನಗೆ ತೋರಿಸಿ ಬಂದುಬಿಡು. ನಾನೇ ಸ್ನಾನ ಮಾಡಿ ಬರುತ್ತೇನೆ. ಅಷ್ಟರೊಳಗೆ ತಾಯಿ–ಮಕ್ಕಳು ಏನು ಮಾತಾಡಬೇಕಾಗಿದೆಯೋ ಆಡಿಕೊಳ್ಳಿ. ಹಾಗೇ ಗಾಡಿಯಲ್ಲಿ ನನ್ನ ಪೆಟ್ಟಿಗೆ ಇದೆ, ಮೇಲಕ್ಕೆ ತರಿಸಿಟ್ಟುಬಿಡು."

—ಎಂದು ಮಾಧವರಾಯನೇ ಹೇಳಿದ.

"ಉಂಟೆ....ಅವಳೇ ನಿಮಗೆ ಸ್ನಾನಮಾಡಿಸಬೇಕು...."

"ಇವತ್ತೊಂದು ದಿನ ಇಲ್ಲದಿದ್ದರೆ ಚಿಂತೆಯಿಲ್ಲ. ಆಮೇಲೆ ದಿನವೂ ಇದ್ದೇಇದೆಯಲ್ಲ ಅವಳ ಕೈಲಿ ಸೇವೆ ಮಾಡಿಸಿಕೊಳ್ಳೋದು.'

ರೀತಿ ಮಾಡಲು ಒಪ್ಪಿದರು.

ಅದರಂತೆಯೇ ನೀಲಾ ಮಾಧವರಾಯನಿಗೆ ಸ್ನಾನದ ಮನೆಯನ್ನು ತೋರಿಸಿ, ಆತನ ಸ್ನಾನಕ್ಕೆ ಎಲ್ಲಾ ಅಣಿಮಾಡಿಕೊಟ್ಟು ನಾಗರತ್ನಳ ಬಳಿಗೆ ಬಂದು ಕುಳಿತಳು.

ನಾಗರತ್ನ ನೀಲಾಗೆ ತನ್ನ ಯೋಚನೆಯನ್ನೆಲ್ಲಾ ಸೂಕ್ಷ್ಮವಾಗಿ ತಿಳಿಸಿ—

"ಈಗ ಹೇಗೆ ಮಾಡೋದು ನೀಲಾ" ?

—ಎಂದು ಕೇಳಿದಳು.

ಆಕೆ ಹೇಳಿದುದನ್ನು ಕೇಳಿ ನೀಲಳ ಮುಖ ಗಂಭೀರವಾಗಿ—

"ಇವರು ಓಂ ಪ್ರಥಮ ಅಂತ ಬರ್‍ತಿದ್ದ ಹಾಗೇ ಇದೊಂದು ಶನಿ ಗಂಟು ಬಿತ್ತಲ್ಲಾ.... ಈಗದಕ್ಕೆ ಏನು ಮಾಡೋದು ಅಂತೀಯ...."

"ನನಗೂ ಅದೇ ಹೊಳೀತಾ ಇಲ್ಲ...."

"ತಾವಾಗಿ ಬಂದೋರನ್ನ ಹೋಗು ಅಂದ್ರೆ ಇನ್ನೊಂದು ಸಲ ಇಲ್ಲಿಗೆ ಕಾಲಿಡ್ತಾರೆಯೇ ?

"ಛಿ, ಅದು ಕೂಡಲೇ ಕೂಡದು."

"ಮತ್ತೆ—?"

"ಅದಕ್ಕೇ ನಾನೊಂದು ಯೋಚನೆ ಮಾಡಿದೀನಿ; ಅದಕ್ಕೆ ನಿನ್ನ ಯಜಮಾನರನ್ನು ಒಪ್ಪಿಸೋದು ನಿನ್ನ ಭಾರ."

"ಏನು ಹೇಳು ?"

ಆ ಪ್ರಶ್ನೆಗೆ ಉತ್ತರವಾಗಿ ನಾಗರತ್ನ ತನ್ನ ತಲೆಯಲ್ಲಿ ಹೊಳೆದ ಪರಿಹಾರೋಪಾಯವನ್ನು ನೀಲಳಿಗೆ ತಿಳಿಸಿದಳು. ನಾಗರತ್ನ ಹೇಳಿದುದನ್ನು ಕೇಳಿ ನೀಲಾ—

"ಆಯಿತು ಕೇಳಿ ನೋಡ್ತೀನಿ"—ಎಂದಳು.

"ಕೇಳೋದಲ್ಲ, ನೀಲಾ. ಒಪ್ಪಿಸಲೇ ಬೇಕು. ಸದ್ಯಕ್ಕೆ ಇದೊಂದೇ ದಾರಿ. ಮುಂದಕ್ಕೆ ಬೇರೆ ಏನಾದ್ರೂ ನೋಡೋಣ."

## ೨೧

ಮಾಧವರಾಯ ಸ್ನಾನ ಮುಗಿಸಿಕೊಂಡು ಬರುವ ವೇಳೆಗೆ, ನೀಲಾ ಕೆದರಿದ ಹಾಸಿಗೆಯನ್ನು ಸರಿಪಡಿಸಿ, ಆತನಿಗೆ ಉಪಾಹಾರ ತಂದಿಟ್ಟುಕೊಂಡು ಕಾಯುತ್ತಿದ್ದಳು.

ಸ್ನಾನ ಮುಗಿಸಿಕೊಂಡು ಬಂದ ಮಾಧವರಾಯ, ಆ ವೇಳೆಗೆ ಆಳು ನೀಲಳ ಕೋಣೆಯಲ್ಲಿ ತಂದಿರಿಸಿದ ತನ್ನ ಪೆಟ್ಟಿಗೆಯಿಂದ ಒಗೆದ ಉಡುಪುಗಳನ್ನು ತೆಗೆದು ಧರಿಸಿ, ನೀಲಾ ಕೊಟ್ಟ ಫಲಾಹಾರದ ತಟ್ಟೆಯನ್ನು ಕೈಯಲ್ಲಿ ಹಿಡಿದು—

"ನಿನ್ನ ಫಲಾಹಾರವಾಯಿತೆ, ನೀಲಾ ?"

—ಎಂದು ಕೇಳಿದ.

"ಇನ್ನೂ ಇಲ್ಲ. ನಿಮ್ಮದಾಗದೆಯೇ ನಾನು ತಿನ್ನುತ್ತೇನೆಯೇ ?"

"ಕೊಡು, ಆ ಕಟ್ಟುಪಾಡೆಲ್ಲಾ ಮದುವೆ ಮಾಡಿಕೊಂಡ ಹೆಂಡತಿಗೆ ಮಾತ್ರ ; ನಿನಗೆ ಅನ್ವಯಿಸುವುದಿಲ್ಲ. ಇಲ್ಲಿ ಬಾ."—ಎಂದು ನೀಲಳನ್ನು ತನ್ನ ಪಕ್ಕದಲ್ಲಿಯೇ ಕೂಡಿಸಿಕೊಂಡು, ಮೊದಲ ತುತ್ತನ್ನು ಅವಳಿಗೆ ತಿನಿಸಲೆಂದು ಅವಳ ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಂಡು, ಅವಳ ಮುಖ ಚಿಂತಾಕುಲವಾಗಿದ್ದುದನ್ನು ಕಂಡು—

"ಇದೇನು ನೀಲಾ ಹೀಗಿದ್ದೀಯ ?"

—ಎಂದು ಕೇಳಿದ.

"ಹೇಗಿದ್ದೇನೆ, ಆಗ ಇದ್ದ ಹಾಗೇ ಇದೇನೆಲ್ಲಾ...."

"ಸುಳ್ಳು, ನಾನು ಸ್ನಾನಕ್ಕೆ ಹೋಗುವ ಮೊದಲು ನಿನ್ನ ಮುಖ ನಗುವಿನಿಂದ ಕಳಕಳಿಸುತ್ತಿತ್ತು ; ಈಗ ಚಿಂತೆಯಿಂದ ಬತ್ತಿಹೋಗಿದೆ. ಅಷ್ಟರಲ್ಲೇ ಏನಾಯಿತು ನೀಲಾ ? ನಾಗರತ್ನ ಏನಾದರೂ ಅಂದಳೆ ?"

"ಉಹೂ."

"ಮತ್ತೆ ?"

"ಏಕೋ ನನ್ನ ಅದೃಷ್ಟ ಚೆನ್ನಾಗಿಲ್ಲ. ಅದಕ್ಕೇ ಬೇಸರವಾಯಿತು."

"ಹಾಗೆಂದರೇನು ನೀಲಾ ? ನಿನ್ನ ಅದೃಷ್ಟಕ್ಕೇನು ಊನ ಬಂದಿದೆ,

"ಇಲ್ಲ. ಹಾಗಾಗಿದ್ದರೆ, ಇಂಥ ತಾಪತ್ರಯ ಎಂದು ಹೇಳಿದ್ದರೆ ನೀವು ನಿವಾರಿಸುತ್ತಿರಲಿಲ್ಲವೇ? ಆ ಯೋಚನೆಯೇ ನನಗಿಲ್ಲ."

"ಮತ್ತಿನ್ನೇನು ಯೋಚನೆ?"

"ಇಷ್ಟು ದಿನ ನಿಮ್ಮನ್ನು ಅಗಲಿರಲಾರದೆ ನೀವು ಯಾವಾಗ ಬರುತ್ತೀರೋ, ಎಂದು ಬರುತ್ತೀರೋ ಎಂದು ಕಾದದ್ದಾಯಿತು. ಇವತ್ತು ನನ್ನ ಅದೃಷ್ಟ ತೆರೆದ ಹಾಗೆ ನೀವು ಬಂದಿರಿ. ಈಗಲಾದರೂ ನಾಲ್ಕು ದಿನ ನಿಮ್ಮ ಜೊತೆಯಲ್ಲಿ ಹಾಯಾಗಿರೋಣ ಎಂದರೆ ನನ್ನ ದುರಾದೃಷ್ಟ ಅದಕ್ಕೂ ಅಡ್ಡಿ ತಂದಿಟ್ಟಿದೆ...."

"ಅಂಥದು ಏನಾಯಿತು ನೀಲಾ?"

"ನಾನೇ ನಿಮ್ಮನ್ನು ಬಿಟ್ಟುಹೋಗಬೇಕಾಗಿ ಬಂದಿದೆ...."

"ಹಾಗಂದರೇನು, ಎಲ್ಲಿಗೆ ಹೋಗಬೇಕು....?"

—ನೀಲಾ ಹೇಳಿದುದನ್ನು ಕೇಳಿ ಕೈಯಲ್ಲಿದ್ದ ಫಲಾಹಾರದ ತಟ್ಟೆಯನ್ನು ನೆಲದ ಮೇಲೆ ಕುಕ್ಕಿ ಕೇಳಿದ ಮಾಧವರಾಯ.

"ಬನ್ನೂರಿಗೆ"

"ಏಕೆ?"

"ಅಲ್ಲಿ ನಮ್ಮ ಚಿಕ್ಕಮ್ಮ ಒಬ್ಬಾಕೆ ಇದ್ದಾಳೆ. ಆ ಮನೆಯಲ್ಲಿ ಯಾರಿಗೋ ಸಖತ್ ಖಾಯಿಲೆಯಂತೆ, ನೋಡಿಕೊಂಡು ಹೋಗುವುದಕ್ಕೆ ಈಗಲೇ ನೀಲಳನ್ನು ಕಳಿಸು ಎಂದು ಚಿಕ್ಕಮ್ಮ ಆಳನ್ನು ಕಳಿಸಿದ್ದಳಂತೆ."

"ಈ ಸುದ್ದಿ ನಿಮಗೆ ಯಾವಾಗ ತಿಳಿಯಿತು?"

"ನಾವು ಇಲ್ಲಿ ಮಾತಾಡುತ್ತಾ ಕೂತಿದ್ದೆವಲ್ಲಾ, ಆವಾಗ ಆಳು ಬಂದು ಸುದ್ದಿ ಹೇಳಿದನಂತೆ. ಈಗ ನನಗೆ ಪ್ರಾಣಸಂಕಟಕ್ಕೆ ಬಂದಿದೆ- —ಹೋಗುವುದಕ್ಕಿಲ್ಲ. ಹೋಗದೆ ಇರುವುದಕ್ಕಿಲ್ಲ. ಈ ಉಭಯ ಸಂಕಟಕ್ಕೆ ಸಿಕ್ಕಿ ನಾನು ಪಡಿಪಾಟಲು ಪಡುತ್ತಿದ್ದೇನೆ. ನಿಮ್ಮನ್ನು ಬಿಟ್ಟು ಹೋಗುವುದಕ್ಕೆ ನನಗೆ ಸುತರಾಂ ಮನಸ್ಸಿಲ್ಲ...."

"ನನಗೂ ನಿನ್ನನ್ನು ಬಿಟ್ಟಿರುವುದು ಸಾಧ್ಯವಿಲ್ಲ. ನೀಲಾ, ನನ್ನನ್ನು ನಿರಾಶೆಗೊಳಿಸಿ ಹೋಗಿಬಿಡಬೇಡ."

—ನೀಲಳನ್ನು ತಬ್ಬಿಕೊಂಡು ಉತ್ಕಂಠಿತನಾಗಿ ಹೇಳಿದ ಮಾಧವ-

"ನಿಮ್ಮ ಮನಸ್ಸು ನಾನು ಕಾಣೆನೇ? ಅಮ್ಮನಿಗೆ ನಾನೂ ಅದೇ ಮಾತು ಹೇಳಿದೆ. ಆಕೆಗೂ ನಮ್ಮನ್ನು ಅಗಲಿಸಲು ಇಷ್ಟವಿಲ್ಲ."

"ಹಾಗಾದರೆ ಈಗ ಏನು ಮಾಡುವುದು?"

"ನಾನೊಂದು ಉಪಾಯ ಹೇಳಿದೆ; ಅಮ್ಮನೂ ಅದಕ್ಕೆ ಒಪ್ಪಿಕೊಂಡಳು. ನೀವೂ ಒಪ್ಪಿದರೆ ನಾವು ಅಗಲಿರಬೇಕಾದುದಿಲ್ಲ...."

"ಏನು?"

"ನನ್ನ ಜೊತೆಯಲ್ಲಿ ನೀವೂ ಬನ್ನೂರಿಗೆ ಬಂದುಬಿಡಿ."

"ಹಾಗೆ ಬಂದರೆ ಚೆನ್ನಾಗಿರುತ್ತದೆಯೇ?"

"ಚಿಕ್ಕಮ್ಮ ಏನೂ ತಪ್ಪು ತಿಳಿದುಕೊಳ್ಳುವುದಿಲ್ಲ. ನಾನು ಅಂದರೆ ಆಕೆ ಪ್ರಾಣ ಕೊಡುತ್ತಾಳೆ. ಅಲ್ಲದೆ ಆಕೆಯ ಮನೆಯಲ್ಲಿ ಹೆಚ್ಚು ಜನವೂ ಇಲ್ಲ. ನಾವೂ ಹಾಯಾಗಿರಬಹುದು. ಆದರೆ.... ನನ್ನ ಜೊತೆ ಎಲ್ಲಿಗೆಂದರೆ ಅಲ್ಲಿಗೆ ಬರಲು ಬೇಸರವಾಗುತ್ತದೆಯೋ ಏನೋ."

"ನಿನ್ನ ಜೊತೆಯಲ್ಲಿ ಹೋಗುವುದೆಂದರೆ ಬನ್ನೂರಿಗಲ್ಲ, ಬ್ರಹ್ಮಲೋಕಕ್ಕಾದರೂ ನಾನು ಬರಲು ತಯಾರಿದ್ದೇನೆ, ನೀಲಾ. ನನ್ನಿಂದ ನಿನಗೆ ಮಾತ್ರ ಯಾವುದೇ ತೊಂದರೆಯೂ ಆಗದಿದ್ದರೆ ಸರಿ."

"ನಿಮ್ಮಿಂದ ನಮಗೆ ತೊಂದರೆಯೇ? ನೀವು ಜೊತೆಯಲ್ಲಿದ್ದರೆ ನರಕವೂ ನನ್ನ ಪಾಲಿಗೆ ಸ್ವರ್ಗವಾಗುತ್ತೆ. ಅದಕ್ಕೇ ನೀವೂ ನನ್ನ ಜೊತೆ ಬರುತ್ತೀರೇನೋ ಎಂದು ಆಸೆಪಟ್ಟದ್ದು...."

"ನಿನ್ನ ಆಸೆ, ನನ್ನ ಆಸೆ ಎಂದೂ ಬೇರೆಯಲ್ಲ. ಯಾವಾಗ ಬೇಕಾದರೂ ಬನ್ನೂರಿಗೆ ಹೊರಡು. ಹೇಗೂ ನನ್ನದೇ ಗಾಡಿ ಆಳು ಇದೆ."

—ಎಂದ ಮಾಧವರಾಯ.

ಆ ಮಾತನ್ನು ಕೇಳಿದ ನೀಲಾ, ಮಾಧವರಾಯನನ್ನು ತನ್ನ ಎದೆಗೆ ಬಿಗಿಯಾಗಿ ತಬ್ಬಿಕೊಂಡು—

"ನಿಮ್ಮಂಥವರ ಕೈ ಹಿಡಿದದ್ದು ನನ್ನ ಏಳೇಳು ಜನ್ಮಗಳ ಪುಣ್ಯಫಲ"

# ೨೨

ನೀಲಳೊಂದಿಗೆ ಮಾಧವರಾಯ ಬನ್ನೂರಿಗೆ ಹೊರಡಲು ಒಪ್ಪಿದುದರಿಂದ, ನಾಗರತ್ನಳ ತಲೆಯನ್ನು ತಿನ್ನುತ್ತಿದ್ದ ಸಮಸ್ಯೆ ತಾತ್ಕಾಲಿಕವಾಗಿ ಪರಿಹಾರವಾದಂತಾಗಿತ್ತು.

ನೀಲಳು ಮಾಧವರಾಯನ ಒಪ್ಪಿಗೆಯ ವಿಷಯವನ್ನು ಸೂಚಿಸುತ್ತಿದ್ದ ಹಾಗೇ, ಮಾಧವರಾಯ ಗಂಜಾಂನಲ್ಲಿರಲು ಹೆಚ್ಚು ಹೊತ್ತು ಅವಕಾಶ ಕೊಟ್ಟರೆ, ಎಲ್ಲಿ ಅವನು ಅಯ್ಯಂಗಾರ್ಯರನ್ನು ಜ್ಞಾಪಿಸಿಕೊಂಡು, 'ಅವರನ್ನು ನೋಡಿಕೊಂಡು ಬಂದುಬಿಡುತ್ತೇನೆ.' ಎಂದು ಹೇಳುತ್ತಾನೋ ಎಂಬ ಭಯದಿಂದ, ಆತ ಮನೆಯಲ್ಲಿ ಊಟ ಮಾಡಲು ಅವಕಾಶ ಕೊಡದೆ—

"ಮನೇಲಿ ಊಟ ಮಾಡೋದು ದಿನಾ ಹೇಗೂ ಇದ್ದೇ ಇದೆ. ದಾರೀಲಿ ಉದ್ದಕ್ಕೂ ಹೊಳೆ ಇದೆ. ಇಲ್ಲಿಂದ ಬುತ್ತಿ ಕಟ್ಟಿಕೊಂಡು ಹೋದರೆ, ದಾರೀಲಿ ಎಲ್ಲಿ ಬೇಕೋ ಅಲ್ಲಿ ಹಾಯಾಗಿ ಊಟಮಾಡಬಹುದು."

—ಎಂದು ಊಟಕ್ಕೆ ಮುನ್ನವೇ ಅವರಿಬ್ಬರನ್ನೂ ಅಲ್ಲಿಂದ ಸಾಗುಹಾಕಲು ಹದಿಹಾಕಿದಳು.

ನಾಗರತ್ನಳ ಆ ಆಲೋಚನೆ ಮಾಧವರಾಯನಿಗೂ ಅಪ್ರಿಯವಾಗಲಿಲ್ಲ. ಆತನೂ ಅದಕ್ಕೆ ಉತ್ಸಾಹದಿಂದಲೇ ಸಮ್ಮತಿಸಿದ....

ಹಾಗಾಗಿ—

ಹಗಲು ಗಂಜಾಂಗೆ ಬಂದ ಮಾಧವರಾಯ, ಮಧ್ಯಾಹ್ನದ ವೇಳೆಗೆ ಬನ್ನೂರಿಗೆ ದಾರಿ ಹಿಡಿದ.

ಶ್ರೀರಂಗಪಟ್ಟಣದಿಂದ ಬನ್ನೂರಿಗೆ ಕೇವಲ ಹತ್ತು–ಹನ್ನೆರಡು ಮೈಲಿಗಳ ಪ್ರಯಾಣ. ಅದರಲ್ಲೂ ಕುದುರೆಗಾಡಿಯ ಪ್ರಯಾಣವಾದುದರಿಂದ, ಎಷ್ಟು ತಡವಾದರೂ ಮೂರು–ನಾಲ್ಕು ಗಂಟೆಗಳಲ್ಲಿ ಬನ್ನೂರನ್ನು ತಲುಪಬಹುದು ಎಂಬ ನಂಬಿಕೆಯಿದ್ದುದರಿಂದ, ಅವರು ಹೋಗಲಿದ್ದ ದಾರಿ, ಪಟ್ಟಣದಿಂದ ತಿರುಮಕೂಡಲು ತಲಕಾಡುಗಳಿಗೆ ಹೋಗುವ ರಾಜಮಾರ್ಗವಾದುದರಿಂದ, ಮಾಧವರಾಯ ಗಾಡಿಯವನಿಗೆ, 'ಕುದುರೆಗಳಿಗೆ ಹೆಚ್ಚು ಆಯಾಸವಾಗದಂತೆ ನಿಧಾನವಾಗಿ ಗಾಡಿ ನಡೆಸು' ಎಂದು ಅಪ್ಪಣೆ ಮಾಡಿ

ನೀಲಳೊಂದಿಗೆ ಗಾಡಿಯನ್ನೇರಿದ.

ಗಾಡಿಯ ಎರಡು ಪಕ್ಕದಲ್ಲಿದ್ದ ಸಣ್ಣ ಕಿಟಕಿಗಳಿಗೆ, ಗಾಡಿಯ ಒಳ ಗಿರುವ ಜನ, ರಸ್ತೆಯಲ್ಲಿ ಓಡಾಡುವವರಿಗೆ ಕಾಣದಂತೆ, ತೆಳುವಾದ ರೇಶಿಮೆಯ ತೆರೆ ಹಾಕಿದ್ದರಿಂದ, ಗಾಡಿಯವನಿಗೂ ಒಳಗೆ ನಡೆಯುವ ಯಾವುದೂ ಕಾಣುವ ಅವಕಾಶವಿಲ್ಲದುದರಿಂದ, ಮೃದುವಾದ ಮಖಮಲಿನ ತೆರೆಗಳನ್ನು ಹಾಕಿದ ಗಾಡಿ, ಮಾಧವರಾಯನ ಪಾಲಿಗೆ, ಚಲಿಸುವ 'ಶಯ್ಯಾಗೃಹ'ವಾಗಿ ಪರಿಣಮಿಸಿತು.

ಗಾಡಿಯ ಆಳಿಗೆ, ಐದಾರು ಮೈಲಿ ದೂರ ಹೋದಮೇಲೆ, ಊಟಕ್ಕೆ ಅನುಕೂಲವಾದ ಕಡೆಯಲ್ಲಿ, ನದಿಗೆ ಸಮೀಪವಾದ ಸ್ಥಳದಲ್ಲಿ ಗಾಡಿಯನ್ನು ನಿಲ್ಲಿಸಿ ತನಗೆ ಹೇಳುವಂತೆ ಅಪ್ಪಣೆ ಮಾಡಿ, ಗಾಡಿ ಪಟ್ಟಣದ ಗಜಿಬಿಜಿಯಿಂದ ದೂರವಾಗುತ್ತಿದ್ದ ಹಾಗೇ, ತನ್ನ ಎದುರುಬದಿಯಲ್ಲಿ ಕುಳಿತಿದ್ದ ನೀಲಳನ್ನು ತನ್ನ ಪಕ್ಕಕ್ಕೆ ಎಳೆದುಕೊಂಡು, ತನ್ನ ಎದೆಯಮೇಲೆ ಅವಳನ್ನು ಒರಗಿಸಿಕೊಂಡ.

ನೀಲಳ ಮೃದುವಾದ, ಸುಖೋಷ್ಣವಾದ ದೇಹದ ಹಿತವಾದ ತಬ್ಬುವಿಕೆ, ಗಾಡಿಯೊಳಗಿನ ನಿಶ್ಶಬ್ದ ಶಾಂತ ವಾತಾವರಣ, ನಿಧಾನವಾಗಿ ನಡೆಯುತ್ತಿದ್ದ ಕುದುರೆಯ ನಡಿಗೆಗೆ ಅಲುಗಿ, ಮಂದವಾಗಿ, ಅತ್ತಿಂದಿತ್ತ ತುಯ್ಯುತ್ತಿದ್ದ ತೂಗಾಟದಿಂದಾಗಿ, ಅವನ ಮನಸ್ಸು ನೀಲಳೊಂದಿಗೆ ಸರಸ ಸಲ್ಲಾಪ ನಡೆಸಬೇಕೆಂದು ಬಯಸುತ್ತಿದ್ದರೂ ಆಗದೆ, ನಿದ್ರೆ ಬಂದಿತು.

ಅವನ ಎದೆಗೆ ಮುಖ ಒರಗಿಸಿದ ನೀಲಳೂ, ನಿಶ್ಚಿಂತಳಾಗಿ ನಿದ್ರೆ ಹೋದಳು.

ಆಗ ನಿದ್ರೆ ಹೋದ ಅವರಿಬ್ಬರಿಗೂ ಎಚ್ಚರವಾದುದು, ಗಾಡಿಯಾಳು ಗಾಡಿಯನ್ನು ನಿಲ್ಲಿಸಿ 'ಬುದ್ಧಿ....ಬುದ್ಧಿ' ಎಂದು ಎಚ್ಚರಿಸಿದಾಗಲೇ.

ಆಳಿನ ಕರೆಯನ್ನು ಕೇಳಿ ಕಣ್ಣು ಹೊಸಗಿಕೊಂಡು ಎದ್ದ ನೀಲಾ ಗಾಡಿಯ ಕಿಟಕಿಯ ತೆರೆಯನ್ನು ಸರಿಸಿ ಹೊರಗೆ ಇಣುಕಿ ನೋಡಿದಳು—

ಹೊರಗೆ, ಅಪರಾಹ್ನದ ಸೂರ್ಯನ ಬಿಸಿಲು ಎಲ್ಲೆಡೆಯಲ್ಲೂ ಚೆಲ್ಲಿ, ನದಿಯ ನೀರಿನ ಮೇಲೆ ಲಕಲಕಿಸಿ ಹೊಳೆಯುತ್ತಿತ್ತು.

ಅದನ್ನು ನೋಡಿದ ನೀಲಳಿಗೆ ಮಾಧವರಾಯ ಗಾಡಿಯಾಳಿಗೆ ಮಾಡಿದ ಅಪ್ಪಣೆ ನೆನಪಾಗಿ, ಮಾಧವರಾಯನನ್ನು ಎಚ್ಚರಗೊಳಿಸಿದಳು.

'ಏಕೆ ನೀಲಾ ಎಚ್ಚರಿಸಿದೆ?'

—ನಿದ್ರೆಯಿಂದ ಎಚ್ಚತ್ತು ಮಾಧವರಾಯ ಕೇಳಿದ.

'ಊಟ ಮಾಡುವುದಕ್ಕೆ.'

'ಅದಕ್ಕೋಸ್ಕರ ಎಬ್ಬಿಸಬೇಕಾಗಿತ್ತೆ—ಊಟಕ್ಕಿಂತ ಈ ನಿದ್ರೆಯೇ ಎಷ್ಟೋ ಹಾಯಾಗಿತ್ತು........ವೇದಾಂತಿಗಳು ಯಾವ ಸುಖವೂ ಶಾಶ್ವತ ವಲ್ಲ ಎನ್ನುವುದು ಇವಕ್ಕೇ ಏನೋ... ನಡಿ, ಆ ಕೆಲಸ ಮುಗಿದು ಹೋಗಲಿ.

—ಎಂದು ಹೇಳಿ, ಮೇಲೆದ್ದು, ಗಾಡಿಯಿಂದ ಕೆಳಗಿಳಿದ, ನೀಲ ಳನ್ನೂ ಕೆಳಗಿಳಿಸಿಕೊಂಡು; ಗಾಡಿಯಲ್ಲಿದ್ದ ಊಟದ ಪಾತ್ರೆಗಳನ್ನು ಇಬ್ಬರು ಹಂಚಿಕೊಂಡು ನದಿಯಕಡೆ ನಡೆದರು.

ನದಿಯ ದಂಡೆಯ ಬಳಿಗೆ ಬರುವ ವೇಳೆಗೆ ಮಾಧವರಾಯನ ಕಣ್ಣನ್ನು ಕವಿದಿದ್ದ ನಿದ್ರೆಯ ಮಂಪರು ಹಾರಿ ಹೋಗಿ, ನದಿಯ ತೀರದ ಮನೋಹರ ದೃಶ್ಯ ಅವನ ಮನಸ್ಸನ್ನು ಸೆಳೆಯಿತು.

ಹೆಚ್ಚು ಆಳವಿಲ್ಲದ ಪಾತ್ರದಲ್ಲಿ ನದಿ ವಿಶಾಲವಾಗಿ ಹರಿಯುತ್ತಿತ್ತು. ನದಿಯ ವಕ್ಷದಲ್ಲಿ, ಅಲ್ಲಲ್ಲಿ ಬಿಸಲು ಕಾಯಿಸಲು ಮಲಗಿದ ಆನೆಗಳಂತೆ ಯಿದ್ದ ಕಪ್ಪು ಬಂಡೆಗಳಿದ್ದು, ಆ ಬಂಡೆಗಳಿಂದಾಗಿ, ನದಿಯ ನೀರು, ಬೃಹದಾಕಾರದ ಕನ್ನಡಿಯನ್ನು ಚೂರು ಚೂರು ಮಾಡಿ, ಆ ಚೂರುಗಳನ್ನು ಚೆಲ್ಲಾ ಪಿಲ್ಲಿಯಾಗಿ ತೂರಿದಂತೆ ಕಾಣುತ್ತಿತ್ತು.

ನದಿಯ ನೀರು ದಂಡೆಯಲ್ಲಿ ಬೆಳೆದು ನೀರಿನತ್ತ ಬಾಗಿದ ಹೊಂಗೆಯ ಮರದ ಎಲೆಗಳೊಂದಿಗೆ ಸರಸವಾಡುತ್ತಾ, ಬಂಡೆಗಳ ನಡುವೆ ನುಗ್ಗುವಾಗ ಸಣ್ಣ ಧ್ವನಿಯಲ್ಲಿ ಭೋರ್ಗರೆದು ನೊರೆ ಕಾರುತ್ತಾ ಹರಿಯುತ್ತಿತ್ತು.

ಹೀಗೆ ಒಂದೊಂದು ಕಡೆಯಲ್ಲಿ ಒಂದೊಂದು ಬಗೆಯ ಸೊಬಗನ್ನು ಬೀರುವ ನದಿಯ ನೀರು ಮಧ್ಯಾಹ್ನದ ಹೊಳವು ಬಿಸಿಲಿನಲ್ಲಿ ಅಚ್ಚ ನೀಲಿ ಯಾಗಿ ಕಾಣುವ ಮುಗಿಲಿನಲ್ಲಿ ಅಲ್ಲಲ್ಲಿ ತೇಲುತ್ತಿದ್ದ ಬಿಳಿಯ ಬಣ್ಣದ ಗರಿ ಮೋಡಗಳು, ಆ ಮೋಡಗಳಿಗೆ ಸಮೀಪವಾಗಿ, ರೆಕ್ಕೆಯಲುಗಿಸುವುದೂ ಕಾಣ ದಂತೆ ಹಾರುತ್ತಿದ್ದ ಹದ್ದುಗಳು, ನದಿಯ ದಂಡೆಗೆ ಅನತಿ ದೂರದಲ್ಲಿ, ಕಿರಿಯ ಬೋರೆಯೊಂದರ ಮೇಲೆ, ಸನಿಹದಲ್ಲಿ ಬೆಳೆದ ತೋಪಿನ ನೆರಳಿನಲ್ಲಿ ಧ್ಯಾನಕ್ಕೆ ನಿಂತ ಯೋಗಿಯಂತೆ ಅಚಲವಾಗಿದ್ದ ಸಣ್ಣ ದೇವಾಲಯವೊಂದರ ಗೋಪುರ, ನದಿಯ ಇದಿರು ದಂಡೆಯ ಮೇಲೆ, ಚಿತ್ರದಲ್ಲಿ ಚಿತ್ರಿಸಿದಂತೆ

ಕಾಣುತ್ತಿದ್ದ ತೆಂಗಿನ ತೋಟ—ಇವು ಒಂದೊಂದೂ, ಮಾಧವರಾಯನಿಗೆ ಅಪೂರ್ವ ಸುಂದರ ದೃಶ್ಯಗಳಂತೆ ಕಂಡು, ನದಿಯ ದಂಡೆಯ ಹೊಂಗೆಯ ಮರದ ನೆರಳಿನ ಹುಲ್ಲಿನ ಮೇಲೆ ಊಟಕ್ಕೆ ಅಣಿಮಾಡುತ್ತಿದ್ದ ನೀಲಳನ್ನು ನೋಡಿದ.

ಆ ಹೊಸ ವಾತಾವರಣದಲ್ಲಿ, ಪರಿಚಿತಳಾದ ನೀಲಳೂ, ಆ ವಾತಾವರಣದ ಸುಂದರತೆಯಿಂದ ಮೂಡಿಬಂದ ಅಪರಿಚಿತ ರೂಪಸಿಯಂತೆ ಕಂಡು ಬಂದು, ಅವಳ ಬಗ್ಗೆ ಅವನ ಮೋಹ ಉಕ್ಕಿ ಬಂದು—' ನೀಲಾ ' ಎಂದು ಕೂಗಿದ.

' ಏನು ? '

—ಇದ್ದಲ್ಲಿಂದಲೇ ಕೇಳಿದಳು ನೀಲಾ.

" ದೂರ ನಿಂತು ಕೇಳಬೇಡ. ಹತ್ತಿರ ಬಾ "

ಆತನ ಕರೆಯಂತೆ, ಮಾಧವರಾಯನ ಹತ್ತಿರ ಬಂದು ನಿಂತುಕೊಂಡು ನೀಲಾ 'ಏನು' ಎಂದು ಮತ್ತೊಮ್ಮೆ ಕೇಳಿದಳು. ಹುಲ್ಲಿನಮೇಲೆ ತಲೆಯೊರಗಿಸಿ ಕಾಲು ಚಾಚಿ ಮಲಗಿದ ಮಾಧವರಾಯ, ಹಾಗೇ ಕಣ್ಣೆತ್ತಿ ತನ್ನ ಬಳಿ ನಿಂತ ನೀಲಳನ್ನು ನೋಡಿದ.

ಊಟಕ್ಕೆ ಅಣಿಮಾಡುವ ಸಲುವಾಗಿ ನೀಲಾ, ಸೆರಗನ್ನು ಎಳೆದು ಸೊಂಟಕ್ಕೆ ಬಿಗಿದಿದ್ದುದರಿಂದ, ಅವಳ ತುಂಬುತೋಳುಗಳು, ಯೌವ್ವನ ಪ್ರಮತ್ತ ವಕ್ಷಸ್ಥಲ ಮತ್ತಷ್ಟು ಸ್ಫುಟವಾಗಿ ಕಂಡು, ಮಾಧವರಾಯನ ಮೋಹಕ್ಕೆ ಸಾಣೆಯಿಟ್ಟಂತಾಗಿ—

"ಒಂದು ಕ್ಷಣ ಇಲ್ಲಿ ಬಂದು ಕುಳಿತುಕೋ ನೀಲಾ."

—ಎಂದು ಹೇಳಿ, ತಾನೇ ಅವಳ ಕೈಯನ್ನು ಹಿಡಿದು ಜಗ್ಗಿ ತನ್ನ ಪಕ್ಕದಲ್ಲಿ ಕೂಡಿಸಿಕೊಂಡು, ಅವಳ ನೀಳವಾದ ಕೈಬೆರಳುಗಳನ್ನು ನೇವರಿಸುತ್ತಾ—

"ಈ ನದಿಯನ್ನು ನೋಡಿದರೆ ನನಗೇನು ನೆನಪಾಗುತ್ತದೆ ಗೊತ್ತೆ. ನೀಲಾ ?"

—ಎಂದು ಕೇಳಿದ.

"ಏನು ?"

"ನದಿಯ ನೀರನ್ನು ನಾನು ಎಷ್ಟೋ ಸಲ ನೋಡಿದ್ದೇನೆ. ಆದೂ

ಒಂದೇ ನದಿಯಲ್ಲ—ಪೂನಾದ ಬಳಿಯ ಮೂಳಾ, ಕೃಷ್ಣಾ, ವರದಾ, ತುಂಗಭದ್ರಾ, ಕಾವೇರಿ, ನಮ್ಮೂರಿನ ಬಳಿಯ ನಾಗರ ಹೊಳೆ. ಹೀಗೇ ಒಂದಲ್ಲ ನೂರು ನದಿಯನ್ನು ನೋಡಿದೇನೆ...."

"ಅಷ್ಟು ದೇಶ ಸುತ್ತಿದೀರಾ ನೀವು ?"

"ಹೂ."

"ಅಲ್ಲಿಲ್ಲಾ ಏಕೆ ಹೋಗಿದ್ದೀರಿ ?"

"ಏಕೋ—ಆ ಮಾತು ಈಗ ಬೇಡ; ಇನ್ನೊಂದಾದರೂ ಹೇಳುತ್ತೇನೆ ....ನಾನು ಎಷ್ಟೋ ನದಿಗಳನ್ನು ನೋಡಿದೇನೆ,' ಒಂದೇ ನದಿಯನ್ನು ಎಷ್ಟೋ ಬಾರಿ ನೋಡಿದೇನೆ—ಬೇರೆ ಬೇರೆ ಋತುಗಳಲ್ಲಿ, ಸ್ಥಳಗಳಲ್ಲಿ. ಒಂದೇ ದಿನವೇ ನದಿಯ ದಂಡೆಯಲ್ಲಿ ನಿಂತು, ನದಿಯನ್ನು ನೋಡಿದೇನೆ. ಹೇಗೆ ನೋಡಿದರೂ, ಎಷ್ಟು ನೋಡಿದರೂ, ಈ ನದಿಯ ನೀರು ಹಳತಾಗಿ ಕಾಣದೆ, ಒಂದೊಂದು ಬಾರಿಯೂ, ಹೊಚ್ಚ ಹೊಸದಾಗಿ, ಆಗಲೇ ಮೊದಲಬಾರಿಗೆ ಅದನ್ನು ನೋಡುತ್ತಿರುವಂತೆ ಕಾಣುತ್ತದೆ—ಇದನ್ನು ನೋಡಿ ನದಿಯ ನೀರಿನ ಈ ಸೌಂದರ್ಯದ ವಿನೂತನತೆಯ ರಹಸ್ಯವನ್ನು ಭೇದಿಸ ಲಾಗದೆ ಮುಗ್ಧನಾಗಿದ್ದೇನೆ. ಈಗ ನಿನ್ನನ್ನು ನೋಡಿ ನನಗೆ ಏನು ಅನಿಸು ತ್ತಿದೆ ಗೊತ್ತೆ ?"

"ಏನು ?"

"ನಿನ್ನ ಸೌಂದರ್ಯವೂ ಈ ನದಿಯ ಸೌಂದರ್ಯವಿದ್ದ ಹಾಗೇ, ಎಷ್ಟು ಪರಿಚಿತವೋ, ಅಷ್ಟೇ ಅಪರಿಚಿತ; ಅಷ್ಟೇ ಚಿರ ವಿನೂತನ; ಒಮ್ಮೊಮ್ಮೆಯೂ ಹೆಚ್ಚು ಸುಂದರತರ."

ಕವಿಯಂತೆ ಮಾಧವರಾಯ ಆಡಿದ ಮಾತುಗಳ ಅರ್ಥ ನೀಲಳಿಗೆ ಆಗಲಿಲ್ಲ. ಅವಳಿಗೆ ಅರ್ಥವಾದುದಿಷ್ಟೇ : ಮಾಧವರಾಯ ತನ್ನ ಸೌಂದರ್ಯ ಪ್ರಶಂಸೆ ಮಾಡುತ್ತಿದ್ದಾನೆ.

ಪ್ರಶಂಸೆಯಿಂದ ತೃಪ್ತಳಾಗಿ ಹೇಳಿದಳು ನೀಲಾ—

"ನಾನು ಹೇಗಿದ್ದರೇನು, ನಿಮ್ಮ ಕಣ್ಣಿಗೆ ನಾನು ಅಂದವಾಗಿ ಕಂಡರೆ ಅಷ್ಟು ನನಗೆ ಸಾಕು."

ನೀಲಾ ಆಡಿದ ಆ ಮಾತುಗಳು ಮಾಧವರಾಯನಿಗೆ ಅಪೂರ್ವ ರಾಗಾಲಾಪದಂತೆ ಸಂತೋಷವನ್ನುಂಟುಮಾಡಿ—

"ನೀಲಾ, ನನ್ನ ಮನಸ್ಸಿನಲ್ಲಿ ಬಹಳ ದೊಡ್ಡದೊಂದು ಆಸೆಯಿದೆ...."

"ಏನು ?"

"ಒಂದು ದಿನ, ತುಂಬು ಹುಣ್ಣಿಮೆಯ ರಾತ್ರಿ, ಬೆಳುದಿಂಗಳಿನ ಬೆಳಕಿನಲ್ಲಿ, ನಿನ್ನೊಂದಿಗೆ ನಾನು ಮೊದಲ ದಿನ ಸುಖಿಸಿದಾಗ ಉಟ್ಟಿದ್ದೆಯಲ್ಲಾ ಹಾಗೆ ಅಚ್ಚಬಿಳುಪಿನ ಬಟ್ಟೆಗಳನ್ನುಟ್ಟು, ಬೆಳುದಿಂಗಳ ಬೆಳಕಿನಲ್ಲಿ ಕಡೆದ ಅಪ್ಸರತಶಿಲಾ ವಿಗ್ರಹದಂತೆ ಶೋಭಿಸುವ ನಿನ್ನ ತೊಡೆಯಮೇಲೆ ಮಲಗಿಕೊಂಡು, ಕ್ಷೀರಧಾರೆಯಂತೆ ಹರಿಯುವ ನದಿಯಲ್ಲಿ ನೌಕಾವಿಹಾರ ಮಾಡಬೇಕು ಎಂದು ಬಹಳ ಆಸೆಯಿದೆ."

"ನಿಮಗೆ ಅದರಲ್ಲಿ ಅಷ್ಟು ಆಸೆಯಿಧೆಯೋ ?"

"ಹೂ."

" ಹಾಗಿದ್ದರೆ ಅದಕ್ಕೇನು ಮುಟ್ಟಿಸಬೇಕು. ಹುಣ್ಣಿಮೆಯ ಹಿಂದಿನ ದಿನ ತಿರುಮುಕೂಡಲಿಗೆ ಹೋದರೆ, ನಿಮ್ಮ ಬಯಕೆಯನ್ನು ತೀರಿಸಿಕೊಳ್ಳಬಹುದು. ಅದೇನು ದೊಡ್ಡದು.

"ನನ್ನ ಆಸೆ ನಿನಗೂ ಪ್ರಿಯವೇ ನೀಲಾ ?"

"ಅಲ್ಲದೇನು—ನಿಮ್ಮ ಆಸೆಯೇ ನನ್ನ ಆಸೆ; ನಿಮಗೆ ಏನು ಇಷ್ಟವೋ, ನನಗೂ ಅದೇ ಇಷ್ಟ.''

ನೀಲಾ ಹೇಳಿದುದನ್ನು ಕೇಳಿ ಮಾಧವರಾಯನಿಗೆ ಅವಳ ಬಗ್ಗೆ ಮೋಹ ಕಾರ್ಗಾಲದ ಕೆರೆಯಂತೆ ಅಪ್ರತಿಹತವಾಗಿ ನುಗ್ಗಿ ಬಂದು, ಅವಳನ್ನು ಬರಸೆಳೆದು ಚುಂಬಿಸಿ—

"ನಿನ್ನ ಈ ಪ್ರೇಮಕ್ಕೆ ನಿನಗೇನು ಬಹುಮಾನ ಕೊಡಲಿ ?"

—ಎಂದು ಹೇಳಿದ.

"ನಾನೇನು ಕೇಳಿದರೂ ಕೊಡುತ್ತೀರಾ ?"

"ಖಂಡಿತವಾಗಿಯೂ. ಅದೇನು ಹೇಳು."

"ಇದೇ ಮಾತು—?"

"ಇದೇ ಮಾತು."

—ನೀಲಳ ಕೈಮೇಲೆ ಕೈ ಹಾಕಿ ಹೇಳಿದ ಮಾಧವರಾಯ —

"ನಿನಗೆ ಅದೇನು ಬೇಕು ಹೇಳು."

"ನೀವು ಅಷ್ಟು ಮಾತು ಕೊಟ್ಟರೆ ಸರಿ. ನಿಮ್ಮ ಆಸೆ ತೀರಿದ ದಿನ ನನ್ನ ಆಸೆ ಏನೆಂದು ಹೇಳುತ್ತೇನೆ."

"ಅದಕ್ಕೇಕೆ ಅಷ್ಟು ದಿನ ಕಾಯಬೇಕು? ನಿನಗೆ ಏನು ಬೇಕೋ ಈಗಲೇ ಹೇಳು."

"ಉಹುಂ, ಈಗ ನಾನೇನೂ ಹೇಳುವುದಿಲ್ಲ."

"ಅಂದರೆ—ಈಗ ನಿನಗೇನೂ ಬೇಡವೇ ?"

ಮಾಧವರಾಯನ ಮಾತನ್ನು ಕೇಳಿ ನೀಲಾ ನಸುನಕ್ಕು ಆತನ ಮುಖವನ್ನೇ ನೋಡುತ್ತಾ ಹೇಳಿದಳು—

"ಈಗ ನನಗೆ ಬೇಕಾದುದೊಂದೇ !"

"ಏನು ?"

"ನೀವು !"

—ಎನ್ನುತ್ತಾ ನೀಲಾ ತನ್ನ ತಲೆಯನ್ನು ಮಾಧವರಾಯನತ್ತ ಬಾಗಿದಳು.

ಆ ಆಹ್ವಾನದ ಅರ್ಥವನ್ನರಿತ ಮಾಧವರಾಯ, ಬೇರೇನೂ ಮಾತನಾಡದೆ ತನ್ನತ್ತ ಬಾಗಿದ ಅವಳ ತಲೆಯನ್ನು ತನ್ನ ಮುಖದತ್ತ ಎಳೆದುಕೊಂಡು, ನೀಲಳ ಬಯಕೆಯಿಂದ ಬಿರಿದ ತುಟಿಗಳನ್ನು ಬಿಗಿಯಾಗಿ ಚುಂಬಿಸಿದ.

ಆ ಚುಂಬನದ ಅಮಲಿನಲ್ಲಿ ಆತನಿಗೆ ನದಿ, ಬಯಲು, ಊಟ ಎಲ್ಲವೂ ಮರೆತುಹೋಯಿತು.

## ೨೩

ತೆಂಗು, ಅಡಿಕೆ, ಕಬ್ಬು, ಬಾಳೆಯ ತೋಟಗಳಿಂದ ಸುತ್ತುವರಿಯಲ್ಪಟ್ಟು ಆ ಪಚ್ಚೆಯ ಕುಂದಣದಲ್ಲಿ ಶೋಭಿಸುವ ಕಾವೇರೀ ತಡಿಯ ಪ್ರಾಚೀನ ಅಗ್ರಹಾರವಾದ ಬನ್ನೂರನ್ನು ಪ್ರವೇಶಿಸುತ್ತಿದ್ದ ಹಾಗೇ, ತನ್ನ ಮನಮೋಹಿನಿಯಾದ ನೀಲಾಳೊಂದಿಗೆ ಅಲ್ಲಿಗೆ ಬಂದ ಮಾಧವರಾಯನಿಗೆ, ತಮ್ಮಿಬ್ಬರಿಗೇ ಮೀಸಲಾದ ಯಾವುದೋ ನಂದನ ಖಂಡಕ್ಕೆ ಬಂದಂತೆ ಭಾಸವಾಗಿ, ಹಸಿರು ಚಿಮ್ಮುವ ಆ ತೋಟಗಳಲ್ಲಿ, ನದಿಯ ತೀರದಲ್ಲಿ

ನೀಲಳೊಂದಿಗೆ ಬಗೆಬಗೆಯಾಗಿ ಸುಖಪಡುವ ಕನಸುಗಳನ್ನು ಕಾಣತೊಡಗಿದ.

ಊರಿಗೆ ಸ್ವಲ್ಪ ದೂರವಾಗಿ, ಹೊಳೆ ಕೆರೆಗೆ ಹತ್ತಿರವಾಗಿ ಬೋರೆಯ ಮೇಲೆ ತೆಂಗು, ಮಾವು, ಹಲಸು, ನಿಂಬೆ ಮೊದಲಾದ ಬಗೆಬಗೆಯ ಫಲ ಪುಷ್ಪಗಳು ಬೆಳೆದ ತೋಟದಲ್ಲಿದ್ದ ನೀಲಳ ಚಿಕ್ಕಮ್ಮನ ಮನೆಯನ್ನು ನೋಡಿ ಮಾಧವರಾಯನಿಗೆ, ತನ್ನ ಕನಸುಗಳೆಲ್ಲವೂ ನನಸಾಗುವ ತಾಣ ಅದು ಎಂದು ತೋರಿತು.

ಸುತ್ತ ಹರಡಿದ ತೋಟದ ರಮ್ಯತೆಗೆ ಹೊಂದಿಕೊಳ್ಳುವಂತಿತ್ತು ನೀಲಳ ಚಿಕ್ಕಮ್ಮನ ಮನೆ.

ಆ ಮನೆ, ಆ ಕಾಲದ ಶ್ರೀಮಂತರ ಮನೆಗಳಂತೆ ಎರಡು ಅಂತಸ್ತಿನ ಮನೆ. ಮನೆಯನ್ನು ನೆಲದ ಮಟ್ಟಕ್ಕಿಂತ ಎತ್ತರವಾಗಿ ಕಟ್ಟಿದ್ದು, ಮನೆಯ ಮುಂಭಾಗದ ಕೈಸಾಲೆ, ಸುಂದರವಾದ ಕೆತ್ತನೆಯ ಕೆಲಸದಿಂದ ಕೂಡಿ, ತಳಭಾಗದಲ್ಲಿ ಕಮಲದ ಮೊಗ್ಗಿನಂತೆ ದುಂಡಾಗಿದ್ದು, ಮೇಲೆ ಹೋಗುತ್ತಾ ತೆಳುವಾಗಿ, ಷಟ್ಕೋಣವಾಗಿರುವ ಕಂಭಗಳಿಂದ ಮಸೀದಿಗಳಲ್ಲಿ ಕಂಡು ಬರುವ ಮರದ ಕಮಾನುಗಳಿಂದ ಅಲಂಕೃತವಾಗಿತ್ತು. ಕೈಸಾಲೆಯ ಮೇಲುಭಾಗದಲ್ಲಿ ಕಾಣುತ್ತಿದ್ದ ಮಹಡಿಯ ಕಿಟಕಿಗಳೂ ಅದೇ ಬಗೆಯ ಕಮಾನಿನ ಆಕಾರವಾಗಿದ್ದು, ಅವುಗಳ ಸುತ್ತಲೂ ಗಾರೆಯಲ್ಲಿ ಬಗೆಬಗೆಯ ಬಳ್ಳಿಯ ಚಿತ್ರಗಳನ್ನು ಬಿಡಿಸಿ, ಅದಕ್ಕೆ ಬಣ್ಣ ಹಾಕಿದ್ದರು. ಸುಮಾರು ಒಂದೂವರೆ ಆಳು ಎತ್ತರವಿದ್ದ ತಲೆಬಾಗಿಲಿನ ಚೌಕಟ್ಟು, ಕದಗಳೂ, ಕೆತ್ತನೆಯ ಕೆಲಸದಿಂದ ಅಲಂಕೃತವಾಗಿದ್ದು, ಆ ಬಾಗಿಲಿನ ಎರಡು ಪಾರ್ಶ್ವದಲ್ಲಿದ್ದ ಗಾರೆ ಕೆಲಸದ ಹೂ ಬಳ್ಳಿಗಳಿಂದ ಅಲಂಕೃತವಾದ ದೊಡ್ಡ ಕಿಟಕಿಗಳು, ತಲೆಬಾಗಿಲಿನ ಕಲಾಸೌಂದರ್ಯವನ್ನು ಎತ್ತಿತೋರಿಸಲು ನಿಂತ ದೀಪದ ಮಲ್ಲಿಯರಂತಿದ್ದವು.

ತಲೆಬಾಗಿಲನ್ನು ದಾಟುತ್ತಿದ್ದ ಹಾಗೇ ಇದಿರಾಗಿ ಬಹು ವಿಶಾಲವಾದ, ನೆಲಕ್ಕೆ ರತ್ನಗಂಬಳಿ ಹಾಸಿ, ಗೋಡೆಗಳನ್ನು ತೈಲ ಚಿತ್ರಗಳಿಂದ ಸಿಂಗರಿಸಿ, ಛಾವಣಿಯಿಂದ ಹತ್ತಾರು ದೀಪಗುಚ್ಛಗಳು, ಗುಳೋಪುಗಳನ್ನು ಇಳಿಬಿಟ್ಟ ಹಜಾರವನ್ನು ನೋಡಿ ಮಾಧವರಾಯನಿಗೆ, ನೀಲಳ ಚಿಕ್ಕಮ್ಮ ಬಹು ಶ್ರೀಮಂತಳಿರಬೇಕೆಂದೇ ತೋರಿತು.

ಅಲ್ಲಿಯವರೆಗೂ ಅವನೊಂದಿಗೆ ಬಂದ ನೀಲಾ, ಮಾಧವರಾಯನನ್ನು ಹಜಾರದಲ್ಲಿದ್ದ ಮೆತ್ತನೆಯ ದಿಂಬುಗಳಿಂದ, ಮಲಗಲು ಅನುಕೂಲವಾಗುವಷ್ಟು ದೊಡ್ಡದಾದ ಪೀಠದ ಮೇಲೆ ಕುಳ್ಳಿರಿಸಿ—

“ ನೀವು ಇಲ್ಲಿರಿ. ನಾನು ಒಳಗೆ ಹೋಗಿ ಚಿಕ್ಕಮ್ಮನ್ನ ಮಾತಾಡಿಸಿಕೊಂಡು ಬಂದು ಬಿಡ್ತೀನಿ.”

—ಎಂದು ಹೇಳಿ, ಹಜಾರವನ್ನು ದಾಟಿಕೊಂಡು ಒಳಗೆ ಹೋದಳು.

ನೀಲಾ ಬರುವುದನ್ನೇ ಕಾಯುತ್ತಾ, ಹಜಾರದ ಸೌಂದರ್ಯ, ಅದನ್ನು ಸಿಂಗರಿಸಿದವರ ರಸಿಕತೆಯನ್ನು ಮೆಚ್ಚುತ್ತಾ ಮಾಧವರಾಯ ಕುಳಿತುಕೊಂಡಿದ್ದ.

ಒಳಗೆ ತನ್ನ ಚಿಕ್ಕಮ್ಮನನ್ನು ನೋಡಲು ಹೋದ ನೀಲಾ, ಅರ್ಧ ಗಂಟೆಯ ಮೇಲೆ, ತನ್ನ ಚಿಕ್ಕಮ್ಮನೊಂದಿಗೆ ಹೊರಬಂದು, ತಾನು ತಂದಿದ್ದ ಪಾನಕದ ಪಾತ್ರೆ, ಬೆಳ್ಳಿಯ ಲೋಟಗಳನ್ನು ಹಜಾರದಲ್ಲಿದ್ದ ಪೀಠದ ಮೇಲಿಟ್ಟು ಮಾಧವರಾಯನಿಗೆ ತನ್ನ ಚಿಕ್ಕಮ್ಮ ಲಲಿತಳ ಪರಿಚಯ ಮಾಡಿಸಿದಳು.

ನೀಲಾ ಹೇಳುತ್ತಿದ್ದ ಪರಿಚಯದ ಮಾತುಗಳನ್ನು ಕೇಳುತ್ತಲೇ ಮಾಧವರಾಯ ಲಲಿತಮ್ಮನನ್ನು ನೋಡಿದ.

ನೀಲಾ, ಲಲಿತಮ್ಮ ತನ್ನ ಚಿಕ್ಕಮ್ಮ ಎಂದು ಹೇಳಿದ್ದಳು. ಆದರೆ ಆಕೆಯನ್ನು ನೋಡಿದಾಗ, ಲಲಿತಮ್ಮ ನೀಲಳ ಚಿಕ್ಕಮ್ಮನಂತೆ ಕಾಣದೆ ಕೊಂಚ ವಯಸ್ಸಾದ ಅಕ್ಕ ಇರಬಹುದು ಎನ್ನುವಂತಾಗಿದ್ದಳು. ಯೌವನ, ಲಾವಣ್ಯ ಎರಡರ ಸಂಪತ್ತನ್ನು ಪಡೆದ ನೀಲಳಷ್ಟು ಲಲಿತಮ್ಮ ಸುಂದರಿಯಾಗಿರದಿದ್ದರೂ, ಆಕೆಯು ಸಾಮಾನ್ಯ ಹೆಂಗಸರಿಗಿಂತಲೂ ಕೊಂಚ ಹೆಚ್ಚಾದ ಎತ್ತರ, ಆ ಎತ್ತರದ ಪ್ರಮಾಣಕ್ಕೆ ತುಂಬಿ ಕೊಂಡ ಮೈಯನ್ನು ನೋಡಿದಾಗ ಮಾಧವರಾಯನಿಗೆ ದೇವಾಲಯಗಳಲ್ಲಿ ನೋಡಿದ ಸ್ತ್ರೀ ವಿಗ್ರಹಗಳ ನೆನಪಾಯಿತು. ನೀಲಳ ಮೊಗದಲ್ಲಿ ಕಂಡ ಕಣ್ಣನ್ನು ತಟಕ್ಕನೆ ಸೆಳೆಯುವ ಸಮ್ಮೋಹಕತೆಯಿದ್ದರೆ, ಲಲಿತಮ್ಮನ ಮುಖದಲ್ಲಿ, ನೋಡಿದವರನ್ನು ‘ ನನ್ನಲ್ಲಿಯ ರಹಸ್ಯವನ್ನು ಭೇದಿಸು ಬಾ ’ ಎಂದು ಸವಾಲು ಹಾಕುವ ಗೂಢತೆಯ ಭಾವವಿತ್ತು. ಅಕ್ಕಪಕ್ಕದಲ್ಲಿ ನಿಂತ ನೀಲಾ, ಲಲಿತಮ್ಮ

ಇಬ್ಬರನ್ನು ನೋಡಿದಾಗ ಮಾಧವರಾಯನಿಗೆ ನೀಲಾ ರಸವಾಳೆ ಕಬ್ಬಾದರೆ, ಲಲಿತಮ್ಮ ಸುಲಿದ ಬಾಳೆಯ ದಿಂಡು ಎನಿಸಿತು.

ಮಾಧವರಾಯನ ಕಣ್ಣುಗಳು ಆ ಹೋಲಿಕೆಯ ಕೆಲಸದಲ್ಲಿ ತೊಡಗಿರುವಾಗಲೇ, ಲಲಿತಮ್ಮ—

"ನೀಲಾನ ಜೊತೆಯಲ್ಲಿ ನೀವು ಬಂದದ್ದು ಬಹಳ ಸಂತೋಷವಾಯಿತು."—ಎಂದಳು.

ಕೊಂಚ ನಿಧಾನವಾಗಿ ಎಳೆದು ಮಾತನಾಡಿದ, ಮುಖಮಲಿನಷ್ಟು ನಯವಾದ ಲಲಿತಮ್ಮನ ಧ್ವನಿಯನ್ನು ಕೇಳಿಯೂ ಮಾಧವರಾಯನಿಗೆ, ನೀಲಳ ಧ್ವನಿ ಚಪಲಗತಿಯಿಂದ ನುಡಿಯುವ ವೀಣಾಧ್ವನಿಯಾದರೆ, ಲಲಿತಮ್ಮನದು ತಂಬೂರಿಯ ಗಂಭೀರ ಮಂಜುಳ ಘೋಷದಂತಿದೆ ಎನಿಸಿತು. ಆ ಹೋಲಿಕೆಯನ್ನು ಮನದಲ್ಲಿ ಮೆಲುಕು ಹಾಕುತ್ತಲೇ—

"ಇಲ್ಲಿಗೆ ಬರುವ ಅವಕಾಶ ದೊರೆತದ್ದು, ನಿಮ್ಮಷ್ಟೇ ನನಗೂ ಸಂತೋಷಕ್ಕೆ ಕಾರಣವಾಗಿದೆ. ಆದರೂ ನಾವು ಬಂದದ್ದು ನಿಮಗೆ ತುಂಬಾ ತೊಂದರೆಯಾಗಿರಬೇಕು."

"ತೊಂದರೆ ಏನು ಬಂತು ?"

"ಮನೆಯಲ್ಲಿ ಖಾಯಿಲೆಯವರಿರುವಾಗ ಅತಿಥಿಗಳು ಬಂದರೆ ತೊಂದರೆಯಲ್ಲವೆ ? ಸೌಜನ್ಯಕ್ಕೆ ನೀವು ಆ ಮಾತಾಡದಿದ್ದರೂ ನಮಗೆ ಅರ್ಥವಾಗುವುದಿಲ್ಲವೇ ?"

"ಆ ವಿಷಯದಲ್ಲಿ ಯೋಚನೆ ಮಾಡ್ತಾ ಇದೀರಾ....ಆ ಯೋಚನೆ ನಿನ್ನೆಯೇ ಬಗೆ ಹರಿದು ಹೋಯಿತು."

"ಅಂದರೆ—"

"ನನ್ನ ತಮ್ಮ ಶೇಷನಿಗೆ ನಿನ್ನೆಯದಿನ ಬೆಳಿಗ್ಗೆ ಇದ್ದಕ್ಕಿದ್ದ ಹಾಗೇ ಸಣ್ಣದಾಗಿ ಹೊಟ್ಟೆನೋವು ಆರಂಭವಾಯಿತು. ಹಲಸಿನ ಹಣ್ಣು ಹೆಚ್ಚಾಗಿ ತಿಂದದ್ದಕ್ಕೆ ಹಾಗಾಯಿತೇನೋ ಎಂದು ಕೊಂಡು ನಾನು ಅಲಕ್ಷ್ಯ ಮಾಡಿದೆ. ಆದರೆ ಹೊತ್ತು ಆಗ್ತಾ ಆಗ್ತಾ ಹೊಟ್ಟೆನೋವು ಹೆಚ್ಚಿ, ರಾತ್ರಿ ವೇಳೆಗೆ ಉಳಿಯುತ್ತಾನೋ ಇಲ್ಲವೋ ಎನ್ನುವ ಹಾಗೆ ಕೈಕಾಲು ಝಾಡಿಸಲಾರಂಭಿಸಿದ. ಏನೇನು ವೈದ್ಯ ಮಾಡಿದರೂ ತಗ್ಗಲಿಲ್ಲ. ಆ ಗಾಬರೀಲೇ ಗಂಜಾಂಗೆ ಆಳು ಕಳಿಸಿಕೊಟ್ಟೆ. ಆಮೇಲೆ ಯಾರೋ ಹೆಂಗಸರು 'ಇದು ಹಣ್ಣು

ತಿಂದ ಹೊಟ್ಟೆನೋವಲ್ಲ, ಹೇಮಾದ್ರಮ್ಮನ ಕಾಟ ಇರಬೇಕು. ಯಾವಾಗ ಲಾದರೂ ಹರಸಿಕೊಂಡದ್ದು ಮರೆತಿರಬೇಕು.' ಅದಕ್ಕೆ ಆ ಮಹಾತಾಯಿ ಹೀಗೆ ನೆನಪು ಕೊಡ್ತಾ ಇದಾಳೆ.' ಎಂದರು. ಆಗ ನನಗೂ ಹಿಂದಿನ ವರ್ಷದ ಜಾತ್ರೆ ಸಮಯದಲ್ಲಿ ಮಾಡಿಕೊಂಡ ಹರಕೆ ನೆನಪಿಗೆ ಬಂದು, ಅಮ್ಮನವರ ಗುಡಿಗೆ ಹೋಗಿ ತಪ್ಪುಕಾಣಿಕೆ ಹಾಕಿ 'ಈ ವರ್ಷ ಜಾತ್ರೆಯಲ್ಲಿ ಹರಕೆ ತಪ್ಪಿಸೋದಿಲ್ಲ' ಅಂತ ಮೀಸಲು ಕಟ್ಟಿಟ್ಟು, ಹಣ್ಣು ಕಾಯಿ ಮಾಡಿಸಿಕೊಂಡು ಬಂದು, ಅಮ್ಮನವರ ಕುಂಕುಮ ಪ್ರಸಾದಾನ ಶೇಷನ ಹಣೆಗಿಟ್ಟೆ. ಆ ಕೂಡಲೇ ಮಂತ್ರ ಹಾಕಿದ ಹಾಗಾಗಿ, ಏನೂ ಆಗದಿದ್ದನವ ಹಾಗೆ ಎದ್ದು ಕುಳಿತ. ಈ ವಿಷಯ ಗಂಜಾಂಗೆ ಹೇಳಿಕಳಿಸ ಬೇಕೂಂತ ನಾನೂ ಇದ್ದೆ. ಅಷ್ಟರಲ್ಲೇ ನೀವೂ ಬಂದಿರಿ."

— ಎಂದು ಹೇಳಿದಳು ಲಲಿತಮ್ಮ.

"ಅಂತೂ ಹೇಮಾದ್ರಮ್ಮನ ಮಹಿಮೆ ಬಹಳ ಇರೋ ಹಾಗಿದೆ"

—ಮಾಧವರಾಯ ಹೇಳಿದ.

"ಇಲ್ಲದೇ ಉಂಟೆ. ಮಹಾತಾಯಿ, ಸಾಕ್ಷಾತ್ ವಿದ್ಯಾರಣ್ಯರಿಂದ ಪೂಜೆ ಮಾಡಿಸಿಕೊಂಡಾಕೆ. ಶೃಂಗೇರಿ ಶಾರದಾಮ್ಮನವರು ಎಷ್ಟು ಮಹಿಮಾ ಶಾಲಿಗಳೋ ಈ ಅಮ್ಮನವರೂ ಅಷ್ಟೆ. ಇಬ್ಬರದೂ ಒಂದೇ—ಇಟ್ಟ ಶಾಪ ಕೊಟ್ಟ ವರ ಎಂದೂ ಸುಳ್ಳಾಗೊಲ್ಲ. ಇವತ್ತಲ್ಲಾಂದರೆ ಹತ್ತು ವರ್ಷದ ಮೇಲಾದರೂ ನಡದೇ ನಡೆಯುತ್ತೆ. ಯಾವ ಮಾತಿಗೂ ಒಂದು ತಲೆ ಗಡುವು."

—ಹೇಮಾದ್ರಮ್ಮನ ಬಗ್ಗೆ ಅತ್ಯಂತ ಭಯ-ಭಕ್ತಿ ತುಂಬಿದ ಧ್ವನಿ ಯಲ್ಲಿ ಹೇಳಿದಳು ಲಲಿತಮ್ಮ.

ಆಕೆಯ ಬಾಯಲ್ಲಿ ಬಂದ ಹೇಮಾದ್ರಮ್ಮನ ಮಹಿಮೆಯ ಮಾತಿಗಿಂತ ಹೆಚ್ಚಾಗಿ, ಶೃಂಗೇರಿಯ ಶಾರದಾದೇವಿಯ ಹೆಸರು, ಮಾಧವರಾಯನ ಹೃದಯವನ್ನು ಸಬಳದಂತೆ ಇರಿಯಿತು. ಇಬ್ಬರೂ ಒಂದೇ—ಇಟ್ಟ ಶಾಪ, ಕೊಟ್ಟವರ ಎಂದೂ ಸುಳ್ಳಾಗೋದಿಲ್ಲ. ಇವತ್ತಲ್ಲಾಂದ್ರೆ ಹತ್ತು ವರ್ಷದ ಮೇಲಾದ್ರೂ ನಡದೇ ನಡೆಯುತ್ತೆ. ಯಾವ ಮಾತಿಗೂ ಒಂದು ತಲೆ ಗಡುವು ಎಂದದ್ದು, ಮಾಧವರಾಯನ ಮನಸ್ಸನ್ನು ಗರಗಸದಂತೆ ಕೊಯ್ದು ಆತನ ಮೈ ಅಪ್ರಯತ್ನವಾಗಿ ಕಂಪಿಸುವಂತೆ ಮಾಡಿತು.

ಆತನ ಮೈಯ ಕಂಪನವನ್ನು ಕಂಡ ನೀಲಾ, ಲಲಿತಮ್ಮ ಇಬ್ಬರೂ ಅದು ಹೇಮಾದ್ರಮ್ಮನ ಮೇಲಿನ ಭಕ್ತಿಯಿಂದ ಮೂಡಿದ ಕಂಪನವೆಂದೇ ಭಾವಿಸಿದರು.

ತನ್ನ ಚಿತ್ತದಲ್ಲಿ ಭೀತಿಯ ಕಾರ್ಮೋಡವನ್ನು ಕವಿಯಿಸಿದ ದೇವತಾ ವಿಷಯವಾದ ಆ ಮಾತನ್ನು ಮುಂದುವರಿಸಲು ಇಚ್ಛೆಯಿಲ್ಲದೆ—

"ಅದೆಲ್ಲಾ ಎಲ್ಲೀ ಮಾತು ಬಿಡಿ—ಅಂತೂ ನಿಮ್ಮ ತಮ್ಮನ ಖಾಯಿಲೆ ಗುಣವಾದದ್ದು ಕೇಳಿ ಸಂತೋಷವಾಯಿತು"—ಎಂದ.

"ಅಂತೂ ಆ ನೆಪದಲ್ಲಾದರೂ ನೀವು ಇಲ್ಲಿಗೆ ಬರುವ ಹಾಗಾದದ್ದು ನನುಗೂ ತುಂಬಾ ಸಂತೋಷ........ಲಕ್ಷಣವಾಯಿತು....ಮಾತಿನಲ್ಲಿ ಎಲ್ಲಾ ಮರೆತುಬಿಟ್ಟೆ....ಏಳಿ....ಪಾನಕ ಕುಡಿದು ದಣಿವು ಆರಿಸಿಕೊಂಡು, ವಿಶ್ರಾಂತಿ ತೆಗೆದುಕೊಳ್ಳಿ. ಉರಿಬಿಸಿಲಿನ ಪ್ರಯಾಣ ತುಂಬಾ ಆಯಾಸವಾಗಿರಬೇಕು."

—ಎಂದಳು ಲಲಿತಮ್ಮ, ಬೆಳ್ಳಿಯ ಬಟ್ಟಲಿಗೆ ಪಾನಕವನ್ನು ತುಂಬಿ, ಮಾಧವರಾಯನಿಗೆ ಕುಡಿಯಲು ಕೊಟ್ಟು.

ಮಾಧವರಾಯ ಮಾತಾಡದೆ ಆಕೆ ಕೊಟ್ಟ ಪಾನಕವನ್ನು ಕುಡಿದ. ಹಿತಮಿತವಾಗಿ ಸಿಹಿ–ಹುಳಿಗಳು ಬೆರೆತು, ಕೇಸರಿ, ಪಚ್ಚಕರ್ಪೂರಗಳಿಂದ ಸುವಾಸಿತವಾದ ಪಾನಕವು ಅದನ್ನು ಮಾಡಿದಾಕೆಯ ರಸಿಕತೆ, ಅಭಿರುಚಿಗೆ ಸಾಕ್ಷಿಯಾಗಿತ್ತು. ಆ ಮೆಚ್ಚುಗೆಯನ್ನು ಹತ್ತಿಡಲಾಗದೆ—

"ಪಾನಕ ತುಂಬಾ ರುಚಿಯಾಗಿದೆ. ಇಷ್ಟು ರುಚಿಯಾದ ಪಾನಕವನ್ನೇ ನಾನೆಂದೂ ಕುಡಿದಿರಲಿಲ್ಲ."

—ಎಂದು ಹೇಳಿದ.

"ಅದರಲ್ಲಿ ಮಾಡಿದವರ ದೊಡ್ಡಸ್ತಿಕೆಯೇನೂ ಇಲ್ಲ. ಕಾವೇರಿಯ ನೀರು, ಕೊಡಿಯಾಲದ ಕಲ್ಲುಸಕ್ಕರೆ ಇದ್ದರೆ ಕಮಂಗಿ ಕೈಯಲ್ಲೂ ಪಾನಕ ರುಚಿಯಾಗುತ್ತೆ."

—ಎಂದು ಹೇಳಿ, ಮಾಧವರಾಯನ ಬರಿದಾದ ಬಟ್ಟಲಿಗೆ ಮತ್ತಷ್ಟು ಪಾನಕ ಹಾಕಿ—

"ನೀಲಾ, ನೀನೂ ನಿನ್ನ ಯಜಮಾನರೂ ಪ್ರಯಾಣದಿಂದ ತುಂಬ ಬಳಲಿರಬೇಕು. ಹೋಗಿ ವಿಶ್ರಾಂತಿ ತೆಗೆದುಕೊಳ್ಳಿ. ಬಿಸಿಲು ಇಳಿದ ಮೇಲೆ ಫಲಾಹಾರ ಮಾಡಿ ನಿಮ್ಮನ್ನು ಎಬ್ಬಿಸುತ್ತೇನೆ. ನಿಮ್ಮ ಸಾಮಾನು ಏನಿದ್ದರೂ

ಆ ಕೋಣೆಯಲ್ಲಿ ಇರಿಸಿಕೊ. ಇಲ್ಲಿ ಇರುವಷ್ಟು ದಿನ ಅದೇ ನಿಮ್ಮ ಕೋಣೆ. ನಿಮ್ಮ ಕೋಣೆ ತೋರಿಸುತ್ತೇನೆ, ಬಾ. ”

—ಎಂದು ಹೇಳಿ. ನೀಲಳನ್ನು ಕೋಣೆ ತೋರಿಸಲು ಕರೆದುಕೊಂಡು ಹೋದಳು.

ಸ್ವಲ್ಪ ಹೊತ್ತಿನಲ್ಲೇ ನೀಲಾ ಹಿಂತಿರುಗಿ ಬಂದು—

“ ಬನ್ನಿ ಹೋಗೋಣ ”

—ಎಂದು ಮಾಧವರಾಯನನ್ನು ಕರೆದಳು.

ಮಾಧವರಾಯ ನೀಲಳನ್ನು ಹಿಂಬಾಲಿಸಿದ.

೨೪

ನೀಲಳೊಂದಿಗೆ, ತಮ್ಮ ವಾಸಕ್ಕೆ ಮೀಸಲಾಗಿದ್ದ ಮಹಡಿಯ ಮೇಲಿನ ಕೋಣೆಯನ್ನು ನೋಡಿ ಮಾಧವರಾಯ ಮುಗ್ಧನಾದ.

ಲಲಿತಮ್ಮನ ಮನೆ ಹಜಾರಗಳನ್ನು ನೋಡಿಯೇ ಆ ಮನೆಯ ಮಾಲೀಕರ ರಸಿಕತೆಯ ಬಗ್ಗೆ ತೃಪ್ತಿಯನ್ನು ಪಡೆದಿದ್ದ ಮಾಧವರಾಯನಿಗೆ, ಆ ಕೋಣೆಯನ್ನು ಕಂಡು ಹಾದಿ ತಪ್ಪಿ ಗಂಧರ್ವಲೋಕಕ್ಕೇ ಬಂದಷ್ಟು ವಿಸ್ಮಯವಾಯಿತು.

ಬಹು ವಿಶಾಲವಾದ ಆ ಕೋಣೆ, ಆ ಕೋಣೆಯ ಮಾಲೀಕರ ಸೌಂದರ್ಯಾಭಿರುಚಿ, ಶೃಂಗಾರಾಭಿರುಚಿಗಳಿಗೆ ಹಿಡಿದ ನಿಲುಗನ್ನಡಿಯಂತಿತ್ತು.

ಕೋಣೆಯನ್ನು ಪ್ರವೇಶಿಸುತ್ತಿದ್ದ ಹಾಗೇ ಎದ್ದು ಕಾಣುತ್ತಿದ್ದುದು ಬಾಗಿಲಿಗೆ ಇದಿರಾಗಿ ಇರಿಸಿದ್ದ, ತಮಗೆ ಇದಿರಾಗಿ ತಮ್ಮಂಥವರೇ ಕೋಣೆಯನ್ನು ಪ್ರವೇಶಿಸುತ್ತಿದ್ದಾರೆ ಎಂಬ ಭ್ರಾಂತಿ ಬರಿಸುವ ಆಳೆತ್ತರದ ನಿಲುವುಗನ್ನಡಿ. ಆ ಭ್ರಾಂತಿ ಮರೆಯುತ್ತಿದ್ದ ಹಾಗೇ, ಕನ್ನಡಿಯನ್ನು ಎರಡು ಬದಿಯಿಂದಲೂ ತಬ್ಬಿಹಿಡಿದ, ಕರಿಯ ಮರದ ಸ್ತ್ರೀ ಮೂರ್ತಿಗಳ ಸೌಂದರ್ಯ ಕಣ್ಣನ್ನು ಸೆರೆ ಹಿಡಿಯುತ್ತಿತ್ತು.

ಆ ಕನ್ನಡಿ ಬಹು ವಿಶಾಲವಾದ ಆ ಕೋಣೆಯನ್ನು ಎರಡು ಭಾಗವಾಗಿ ವಿಂಗಡಿಸುವ ಗುರುತಿನಂತಿತ್ತು.

ಕನ್ನಡಿಯ ಎಡಪಾರ್ಶ್ವ ಮಂಚಕ್ಕೆ ಮೀಸಲಾಗಿ, ಅದರ ಬಲ ಪಾರ್ಶ್ವ

ವನ್ನು ವಿಶ್ರಾಂತಿ ಗೃಹದಂತೆ ಸಜ್ಜುಗೊಳಿಸಲಾಗಿತ್ತು. ವಿಶ್ರಾಂತಿ ವಿಭಾಗದಲ್ಲಿ, ಮಂಚಕ್ಕೆ ಎದುರಾಗಿ ಗೋಡೆಯ ಬಳಿ ಇಬ್ಬರು, ಇದಿರುಬದಿರಾಗಿ ಕಾಲು ಚಾಚಿ ಕುಳಿತುಕೊಳ್ಳುವಷ್ಟು ವಿಶಾಲವಾದ ವಿಶ್ರಾಂತಿ ಪೀಠ ಇರಿಸಲ್ಪಟ್ಟಿತ್ತು. ಆ ವಿಶ್ರಾಂತಿ ಪೀಠದ ಎರಡು ಪಾರ್ಶ್ವಗಳಲ್ಲೂ, ಬೆನ್ನು ನೀಡಿ ಕುಳಿತು ಕೊಳ್ಳುವ ಸ್ಥಳದಲ್ಲಿ ಆಲಿಂಗನಾ ಮುದ್ರೆಯಲ್ಲಿ ತೋಳುಚಾಚಿ ನಿಂತ ಸ್ತ್ರೀ ವಿಗ್ರಹಗಳಿದ್ದು, ಅವೆರಡರ ಮಧ್ಯಭಾಗದ ಹಲಗೆಯಲ್ಲಿ ಶ್ರೀ ಕೃಷ್ಣ ಗೋಪಿಕಾಸ್ತ್ರೀಯರ ವಸ್ತ್ರಾಪಹರಣ ಮಾಡಿದ ದೃಶ್ಯವನ್ನು ಚಿತ್ರಿಸಲಾಗಿತ್ತು.

ಆ ವಿಶ್ರಾಂತಿ ಪೀಠದ ಇಬ್ಬದಿಯ ಮೂಲೆಗಳಲ್ಲಿ ಹೊತ್ತಿದ ಅಗರು ಬತ್ತಿಗಳನ್ನು ಇಡುವ ಸಾಧನವನ್ನು ಧರಿಸಿದ ಆಳೆತ್ತರದ ಕಂಚಿನ ಸ್ತ್ರೀ ವಿಗ್ರಹಗಳು ತಮ್ಮ ಕಾಂಚನ ವರ್ಣದಿಂದ ಥಳಥಳಿಸುತ್ತಾ ನಿಂತಿದ್ದವು. ಅವುಗಳ ಬದಿಯಲ್ಲಿ, ವಿಶ್ರಾಂತಿ ಪೀಠಕ್ಕೆ ಸಮೀಪವಾಗಿ ಒಂದು ಬದಿಯಲ್ಲಿ ದೊಡ್ಡದಾದ ತಂಬೂರಿ ಮತ್ತೊಂದು ಬದಿಯಲ್ಲಿ ವೀಣೆಯನ್ನು ಅಂದವಾದ ಲೋಹ ಪೀಠಗಳ ಮೇಲೆ ಇರಿಸಲಾಗಿತ್ತು. ವಿಶ್ರಾಂತಿ ಪೀಠದ ಇದಿರು, ಅಷ್ಟ ಕೋಣಾಕಾರದ, ಚಿತ್ರಗೆಲಸದ ಫಲಕವಿದ್ದ ತಾಂಬೂಲದ ತಟ್ಟೆಯ ನ್ನಿರಿಸುವ ಪೀಠವಿತ್ತು.

ಕೋಣೆಯ ನೆಲವನ್ನು, ಕಾಲಿಟ್ಟರೆ ಪಾದ ಮುಳುಗುವಷ್ಟು ಮೃದು ವಾದ, ಬಗೆಬಗೆಯ ಬಣ್ಣಬಣ್ಣದ ಹೂ, ಬಳ್ಳಿ, ಹಕ್ಕಿಗಳ ಕಸೂತಿಯಿಂದ ಚಿತ್ರಿತವಾದ ರತ್ನಗಂಬಳಿ ಮುಚ್ಚಿದ್ದರೆ, ಹಾಲು ಕೆನೆಯಷ್ಟು ಬಿಳುಪಾದ, ಕನ್ನಡಿಯಷ್ಟು ಹೊಳಪಾದ ಕೋಣೆಯ ವಜ್ರಗಾರೆಯ ಕೆಲಸ ಮಾಡಿದ ಗೋಡೆಗಳನ್ನು ಅಮರುಶತಕದಲ್ಲಿ ವರ್ಣಿಸಲಾದ ಶೃಂಗಾರ ಸನ್ನಿವೇಶಗಳನ್ನು ಚಿತ್ರಿಸುವ ಸುಂದರವಾದ ತೈಲಚಿತ್ರಗಳು ಸಂದರ್ಭ ಶ್ಲೋಕಗಳೊಂದಿಗೆ ಅಲಂಕರಿಸಿದ್ದವು.

ಈ ಎಲ್ಲ ಅಲಂಕಾರ, ರಸಿಕತೆಗೂ ಮಕುಟ ಪ್ರಾಯವಾಗಿತ್ತು, ಬಲ ಪಾರ್ಶ್ವದಲ್ಲಿದ್ದ ಚಪ್ಪರ ಪಲ್ಲಂಗದ ಮಂಚ.

ಸಣ್ಣ ಕೋಣೆಯಷ್ಟು ವಿಶಾಲವಾದ ಆ ಕರಿ ಮರದ ಮಂಚದ ನಾಲ್ಕು ಕಾಲುಗಳನ್ನು, ಆ ಮಂಚವನ್ನು ಆಕಾಶಕ್ಕೆ ಕೊಂಡೊಯ್ಯಲು ಯತ್ನಿಸುವಂತೆ ಉಡ್ಡಾಣ ಭಂಗಿಯಲ್ಲಿದ್ದ ಅಪ್ಸರೆಯರಂತೆ ಕೊರೆಯಲಾಗಿತ್ತು. ಮಂಚದ ಚೌಕಟ್ಟು ಗಂಧದ ಮರದಿಂದ ಮಾಡಲ್ಪಟ್ಟು, ಅದರ ಮೇಲೆ ಶೃಂಗಾರದ

ವಿವಿಧ ಭಂಗಿಗಳಲ್ಲಿದ್ದ ಸ್ತ್ರೀಪುರುಷರ ವಿಗ್ರಹಗಳನ್ನು ಕೊರೆದಿದ್ದರು. ಆ ಚೌಕಟ್ಟಿನ ಮೇಲಿನ ಚಪ್ಪರವನ್ನು, ಆಲಿಂಗನಾವಸ್ಥೆಯಲ್ಲಿದ್ದ ನಾಲ್ವರು ಯಕ್ಷದಂಪತಿಗಳು ಅಲಂಕರಿಸಿದ್ದರು. ಮಂಚದ ಎರಡು ಪಾರ್ಶ್ವಗಳಲ್ಲಿದ್ದ ಗಂಧದ ಮರದ ಹಲಗೆಗಳಲ್ಲಿ, ತಲೆಯ ಕಡೆಯ ಹಲಗೆಯಲ್ಲಿ, ತಮಾಲ ಕುಂಜದಲ್ಲಿ ವಿಪ್ರಲಂಭ ಶೃಂಗಾರಾವಸ್ಥೆಯಲ್ಲಿದ್ದ ರಾಧಾಕೃಷ್ಣರನ್ನೂ, ಪಾದ ಭಾಗದಲ್ಲಿ ಸ್ತ್ರೀ ಪರಿವಾರ ಸಮೇತರಾದ ರತಿ-ಮನ್ಮಥರ ಚಿತ್ರ, ಅದರ ಸುತ್ತಲೂ ಬಗೆಬಗೆಯ ಸಂಭೋಗ ವಿಧಾನಗಳನ್ನು ಚಿತ್ರಿಸುವ ಚಿತ್ರಗಳನ್ನು ಬಿಡಿಸಲಾಗಿತ್ತು.

ಆ ಕೋಣೆ, ಅದನ್ನು ಅಲಂಕರಿಸಿದ ವಿಲಾಸವಸ್ತುಗಳನ್ನು ನೋಡಿ ವಿಸ್ಮಯ ಮೂಕನಾದ ಮಾಧವರಾಯ—

" ಇದು ನಿನ್ನ ಚಿಕ್ಕಮ್ಮನ ಯಜಮಾನರ ಖಾಸಾ ಕೋಣೆಯೇನೋ—ಅಲ್ಲವೇ ನೀಲಾ ? "

—ಎಂದು ಕೇಳಿದ.

" ಹೌದು. "

" ಈ ಕೋಣೆಯನ್ನು ನಮಗೆ ಬಿಟ್ಟರೆ, ಆಕೆಯ ಯಜಮಾನರಿಗೆ ಬೇಸರವಾಗುವುದಿಲ್ಲವೇ ? "

" ಅವರು ಇದ್ದಿದ್ದರೆ, ಈ ಕೋಣೆ ಖಂಡಿತವಾಗಿಯೂ ನಮಗೆ ಸಿಗುತ್ತಿರಲಿಲ್ಲ. "

" ಹಾಗಂದರೇನು ನೀಲಾ? "

" ಚಿಕ್ಕಮ್ಮನ ದುರಾದೃಷ್ಟ—ಈಗ ಎರಡು ವರ್ಷಗಳ ಕೆಳಗೆ ಅವಳ ಯಜಮಾನರು ತೀರಿಕೊಂಡರು. "

" ಛೆ, ಹಾಗಾಗಬಾರದಿತ್ತು. ನಿಮ್ಮ ಚಿಕ್ಕಮ್ಮನ ಯಜಮಾನರು, ಆಕೆಯನ್ನು ತುಂಬ ಪ್ರೀತಿಸುತ್ತಿದ್ದರೂಂತ ಕಾಣುತ್ತೆ—ಈ ಕೋಣೆಯನ್ನು ನೋಡಿದರೆ. ಈ ಅಲಂಕಾರಕ್ಕೇ ಅವರು ರಾಶಿ ಹಣ ಸುರಿದಿರಬೇಕು. "

" ಹಣ ಹಾಗೆ ಸುರಿಯದೆ ಇಷ್ಟೆಲ್ಲಾ ಆಗುತ್ತದೆಯೇ ? ಚಿಕ್ಕಮ್ಮನ ಯಜಮಾನರು ಈ ಸುತ್ತುಮೂರಿಗೇ ದೊಡ್ಡ ಸಾಹುಕಾರರು. ಮುನ್ನೂರು ಎಕರೆ ಭತ್ತದ ಗದ್ದೆಯೇ ಇತ್ತು. ಇದರ ಮೇಲೆ ಬೇಕಾದ ಹಾಗೆ ಬಾಳೆ, ತೆಂಗಿನ ತೋಟ. ಎಲ್ಲಕ್ಕಿಂತ ಹೆಚ್ಚಾಗಿ ನೆಲದಲ್ಲಿ ಎರಡು ಕೊಪ್ಪರಿಗೆ ಧನ

ಸಿಕ್ಕಿತಂತೆ. ದೇವರು ಅವರಿಗೆ ಅಷ್ಟು ಕೊಟ್ಟಿದ್ದ. ಅದಕ್ಕೆ ಸರಿಯಾಗಿ ಧಾರಾಳ ಬುದ್ಧಿಯೂ ಇತ್ತು. ಯಾವುದಾದರೂ ಪದಾರ್ಥದ ಮೇಲೆ ಮನಸ್ಸು ಬಿದ್ದರೆ ಅದಕ್ಕೆ ಎಷ್ಟೇ ಖರ್ಚಾದರು ಬಿಡುತ್ತಿರಲಿಲ್ಲವಂತೆ ಚಿಕ್ಕಮ್ಮನ ಯಜಮಾನರು. ಈಗಲೂ ಅವರು ಚಿಕ್ಕಮ್ಮನೊಂದಿಗೆ ಗೆಜ್ಜೆ ಪೂಜೆ ಮಾಡಿಸಿಕೊಂಡ ವೈಭವಾನ, ಈ ಪ್ರಾಂತದ ಜನ ಕಥೆ ಹೇಳಿದ ಹಾಗೆ ಹೇಳುತ್ತಾರೆ. ಅದಕ್ಕೆ ನೂರು ಜೊತೆ ತಾಳೆಯವರೇ ಬಂದಿದ್ದರಂತೆ."

—ನೀಲಾ ಹೆಮ್ಮೆ ತುಂಬಿದ ಧ್ವನಿಯಲ್ಲಿ ಹೇಳಿದಳು.

"ಹಾಗೆಂದರೆ ಅವನಿಗೆ ನಿಮ್ಮ ಚಿಕ್ಕಮ್ಮನ ಮೇಲೆ ಬಹಳ ಪ್ರೀತಿ ಇದ್ದಿರಬೇಕು."

"ಪ್ರೀತಿ....ಲಲಿತಕ್ಕ ಎಂದರೆ ಅವರಿಗೆ ಪಂಚಪ್ರಾಣ. ಲಲಿತಕ್ಕನೂ ತನ್ನ ಪ್ರಾಯದಲ್ಲಿ ಹಾಗೇ ಇದ್ದಳಂತೆ. ಆ ಪ್ರಾಯದಲ್ಲಿ ಲಲಿತಕ್ಕನನ್ನು ನೋಡಿದವರು ಈಗಲೂ ಹೇಳುತ್ತಾರಲ್ಲಾ—ಆಗ ಲಲಿತಕ್ಕ, ನೋಡಿದವರಿಗೆ ಹುಚ್ಚು ಹಿಡಿಸುವ ಹಾಗೆ, ಅಮೃತಶಿಲೇಲಿ ಮಾಡಿದ ರತಿವಿಗ್ರಹ ಇದ್ದ ಹಾಗೆ ಇದ್ದಳಂತೆ. ಕಣ್ಣು ಮೂಗಿನ ಮಾಟ ಇರಲಿ—ಅವಳ ಕೂದಲೇ ಸಾಕು ಹುಚ್ಚು ಹಿಡಿಸೋಕೆ. ಮುಡಿ ಬಿಚ್ಚಿದರೆ, ನೆಲದ ಮೇಲೆ ಈಸಾಡುತ್ತೆ. ಬಿಚ್ಚಿ ಹರಡಿದರೆ ಹಾಸಿಗೆಯೇ ಬೇಡ—ಅಷ್ಟು ಕೂದಲು; ಈಗಲೂ ಅಷ್ಟೇ—ಮುಡಿ ಕಟ್ಟಿಕೊಂಡಿದ್ದರೆ ಅಷ್ಟು ಕಾಣೊಲ್ಲ. ಎರೆದುಕೊಂಡು ತಲೆ ಒಣಗಿಸಿಕೊಳ್ಳುವಾಗ ನೋಡಬೇಕು—ಮುಂಗಾರು ಮಳೆ ಮೋಡ ಕಟ್ಟಿದಹಾಗಿರುತ್ತೆ. ಆ ಸೌಂದರ್ಯ ಸಾಲದು ಅಂದರೆ, ಭರತನಾಟ್ಯ, ಹಾಡುಗಾರಿಕೆಯಲ್ಲೂ ಲಲಿತಕ್ಕ ಹೇಳಿ ಮಾಡಿಸಿದಂಥ ಪ್ರವೀಣೆಯಾಗಿದ್ದಳಂತೆ. ಅವಳನ್ನು ಬೇಕು ಅನ್ನೋರು ಅವಳ ತೂಕ ಬಂಗಾರ ಕೊಡೋಕೆ ಸಿದ್ಧವಾಗಿದ್ದರಂತೆ—ಅಂಥೋರು ಸಾವಿರ ಜನ. ಅದೆಲ್ಲಾ ಕಂಡೇ ಬನ್ನೂರಿನ ಸಾಹುಕಾರರು ಲಲಿತಕ್ಕ ಕೇಳಿದುದನ್ನು ಕೊಟ್ಟು, ಆಕೆಯ ತಾಯಿಗೆ ಲಲಿತಳ ಎತ್ತರ ವರಹ ಸುರಿದು, ತಂದುಕೊಂಡರು. ಆ ಗೆಜ್ಜೆ ಪೂಜೆಯಾದ ಹೊಸದರಲ್ಲೇ, ಲಲಿತಕ್ಕನಿಗೇಂತಲೇ ಈ ಮನೆ ಕಟ್ಟಿಸಿ ಕೊಟ್ಟರು."

"ಅಂಥ ಯಜಮಾನರು ಹೋದದ್ದು ನಿಮ್ಮ ಚಿಕ್ಕಮ್ಮನಿಗೆ ತುಂಬಾ ವ್ಯಸನವಾಗಿರಬೇಕು."

"ಆಗದೆ ಇರುತ್ತದೆಯೇ ? ಆದರೆ, ವ್ಯಸನ ಮರೆಯೋ ಅಷ್ಟು ಆಸ್ತಿ ಕೊಟ್ಟು ಹೋಗಿದಾರೆ, ಆಕೆ ಯಜಮಾನರು. ಯಜಮಾನರು ಅಂದರೆ, ಅವರ ಹಾಗಿರಬೇಕು...."

—ಮಾಧವರಾಯನನ್ನು ಕೊಂಚ ಕೆಣಕಿ ಹೇಳಿದಳು ನೀಲಾ.

"ನಿಜ, ಬದುಕಿದರೆ ಹಾಗೆ ಬದುಕಬೇಕು."

—ಎಂದು ಮಾಧವರಾಯನೂ ನೀಲಳೊಂದಿಗೆ ಸಮ್ಮತಿಸಿದಂತೆ ಹೇಳಿದ.

"ಹೋಗಲಿ ಬಿಡಿ, ಆ ಮಾತೆಲ್ಲಾ ಈಗೇಕೆ? ಮೊದಲು ಮಲಗಿ ಕೊಂಡು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ಈ ಮಾತೆಲ್ಲಾ ಆಡೋಕೆ ಬೇಕಾದಷ್ಟು ದಿನದ ಅವಕಾಶವಿದೆ."

—ಎಂದು ಹೇಳಿ ಮಾಧವರಾಯನಿಗಿಂತಲೂ ಮುಂಚಿತವಾಗಿ ಮಲಗಿ, ಆತನನ್ನು ಆಹ್ವಾನಿಸಿದಳು ನೀಲಾ.

ಅವಳ ಆಹ್ವಾನದಂತೆಯೇ ಮಾಧವರಾಯನೂ ಹೋಗಿ ಮಲಗಿದ.

................

ಮಲಗಿದ ಸ್ವಲ್ಪ ಹೊತ್ತಿನಲ್ಲೇ ನೀಲಾ, ಮಾಧವರಾಯನನ್ನು ತನ್ನ ತೋಳಿನಲ್ಲಿ ತಬ್ಬಿಕೊಂಡು ನಿದ್ರೆಹೋದಳು. ಆದರೆ ಮಾಧವರಾಯನಿಗೆ ನಿದ್ರೆ ಬರದೆ, ತನ್ನನ್ನು ತಬ್ಬಿ ಮಲಗಿದ ನೀಲಳನ್ನು ನೋಡಿದ.

ಅವಳನ್ನು ನೋಡನೋಡುತ್ತಾ, ಅವಳ ಸ್ಥಾನದಲ್ಲಿ ಬೇರೊಬ್ಬ ರೊಂದಿಗೆ ಅದೇ ಮಂಚದಲ್ಲಿ, ಅದೇ ಅವಸ್ಥೆಯಲ್ಲಿ ಮಲಗಿದ ಲಲಿತಮ್ಮನ ಚಿತ್ರ ಅವನ ಮನಸ್ಸಿನ ಕಣ್ಣಿನ ಇದಿರು ಸುಳಿದು, ಇದ್ದಕ್ಕಿದ್ದಂತೆಯೇ ಅವ ನನ್ನು ಅಶಾಂತಿ ಆವರಿಸಿ, ಅದನ್ನು ಭರಿಸಲಾರದೆ, ನಿದ್ರೆಮಾಡುತ್ತಿದ್ದ ನೀಲಳ ತೋಳನ್ನು ಮೃದುವಾಗಿ ಸರಿಸಿ, ಮಂಚದಿಂದ ಕೆಳಗಿಳಿದು, ಗೋಡೆಯಮೇಲಿದ್ದ ಚಿತ್ರಗಳನ್ನು ನೋಡಲಾರಂಭಿಸಿದ.

ಹಾಗೇ ನೋಡುತ್ತಾ ಇರುವಾಗ ಇದ್ದಕ್ಕಿದ್ದಹಾಗೇ ಒಂದು ಚಿತ್ರ ಮಾಧವರಾಯನ ಕಣ್ಣನ್ನು ಸೆಳೆಯಿತು.

ಆ ಚಿತ್ರವೂ 'ಅಮರುಶತಕ'ದ ಶ್ಲೋಕವೊಂದರ ಭಾಗವನ್ನು ಚಿತ್ರಿ ಸುವ ಚಿತ್ರವೇ.

ಆ ಚಿತ್ರದಲ್ಲಿ—

ಒಂದೆಡೆ ಇಬ್ಬರು ರಮಣಿಯರು ಕುಳಿತಿದ್ದಾರೆ. ಅವರ ಬೆಂಬದಿಯಲ್ಲಿ ನಿಂತ ಪುರುಷನೊಬ್ಬನು, ಒಬ್ಬಳ ಕಣ್ಣು ಮುಚ್ಚಿ, ಮತ್ತೊಬ್ಬಳನ್ನು ಚುಂಬಿಸುತ್ತಿದ್ದಾನೆ.

ಆ ಚಿತ್ರದ ಕೆಳಭಾಗದಲ್ಲಿ ಬರೆಯಲ್ಪಟ್ಟ ಪದ್ಯವನ್ನು ಓದಿದ ಮಾಧವರಾಯ—

"ಒಂದೆ ಹಾಸಿನೊಳಿನಿಯರಿಬ್ಬರು ಕುಳಿತುದನು ಕಾ
ಣುತ್ತ ಹಿಂಬದಿಯಿಂದಲೈತಂದು
ಒಲಿದು ಒಬ್ಬಳನಾಟವಾಡುವ ಸೋಗು ನೆಪದೊಳು
ಕಣ್ಣುಗಳ ತಾ ಮುಚ್ಚುತೊಡನಂದು
ಕೊರಳ ನಸು ಕೊಂಕಿಸುತ ಪ್ರೊಂವುಳಿವೋಪ ಧೂರ್ತನು
ಒಲುಮೆ ತಳವೇರಿರುವ ಬಗೆಯಿಂದ
ತಾನೆ ತನ್ನೊಳಗೊಳಗೆ ನಗುತಿರಲೆಸೆವ ಕೆನ್ನೆಯೆ
ಬೇರೆಯೊಬ್ಬಳನೆಳೆದು ಮುದ್ದಿಸಿದ." *

ಆ ಪದ್ಯವನ್ನೋದಿ, ಅದರ ಅರ್ಥ ಸ್ವಾರಸ್ಯವನ್ನು ಸವಿಯುತ್ತ ಮತ್ತೊಮ್ಮೆ ಚಿತ್ರವನ್ನು ನೋಡಿದ.

ಅದನ್ನು ನೋಡನೋಡುತ್ತಾ, ತಟಕ್ಕನೆ ಆಗಿನ ಮನದೊಳಗೆ ಏನೋ ಮುಳ್ಳು ಮುರಿದಂತಾಗಿ, ಹಾಗೇ ಮಂಚದ ಕಡೆ ದೃಷ್ಟಿ ತಿರುಗಿಸಿ, ಅಲ್ಲಿ ಮಲಗಿದ ನೀಲಳನ್ನು ನೋಡಿದ.

ಇದ್ದಕ್ಕಿದ್ದ ಹಾಗೇ ಅವನ ಎದೆಯಾಳದಿಂದ ನೀಳವಾದ ನಿಟ್ಟುಸಿರು ಹೊರಹೊಮ್ಮಿ, ಅವನ ದೃಷ್ಟಿ ಮತ್ತೆ ಚಿತ್ರದತ್ತ ಹೊರಳಿತು.

ತನ್ನ ಹೃದಯಾಂತರಾಳದ ಚಿತ್ರವನ್ನೇ ಚಿತ್ರವಾಗಿ ಚಿತ್ರಿಸಿದಂತಿದ್ದ ಆ ಚಿತ್ರವನ್ನು ನೋಡುತ್ತಾ, ಮಾಧವರಾಯ ಹಾಗೆ ಎಷ್ಟು ಹೊತ್ತು ನಿಂತಿದ್ದನೋ ಏನೋ, ಕೋಣೆಯ ಬಾಗಿಲ ಹೊರಗಡೆ ಸಣ್ಣದಾಗಿ ಕೆಮ್ಮಿದ ಸದ್ದು ಕೇಳಿ, ಆ ಕಡೆ ತಿರುಗಿ ನೋಡಿದ.

ಯಾರೋ ಕೋಣೆಯ ಮುಚ್ಚಿದ ಬಾಗಿಲ ಮೇಲೆ ಸಣ್ಣದಾಗಿ ಸದ್ದು ಮಾಡಿದಂತಾಯಿತು.

---

* ಶ್ರೀಮಾನ್ ಎಸ್. ವಿ. ಪರಮೇಶ್ವರ ಭಟ್ಟರ ಅನುವಾದ.

ಯಾರಿರಬಹುದೆಂದು ವಿಚಾರಮಾಡುತ್ತಾ, ಮಾಧವರಾಯ ತಾನೇ ಹೋಗಿ ಕೋಣೆಯ ಕದವನ್ನು ತೆಗೆದು ನೋಡಿದ—

ಕೋಣೆಯ ಹೊರಗೆ ಲಲಿತಮ್ಮ ಕೈಯಲ್ಲಿ ಫಲಹಾರದ ತಟ್ಟೆಗಳನ್ನು ಹಿಡಿದು ನಿಂತಿದ್ದಳು.

" ನೀಲಾ ಎದ್ದಿಲ್ವೇ ? "

—ಮಾಧವರಾಯನೇ ಕೋಣೆಯ ಬಾಗಿಲನ್ನು ತೆರೆದುದನ್ನು ಕಂಡು ಲಲಿತಮ್ಮ ತಲೆತಗ್ಗಿಸಿ ಪ್ರಶ್ನೆ ಮಾಡಿದಳು.

" ಇನ್ನೂ ಇಲ್ಲ. ಎಬ್ಬಿಸಲೇ ? "

"ಛೆ,ಛೆ, ಬೇಡಿ. ಬಹಳ ದಣಿದು ನಿದ್ರೆಮಾಡ್ತಾ ಇರಬೇಕು. ಇನ್ನಷ್ಟು ಹೊತ್ತು ಮಲಗಿರಲಿ....ನಿಮಗೂ ಒಳ್ಳೆ ನಿದ್ರೇನೇ ಕೆಡಿಸಿಬಿಟ್ಟೇಂತ ಕಾಣಿಸುತ್ತೆ...."

ಲಲಿತಮ್ಮ ಆ ಮಾತನ್ನಾಡಿದಾಗ ಮಾಧವರಾಯ ಹಾಗೇ ಒಮ್ಮೆ ಆಕೆಯ ಮುಖದತ್ತ ನೋಡಿದ.

ತಡೆ ತಡೆದು, ಆ ಮಾತುಗಳನ್ನಾಡುವಾಗ, ಲಲಿತಮ್ಮನ ಕಣ್ಣುಗಳಲ್ಲಿ ಅರ್ಥವಾಗದ ಭಾವನೆಯೊಂದು ವನಾಂತರಾಳದಲ್ಲಿ ಇದ್ದಕ್ಕಿದ್ದ ಹಾಗೇ ಎಲ್ಲಿಂದಲೋ ಬಂದು ಮಿಂಚಿನ ವೇಗದಲ್ಲಿ ಚಿಮ್ಮಿ ಹೋಗುವ ಹೆಸರರಿಯದ ಹಕ್ಕಿಯಂತೆ ಸುಳಿದು ಹೋಯಿತು.

" ಆಯ್ತು, ನೀಲಾ ತಾನಾಗೇ ಎದ್ದ ಮೇಲೆ ಕೆಳಕ್ಕೆ ಕಳಿಸಿಕೊಡಿ. "

—ಎಂದು ಹೇಳಿ ಲಲಿತಮ್ಮ, ತಂದಿದ್ದ ತಿಂಡಿಯ ತಟ್ಟೆಗಳನ್ನು ಹಾಗೇ ಹಿಡಿದು ನಿಧಾನವಾಗಿ ಮಹಡಿಯ ಮೆಟ್ಟಲುಗಳನ್ನು ಇಳಿದು ಹೋದಳು.

ಆಕೆ ತನ್ನತ್ತ ಬೆನ್ನುಮಾಡಿ ಹೋಗುತ್ತಿರುವಾಗ, ಆಕೆಯ ತೊಡೆಗಳ ಕದಲುವಿಕೆಗೆ ತಾಳ ಹಿಡಿದಂತೆ ಅತ್ತಿಂದಿತ್ತ ಒಲೆಯುತ್ತಿದ್ದ ಭಾರವಾದ ಕಬರಿಯನ್ನು ನೋಡಿದ. ಆ ದಪ್ಪವಾದ ಕೂದಲು ಗಂಟನ್ನು ನೋಡಿ ಅದರ ಬಗ್ಗೆ ನೀಲಾ ಹೇಳಿದ—

" ಮುಡಿ ಬಿಚ್ಚಿದರೆ ನೆಲದ ಮೇಲೆ ಈಸಾಡುತ್ತೆ ; ಬಿಚ್ಚಿ ಹರಡಿದರೆ ಹಾಸಿಗೆಯೇ ಬೇಡ "

—ಎಂಬ ಮಾತು ನೆನಪಾಗಿ, ಆ ಮಾತನ್ನೇ ಲಲಿತಮ್ಮನ ಬೆನ್ನಿನ ಮೇಲೆ

ಚಿತ್ರಿಸಿಕೊಳ್ಳುತ್ತಿರುವಂತೆ, ಮೆಟ್ಟಲುಗಳನ್ನಿಳಿದು ಕ್ಷಣಕ್ಷಣಕ್ಕೆ ಕಣ್ಣು ಮರೆಯಾಗುತ್ತಿದ್ದ ಆಕೆಯ ಬೆನ್ನನ್ನೇ ನೋಡುತ್ತಾ ನಿಂತಿದ್ದ.

೨೫

ಬನ್ನೂರಿಗೆ ತಾವು ಬಂದ ದಿನವೇ, ತಾವು ಬಂದುದು ವಿನಾಕಾರಣವೆಂಬುದು ತಿಳಿಯಿತಾದರೂ, ನೀಲಾ ಬನ್ನೂರನ್ನು ಬಿಟ್ಟು ಗಂಜಾಂಗೆ ಕೂಡಲೆ ಹಿಂತಿರುಗುವ ಬಯಕೆಯನ್ನು ವ್ಯಕ್ತಪಡಿಸಲಿಲ್ಲ.

ಲಲಿತಮ್ಮನಂತೂ—

"ಹೇಗೂ ಬಂದದ್ದಾಯಿತು, ಒಂದು ವಾರ ಇದ್ದು ಹೋಗಿ. ನನಗೂ ಒಂಟಿಯಾಗಿದ್ದು ಬೇಸರವಾಗಿದೆ."

—ಎಂದು ಮೊದಲ ದಿನವೇ ಒತ್ತಾಯ ಮಾಡಿ ಹೇಳಿದಳು.

ಆ ಬೇಡಿಕೆ ಸಾಂಪ್ರದಾಯಿಕವಾದ ದಾಕ್ಷಿಣ್ಯದ್ದೋ, ವಿಶ್ವಾಸದ್ದೋ, ಅಂತು ಅದು ಮಾಧವರಾಯನಿಗೂ ಅಪ್ರಿಯವಾಗಿರಲಿಲ್ಲ. ಅದಕ್ಕಿಂತಲೂ ಹೆಚ್ಚಾಗಿ ನಾಲ್ಕು ದಿನ ಅಲ್ಲಿದ್ದರೆ, ಮೊದಲ ದಿನವೇ ತನ್ನಲ್ಲಿ ಕುಡಿಯಿಟ್ಟ ಬಯಕೆ ಚಿಗುರಿ ಹಬ್ಬಲು ಹಂದರದ ಆಸರವೇ ಸಿಗಬಹುದೇನೋ ಎಂಬ ಭಾವನೆಯೇ ಇತ್ತು. ಎಂತಲೇ, ಲಲಿತಮ್ಮ—

"ನನಗೇನೋ ನೀವು ಇರೋದೇ ಇಷ್ಟ. ಆದರೆ ನಿಮ್ಮ ಯಜಮಾನರಿಗೆ ಕೆಲಸ ಕಾರ್ಯ ಹೇಗೋ ಏನೋ?"

—ಎಂದು ನೀಲಳಿಗೆ ಹೇಳಿದಾಗ—

"ನನಗೆ ತಾನೇ ಇಲ್ಲಿದ್ದರೆ ಮುಳುಗಿ ಹೋಗುವಂಥ ಕಾರ್ಯವೇನೂ ಊರಿನಲ್ಲಿಲ್ಲ."

—ಎಂದು ಹೇಳಿ ತನ್ನ ನೆಪದ ಮೇಲೆ ನೀಲಾ ಅಲ್ಲಿಂದ ಹೋಗಲು ಹವಣಿಸದಂತೆ ಮಾಡಿದ.

ನೀಲಳಂತೂ ಅಲ್ಲಿರುವ ನಿಶ್ಚಯದಿಂದಲೇ ಬಂದು, ತನ್ನ ನಿಶ್ಚಯವನ್ನೇ ಲಲಿತಮ್ಮನಿಂದ ಆಡಿಸಿದ್ದುದರಿಂದ, ಅವಳು ತಾನಾಗಿ ಅಲ್ಲಿಂದ ಹಿಂತಿರುಗುವ ಸುದ್ದಿ ಎತ್ತುವ ಪ್ರಮೇಯವೇ ಇರಲಿಲ್ಲ.

ಹೀಗಾಗಿ ಬನ್ನೂರಿನಲ್ಲಿ ನಾಲ್ಕು ದಿನ ಕಳೆದವು.

ಆ ನಾಲ್ಕು ದಿನಗಳ ಅವಧಿಯಲ್ಲಿ ಮಾಧವರಾಯನಿಗೆ, ಲಲಿತಮ್ಮ ನೊಂದಿಗೆ ಆ ಮನೆಯಲ್ಲಿ ವಾಸಿಸುತ್ತಿದ್ದ ಆಕೆಯ ತಮ್ಮ ಶೇಷಣ್ಣನ ಪರಿಚಯವಾಗಿ, ಆತನೊಂದಿಗೆ ಮಾತನಾಡುತ್ತಾ, ಲಲಿತಮ್ಮ, ಆಕೆಯ ದಿವಂಗತ ಯಜಮಾನರು, ಯಜಮಾನರ ಮರಣಾನಂತರದ ಆಕೆಯ ಜೀವನದ ವಿಷಯ ಎಷ್ಟೋ ತಿಳಿಯಿತೇ ಹೊರತು, ಆತ ಬಯಸಿದಂತೆ ಲಲಿತಮ್ಮನ ಪರಿಚಯ ಬೆಳೆಸಿಕೊಳ್ಳಲು ಅವಕಾಶವಾಗಲಿಲ್ಲ..

ಹಾಗೆ ಶೇಷಣ್ಣನಿಂದ ಪರಿಚಯವಾದ ಲಲಿತಮ್ಮನ ಜೀವನದ ವಿಷಯ ದಲ್ಲಿ ಮಾಧವರಾಯನಿಗೆ ಅಚ್ಚರಿಯನ್ನುಂಟುಮಾಡಿದ್ದ ವಿಷಯ, ಆಕೆ ತನ್ನ ಯಜಮಾನರಾಗಿದ್ದ ದೇವಯ್ಯನ ಮರಣಾನಂತರ, ಎರಡು ವರ್ಷಗಳ ಕಾಲವಾದರೂ, ವಿವಾಹಿತ ಸ್ತ್ರೀಯರಂತೆ ವೈಧವ್ಯವನ್ನು ಅನುಭವಿಸಬೇಕೆಂಬ ಕಟ್ಟು ಆಕೆಗಿಲ್ಲವಾದರೂ ಆಕೆ ಯಾರಿಗೂ ಮೈ-ಮನಸ್ಸುಗಳನ್ನು ಕೊಡದೆ, ಜೀವಿಸುತ್ತಿದ್ದಳು ಎಂಬುದು. ಆ ವಿಷಯವನ್ನು ಹೇಳಿದ ಶೇಷಣ್ಣ—

"ಇವತ್ತು ಅಕ್ಕ ಮನಸ್ಸು ಮಾಡಿದರೆ, ಅವಳ ತೂಕದ ಹೊನ್ನು ಕೊಟ್ಟು, ಅವಳನ್ನು ಮಹಾರಾಣಿಹಾಗೆ ಸಾಕೋಕೆ ಎಷ್ಟೋ ಜನ ಸಾಹು ಕಾರರು ಸಿದ್ಧವಾಗಿದಾರೆ. ಎಷ್ಟೋ ಜನ ಬಂದು ಮನೆ ಬಾಗಿಲಿಗೂ ಅಲೆದುಹೋದರು. ಆದರೆ ಅಕ್ಕ ಮಾತ್ರ ಯಾರಿಗೂ ಉಭ ಶುಭ ಅನ್ನೋಲ್ಲ. ಏನು ಹೇಳಲಿ ಏನು ಕೇಳಲಿ—ಅವಳದೊಂದೆ ಉತ್ತರ— 'ದಯವಿಟ್ಟು ಈ ಮನೇಲಿ ಅದೊಂದು ವಿಷಯ ಎತ್ತಬೇಡಿ'. ಅಕ್ಕ ಹೊಟ್ಟೆಪಾಡಿಗೆ ವೃತ್ತಿ ನಡೆಸಬೇಕಾಗಿಲ್ಲ. ನಾನು ಒಪ್ಪಿಕೋತೀನಿ. ಅವಳಲ್ಲಿ, ಅವಳ ನಂತರ ಇನ್ನೆರಡು ತಲೆ ಕೂತು ತಿಂದರೂ ಸವೆಯದಷ್ಟನ್ನು ದೇವಯ್ಯಭಾವ ಅವಳಿಗೆ ಬಿಟ್ಟುಹೋಗಿದಾರೆ. ಆದರೆ ಇವಳಿಗೆ ಗಂಡೇ ಬೇಡ ಅನ್ನೋ ಅಷ್ಟು ಸ್ವಾಯವಾಗಿದೆಯೇ ? ದೇವರು ಕೊಟ್ಟಿರುವಾಗ, ತನಗೆ ಬೇಕಾದೋನ್ನ ಕಟ್ಟಿಕೊಂಡು ಸುಖವಾಗಿರಬಾರದೆ ? ನೀವೇ ಹೇಳಿ— ಈ ಹುಚ್ಚಿಗೆ ಏನು ಹೇಳಬೇಕು ?"

—ಎಂದು ಹೇಳಿ ಲಲಿತಮ್ಮನ ಜೀವನದ ಆ ಮುಖದ ಬಗ್ಗೆ ಮಾಧವರಾಯನ ಕುತೂಹಲವನ್ನು ಕೆರಳಿಸಿದ್ದ.

"ಇಂಥ ಸೌಂದರ್ಯ ಅನ್ಯಾಯವಾಗಿ ಕಾಡು ಬೆಳದಿಂಗಳಾಗಿ ವ್ಯರ್ಥ ವಾಗುವುದಲ್ಲಾ" ಎಂದು ಆಕೆಯ ನಡೆನುಡಿಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ

ದರೆ, ರಹಸ್ಯವೇನೆಂದು ಅರ್ಥವಾಗುವುದೇನೋ ಎಂದು, ಆಕೆಯ ನಡೆ-ನುಡಿಗಳನ್ನು ಪರಿಶೀಲಿಸಿದ್ದ ಮಾಧವರಾಯ.

ಹಾಗೆ ನೋಡಿದರೆ, ಲಲಿತಮ್ಮನ ನಡೆನುಡಿಯಲ್ಲಿ ಯಾವ ಬಗೆಯ ಗೌಪ್ಯವೂ ಇದ್ದಂತಿರಲಿಲ್ಲ.

ತೀರಾ ಹೊಸಬನಾದ ಮಾಧವರಾಯನೊಂದಿಗೂ ಆಕೆ ಅಪರಿಚಯತೆಯ ಬಿಗುಬಿನಿಂದ ನಡೆದುಕೊಳ್ಳದೆ, ಸರಳವಾಗಿ ಸಲಿಗೆಯಾಗೇ ನಡೆದುಕೊಳ್ಳುತ್ತಿದ್ದಳು. ಮಾತು ಕಥೆ, ನಗುಗಳಲ್ಲಿ ಎಲ್ಲರೊಂದಿಗೆ ಧಾರಾಳವಾಗಿ ಬೆರೆಯುತ್ತಿದ್ದಳು. ಯಜಮಾನರು ಹೋದರು ಎಂಬ ಕಾರಣಕ್ಕಾಗಿ ಸನ್ಯಾಸ ಸ್ವೀಕರಿಸಿದ ಲಕ್ಷಣಗಳಾವುವೂ ಆಕೆಯಲ್ಲಿರಲಿಲ್ಲ. ಮುತ್ತೈದೆಯಂತೆಯೇ ಹೂವು ಮುಡಿಯುತ್ತಿದ್ದಳು, ಹಣೆಗೆ ಕುಂಕುಮವಿಡುತ್ತಿದ್ದಳು, ಲಕ್ಷಣವಾದ ಸೀರೆ ಕುಪ್ಪಸಗಳನ್ನು ತೊಟ್ಟು ಒಡವೆಗಳನ್ನಿಟ್ಟುಕೊಳ್ಳುತ್ತಿದ್ದಳು. ಊಟ ಉಪಾಹಾರಗಳಲ್ಲೂ ಯಾವ ನಿಷೇಧವನ್ನೂ ಅನುಸರಿಸುತ್ತಿರಲಿಲ್ಲ. ಕೊಂಚ ಧರ್ಮಭೀತಿಯಿದ್ದ ಎಲ್ಲ ಹೆಂಗಸರ ಹಾಗೆ, ಆಕೆ ಹಗಲು, ಸಂಜೆ ಎರಡು ಹೊತ್ತೂ ಪೂಜೆಮಾಡಿಕೊಳ್ಳುತ್ತಿದ್ದಳೇ ಹೊರತು, ಆ ವಿಷಯದಲ್ಲೂ ಹೆಚ್ಚಿನ ಕಟ್ಟಲೆಗಳೇನೂ ಇಟ್ಟುಕೊಂಡಂತಿರಲಿಲ್ಲ. ಅವೆಲ್ಲವೂ ಹಾಗಿರಲಿ. ನಡೆನುಡಿ, ಕಣ್ಣ ಕುಣಿತ, ಹುಬ್ಬಿನ ಕುಣಿತ, ತುಟಿಯ ಕೊಂಕು, ಕತ್ತಿನ ತಿರುಹು, ಮೈಯ ಒಲೆದಾಟ—ಹೆಣ್ಣಿನಲ್ಲಿ ಪುರುಷನನ್ನು ಆಕರ್ಷಿಸುವ ಈ ಯಾವ ಭಾವ-ಭಂಗಿಗೂ ಲಲಿತಮ್ಮ, ಅವು ಪರರ ಕಣ್ಣಿಗೆ ಕಾಣದಂತೆ ಸಂಯಮದ ತೆರೆ ಹಾಕಿರಲಿಲ್ಲ. ಹಿಂದೆ ಯೌವನದಲ್ಲಿ, ಯಜಮಾನರಿದ್ದಾಗ ಹೇಗೋ, ಇಂದೂ ಅಂತೆಯೇ, ಆಕೆಯ ದೇಹದಿಂದ ಆಕರ್ಷತೆಯ ಹೊಳೆ ಧಾರಾಳವಾಗಿ ಹರಿದು, ನೋಡುವವರನ್ನು ಕೊಚ್ಚುತ್ತಿದ್ದವು. ಅದಾವ ವಿಷಯದಲ್ಲೂ, ಯಜಮಾನರಿಲ್ಲದ ತಾನು, ಆ ರೀತಿ ವರ್ತಿಸಬಾರದು ಎಂಬ ಸಂಕೋಚ ಲಲಿತಮ್ಮನಿಗೆ ಇದ್ದಂತೆ ಇರಲಿಲ್ಲ.

ಅದೆಲ್ಲಕ್ಕಿಂತಲೂ ಹೆಚ್ಚಾಗಿ ಒಮ್ಮೊಮ್ಮೆ—

ಆಕೆಯ ಕಣ್ಣಿನಲ್ಲಿ ಕಾಮದ ಹಸಿವು, ಮೈಯಲ್ಲಿ ಆಲಿಂಗನದ ಔತ್ಸುಕ್ಯ, ತುಟಿಗಳಲ್ಲಿ ಚುಂಬನದ ಕಾತುರ ತಟಕ್ಕನೆ ಸುಳಿದು ಮಾಯವಾಗುತ್ತಿತ್ತು.

ಯಾವಾಗಲಾದರೊಮ್ಮೆ ಮಾತನಾಡುವಾಗಲೋ, ನಾಲ್ವರೂ

ಕಲೆತು ಪಗಡೆಯಾಡುವಾಗಲೋ, ಆಕೆಗೆ ತನ್ನ ಹಸ್ತಸ್ಪರ್ಶವಾದಾಗ, ಆಕೆಯ ಕಣ್ಣುಗಳು ಬಯಕೆಯಿಂದ ಭಾರವಾಗುವುದನ್ನು ಮಾಧವರಾಯ ಗಮನಿಸಿದ್ದ.

ಯಾವಾಗಲಾದರೊಮ್ಮೆ, ನೀಲಾ ಇಲ್ಲದ ಸಮಯದಲ್ಲಿ ಒಂಟಿಯಾಗಿ ಮಾಧವರಾಯನನ್ನು ನೋಡಿದಾಗ, ಅವನೊಂದಿಗೆ ಮಾತನಾಡಬೇಕಾದ ಸಂದರ್ಭ ಒದಗಿಬಂದಾಗ, ಆಕೆಯ ಮೈ ಬಯಕೆಯಿಂದ ಬಿಗಿದ ಬಿಲ್ಲಿನಂತಾಗುತ್ತಿದ್ದುದನ್ನೂ ಉಕ್ಕಿದ ಆಕಾಂಕ್ಷೆಯಿಂದ ಧ್ವನಿ ಶಿಥಿಲವಾಗಿ ಕಂಪಿಸುತ್ತಿದ್ದುದನ್ನೂ ಮಾಧವರಾಯ ಕಂಡಿದ್ದ.

ಅಂಥ ಹೊತ್ತಿನಲ್ಲಿ,ಲಲಿತಮ್ಮ ಚೆನ್ನಾಗಿ ಮಾಗಿ, ತೊಟ್ಟು ಕೃಶವಾಗಿ ಸಣ್ಣ ಗಾಳಿಗೂ ಉದುರಿ ಬೀಳಲು ಸಿದ್ಧವಾದ ರಸಭರಿತಫಲದಂತೆ ಕಂಡು, ಯಾವ ಹೊತ್ತಿನಲ್ಲಾದರೂ ತನ್ನ ಆಹ್ವಾನದ ಅಗತ್ಯವಿಲ್ಲದೆಯೇ, ಆಕೆಯ ತೋಳು ತನ್ನನ್ನು ಬಳಸಬಹುದು ಎನಿಸುತ್ತಿತ್ತು.

ಆದರೆ—

ಆ ಬಯಕೆ, ಕಾತುರ, ಔತ್ಸುಕ್ಯ–ಎಲ್ಲವೂ ಕ್ಷಣಕಾಲ ಮಾತ್ರ.

ಒಂದು ಕ್ಷಣ ಹಾಗೆ—

ಮರುಕ್ಷಣವೇ ಆ ಬಯಕೆಯ ತೋಳನ್ನು, ಭಯಂಕರ ಭೀತಿಯ ಕಾರ್ಮೋಡ ಕವಿದು, ಬಿಗಿದು ಪುಟಿಯುವಂತಿದ್ದ ಮೈ ಚಟಕ್ಕನೆ ನಿರ್ಜೀವ ಶಿಲೆಯಂತೆ ಜಡವಾಗಿ, ಆ ಅವಸ್ಥೆಯಲ್ಲಿ ಆಕೆಯನ್ನು ನೋಡಿದವರಿಗೂ ಏನೋ ಒಂದು ಬಗೆಯ ಅಸ್ಪಷ್ಟ ಅನಿರ್ವಚನೀಯ ಭೀತಿಯ ಮಂಜು ಕವಿದಂತಾಗುತ್ತಿತ್ತು.

ಧಗಧಗನೆ ಉರಿಯುತ್ತಿದ್ದ ಉಗ್ರಜ್ವಾಲೆ, ಒಂದೇ ಕ್ಷಣ ಮಾತ್ರದಲ್ಲೇ, ಕುಳಿರು ಒಸರುವ ಹಿಮಶಿಲೆಯಾಗುತ್ತಿದ್ದ ಆ ವಿಸ್ಮಯವನ್ನು ಎಷ್ಟೋ ಬಾರಿ ಕಂಡು ಮಾಧವರಾಯ ದಿಗ್ಭ್ರಾಂತನಾಗಿದ್ದ.

ಹಾಗನಿಸಿದಾಗ ಮಾಧವರಾಯನಿಗೆ, ಲಲಿತಮ್ಮನ ಚಿತ್ತಾಪಹಾರಿಯಾದ ಸೌಂದರ್ಯವನ್ನು, ಯಾವುದೋ ನಿಗೂಢ ಭಯಂಕರ ಭೀತಿಯ ಬಲೆ ಆವರಿಸಿರುವಂತೆ ಕಂಡು, ಅವನೊಳಗಿನ ಸಾಹಸಬುದ್ಧಿ ಜಾಗೃತವಾಗಿ—

"ಇದೇನೋ ಒಂದು ದೊಡ್ಡ ರಹಸ್ಯವಿರುವಂತಿದೆ. ಬೇಕಾದ್ದಾಗಲಿ,

ಈ ರಹಸ್ಯವನ್ನು ಭೇದಿಸಬೇಕು. ಸಾಧ್ಯವಾದರೆ, ಈ ರಹಸ್ಯ ಭೀತಿಯ ಕೋಟೆಯನ್ನು ಒಡೆದು, ಆ ಕೋಟೆಯಲ್ಲಿ ಬಂದಿಯಾಗಿರುವ ಸೌಂದರ್ಯವನ್ನು ಗೆಲ್ಲಬೇಕು."

—ಎನಿಸುತ್ತಿತ್ತು.

ಆ ಸಾಹಸಭಾವನೆ ಮೂಡಿದಾಗ—

"ಇರಲಿ, ಎರಡು ದಿನವಲ್ಲ, ನಾಲ್ಕು ದಿನ ಜೊತೆಯಲ್ಲಿ ಕಾಲ ಕಳೆದರೆ, ಒಂದಲ್ಲ ಒಂದು ದಿನ ಈ ರಹಸ್ಯವೇನೆಂಬುದು ತಿಳಿದು, ಅವಳ ಭೀತಿಯನ್ನು ಭೇದಿಸಲು ಸಾಧ್ಯವಾಗುತ್ತದೆ. ಅಂತೂ ಏನಾದರಾಗಲಿ, ಇದರ ಗುಟ್ಟೇನು ಎನ್ನುವುದನ್ನು ಕಂಡುಕೊಳ್ಳಲೇಬೇಕು, ಬಿಡಬಾರದು."

—ಎಂದು ತನಗೆ ತಾನೇ ಶಪಥಮಾಡಿಕೊಂಡ ಮಾಧವರಾಯ.

ಮಾಧವರಾಯನ ಪಾಲಿಗೆ, ಲಲಿತಮ್ಮ ಅಭೇದ್ಯ ರಹಸ್ಯದ ಸವಾಲಿನಂತೆ ಕಂಡರೆ, ನೀಲಾ-ಮಾಧವರಾಯನ ಸಂಬಂಧ ಲಲಿತಮ್ಮನ ಪಾಲಿಗೆ ಅಂಥದೇ ಒಗಟೆಯಾಗಿತ್ತು.

"ಇದೇನಿದು ನೀಲಾ, ಹೀಗೆ ಆಕಾಶದಿಂದ ಧುಮುಕಿದ ಹಾಗೆ ಬಂದೆಯಲ್ಲ"

—ಎಂದು ಸಾಶ್ಚರ್ಯ ಪೂರಿತವಾಗಿ ಪ್ರಶ್ನಿಸಿದಾಗ—

"ಅದೆಲ್ಲಾ ಆಮೇಲೆ ಯಾವಾಗಲಾದ್ರೂ ನಿಧಾನವಾಗಿ ಹೇಳ್ತೀನಿ. ಅಂತೂ ನಾಲ್ಕು ದಿನ ನಿನ್ನ ಮನೇಲಿ ಇದ್ದು ಹೋಗೋಕೆ ಬಂದಿದೀನಿ."

—ಎಂದು ಹೇಳಿ, ತಾನು ಅಲ್ಲಿಗೆ ಬರುವಾಗ ಮಾಧವರಾಯನಿಗೆ ಹೇಳಿದ ನೆಪವನ್ನು ವಿವರಿಸಿ, ಆ ಬಗ್ಗೆ ನಾಗರತ್ನಳ ಕಾಗದ ಕೊಟ್ಟು—

"ನೀನೂ ನನ್ನ ಮಾತು ನಿಜಾ ಅನ್ನೋ ಹಾಗೇ ನಡಕೋ ಬೇಕು ಲಲಿತಕ್ಕ...."

—ಎಂದು ಬೇಡಿದ್ದಳು.

"ನಿನ್ನ ಜೊತೇಲಿ ಬಂದಿರೋದು ಯಾರು ?"

—ಎಂದು ಲಲಿತಮ್ಮ ಪ್ರಶ್ನಿಸಿದಾಗ—

"ನನ್ನ ಯಜಮಾನರು"

—ಎಂದು ಉತ್ತರ ಕೊಟ್ಟಿದ್ದಳೇ ವಿನಾ ಮಾಧವರಾಯ ಯಾರು, ಏನು ಎಂಬುದನ್ನು ಹೇಳಿರಲಿಲ್ಲ.

ಹೀಗಾಗಿ ನೀಲಾ ಅಲ್ಲಿಗೆ ಬಂದುದು, ಅವಳ ಮಾತು ಕಥೆ, ಎಲ್ಲವೂ ಒಗಟೆಯಂತೆ ಕಂಡು ಬಂದು, ಈ ಅನಿರೀಕ್ಷಿತ ಘಟನೆಯ ಹಿನ್ನೆಲೆಯಲ್ಲಿ ಏನಿರಬಹುದೆಂಬುದನ್ನು ಅರಿಯಲು ಲಲಿತಮ್ಮನೂ ಕಾತುರಳಾಗಿದ್ದಳು.

ನೀಲಾ ಮಾಧವರಾಯ 'ತನ್ನ ಯಜಮಾನರು' ಎಂದು ಹೇಳಿದ್ದರೂ, ಆ ಮಾತಿನಲ್ಲಿ ಲಲಿತಮ್ಮನಿಗೆ ನಂಬಿಕೆಯಿರಲಿಲ್ಲ. ಎಲ್ಲ ವೇಶ್ಯೆಯರ ಹುಡುಗಿಯರಿಗೆ ಆದ ಹಾಗೆ ನೀಲಳಿಗೂ ಗೆಜ್ಜೆಪೂಜೆಯು ಶಾಸ್ತ್ರವಾಗಿದ್ದಿದ್ದರೆ, ಆ ವಿಷಯ ಅತಿ ಹತ್ತಿರದ ಬಂಧುವಾದ, ಮತ್ತು ಗಂಜಾಂಗೆ ಅತಿ ಸಮೀಪದಲ್ಲಿದ್ದ ತನಗೆ ತಿಳಿದೇ ತಿಳಿಯುತ್ತಿತ್ತು. ಏನೋ ಕಾರಣದಿಂದ ಉತ್ಸವಕ್ಕೆ ಆಹ್ವಾನ ಬರದಿದ್ದರೂ, ನಾಗರತ್ನ ವಿಷಯವನ್ನಾದರೂ ಹೇಳಿ ಕಳಿಸದೆ ಇರುತ್ತಿರಲಿಲ್ಲ. ಹಾಗಿರುವಾಗ ಮಾಧವರಾಯನನ್ನು ನೀಲಳ ಯಜಮಾನರು ಎಂದು ನಂಬುವುದು ಹೇಗೆ ?

ಒಂದು ವೇಳೆ ಹುಡುಗಿ ಪ್ರಾಯದಲ್ಲಿ ಕುರುಡಾಗಿ ತನಗೆ ಬೇಕಾದವನನ್ನು ಕಟ್ಟಿಕೊಂಡು ಓಡಿಬಂದಳೇನೋ ಎಂದರೆ, ಆ ಅನುಮಾನ ಪಡಲೂ, ನಾಗರತ್ನ ನೀಲಳೊಂದಿಗೆ ಕಳಿಸಿದ ಕಾಗದದಿಂದಾಗಿ, ಆಸ್ಪದವಿರಲಿಲ್ಲ.

ಏನೋ ಗೆಜ್ಜೆ ಶಾಸ್ತ್ರ ಮಾಡದೆಯೇ ಇವರಿಬ್ಬರೂ ಒಂದಾಗಲು ನಾಗರತ್ನ ಒಪ್ಪಿಗೆ ಕೊಟ್ಟಳೇನೋ ಎಂದು ಊಹಿಸುವುದಕ್ಕೂ ಅವಕಾಶವಿರಲಿಲ್ಲ. ಹತ್ತು ಜನರ ಎದುರಿಗೆ ಆ ಶಾಸ್ತ್ರ ನಡೆಯದಿದ್ದರೆ, ಒಂದು ವೇಳೆ ಇವರಿಬ್ಬರಲ್ಲಿ ವಿರಸಬಂದರೆ, ಹುಡುಗಿಗೆ ಇಂಥದನ್ನು ಕೊಡು ಎಂದು ನಾಲ್ಕು ಜನರ ಇದುರಿಗೆ ಕಟ್ಟಿಕೊಂಡವನನ್ನು ಕೇಳುವುದಕ್ಕೆ ಬಾಯಿ ಇರುವುದಿಲ್ಲ ಎಂಬುದು ಎಲ್ಲ ವೇಶ್ಯೆಯರಂತೆಯೇ ಲಲಿತಮ್ಮನಿಗೂ ತಿಳಿಯದ ವಿಷಯವಲ್ಲ. ಬುದ್ಧಿವಂತಳಾದ ನಾಗರತ್ನ, ಯಾವ ಮೂರ್ಖರೂ ಮಾಡದ ಈ ಕೆಲಸವನ್ನು ಮಾಡುವಳೇ ? ಒಂದು ವೇಳೆ, ಈ ಪ್ರಸಂಗದಲ್ಲಿ ನಾಗರತ್ನ ನೇರ ವ್ಯವಹಾರ ಮಾರ್ಗವನ್ನು ಬಿಟ್ಟು, ಅಡ್ಡ ಹಾದಿಯಲ್ಲಿ ವ್ಯವಹರಿಸಿದ್ದರೆ, ಅದಕ್ಕೆ ಏನೋ ಅತ್ಯಂತ ಬಲವತ್ತರವಾದ ಕಾರಣವಿದ್ದಿರಬೇಕು. ಅಂಥ ಸಂದರ್ಭ ಏನು ಒದಗಿ ಬಂದಿರಬಹುದು ?

ಆಯಿತು, ಹೇಗೋ ಇವರಿಬ್ಬರಿಗೂ ಕಲೆಯಿತು ಎಂದರೆ, ಈಗ

ಹೀಗೆ ಏಕಾಏಕಿ ಇಲ್ಲಿಗೆ ಬಂದದ್ದೇಕೆ ?

ಹೀಗೆ, ನೀಲಾ-ಮಾಧವರಾಯರ ಸಂಬಂಧವನ್ನು ಯೋಚಿಸಿದಾಗ ಲಲಿತಮ್ಮನ ತಲೆಯಲ್ಲೂ, ಉತ್ತರಸಿಗದ ಸಾವಿರ ಪ್ರಶ್ನೆಗಳು ಹೆಡೆಯೆತ್ತಿ-

"ಆಗಲಿ, ಅದೇನು ರಹಸ್ಯವಿದೆಯೋ, ಅದನ್ನು ನೀಲಳ ಬಾಯಿಂದಲೇ ಹೊರಡಿಸಬೇಕು"

—ಎಂದು ಆಕೆಯೂ ಸಮಯ ಕಾಯುತ್ತಿದ್ದಳು.

೨೬

ನೀಲಾ ಬನ್ನೂರಿಗೆ ಬಂದು ನಾಲ್ಕೈದು ದಿನಗಳಾದ ಬಳಿಕ, ಒಂದು ದಿನ ಸಂಜೆ, ಮಾಧವರಾಯ ಶೇಷಣ್ಣನೊಂದಿಗೆ ತಿರುಗಾಡಿಕೊಂಡು ಬರಲೆಂದು ಹೋದಾಗ, ಮನೆಯಲ್ಲಿ ನೀಲಾ, ಲಲಿತಮ್ಮ ಇಬ್ಬರೇ ಲೋಕಾಭಿರಾಮವಾಗಿ ಮಾತನಾಡುತ್ತಾ ಕುಳಿತಿದ್ದರು. ಸ್ವಾಭಾವಿಕವಾಗಿ ಸ್ತ್ರೀಯರು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುವಾಗ, ವಿಷಯ ಎತ್ತ ಹೇಗೆ ಆರಂಭವಾದರೂ, ಆ ಮಾತಿನ ಮಧ್ಯೆ ಸೀರೆ, ಕುಬುಸ, ಒಡವೆ-ವಸ್ತುಗಳ ಮಾತು ಬರುವುದು ಸಹಜ. ಇಬ್ಬರು ಹೆಂಗಸರು ಅಪರೂಪವಾಗಿ ಕಲೆತು, ಅವರು ಏಕಾಂತವಾಗಿ ಮಾತನಾಡಿಕೊಳ್ಳುವ ಅವಕಾಶ ದೊರಕಿದಾಗ, ಇಬ್ಬರಲ್ಲಿ ಒಬ್ಬರಾದರೂ, 'ನನ್ನ ಯಜಮಾನರು ನನಗೆ ಈ ನಗ ಮಾಡಿಸಿಕೊಟ್ಟರು, ಇಂಥ ಹಬ್ಬಕ್ಕೆ ಇಂಥ ಸೀರೆ ತೆಗೆದುಕೊಟ್ಟರು. ನೀನು ಏನೇನು ಒಡವೆ ಮಾಡಿಸಿಕೊಂಡೆ ?' ಎಂಬ ಪ್ರಶ್ನೆಯನ್ನು ಎತ್ತದಿರುವುದು ಸಾಧ್ಯವೇ ಇಲ್ಲ. ಅಗಸಗಿತ್ತಿಯಿಂದ ಹಿಡಿದು ಅರಸಿತಿಯವರೆಗೆ ಎಲ್ಲ ಹೆಂಗಸರಲ್ಲೂ ಈ ಚಪಲ ಇದ್ದೇ ಇರುತ್ತದೆ.

ಈ ಸತ್ಯಕ್ಕೆ ನೀಲಾ, ಲಲಿತಮ್ಮ ಇಬ್ಬರೂ ಅಪವಾದವಾಗಿರಲಿಲ್ಲ. ಎಂತಲೇ ಮಾತು ಎತ್ತೆತ್ತಲೋ ನಡೆದು, ಸೀರೆ, ಒಡವೆಗಳ ವಿಷಯಕ್ಕೆ ಬಂದಾಗ, ಲಲಿತಮ್ಮನೇ—

"ಅಲ್ಲಾ ನೀಲಾ, ನಿನ್ನ ಗೆಜ್ಜೆಪೂಜೆಯ ವಿಷಯವಂತೂ ಮಹಾ ಚಿದಂಬರ ರಹಸ್ಯ. ಎಷ್ಟು ಕೇಳಿದರೂ ನೀನಂತೂ ಅದು ಯಾವಾಗ ಆಯಿತು, ಹೇಗಾಯಿತು ಅನ್ನೋದು ಹೇಳೋದಿಲ್ಲ. ಹೋಗಲಿ, ನಿನ್ನ

ಯಜಮಾನರು ನಿನಗೆ ಏನೇನು ಒಡವೆ-ವಸ್ತ್ರ ಇಟ್ಟಿದಾರೆ—ಅದನ್ನಾದರೂ ತೋರಿಸಬಾರದೆ? ”

—ಎಂದು ಕೇಳಿದಳು.

“ ನೀನು ಕಾಣದಂಥ ಒಡವೆ-ವಸ್ತು ಇನ್ನೇನು ಇಟ್ಟಾರು ಲಲಿತಕ್ಕ. ಏನೋ ನನ್ನ ಯೋಗ್ಯತೆಗೆ ತಕ್ಕಷ್ಟು ಕೊಟ್ಟಿದಾರೆ. ”

—ಲಲಿತಮ್ಮನ ಪ್ರಶ್ನೆಗೆ ನೀಲಾ ನೇರವಾದ ಉತ್ತರ ಕೊಡದೆ, ಜಾರಿಕೊಳ್ಳುತ್ತಾ ಹೇಳಿದಳು.

“ ಅದೇನೇ ಅದು-ಯಾರಿಗೋ ಕಂಡೋರಿಗೆ ಉತ್ತರ ಕೊಟ್ಟ ಹಾಗೆ ಕೊಡ್ತೀಯಲ್ಲ. ನನಗೆ ಹೇಳಿದರೆ ನಾನೇನು ಪಾಲಿಗೆ ಬರ್ತೀನೆಯೇ? ಇಂಥದು ಕೊಟ್ಟಿದಾರೆ ಅಂತ ತೋರಿಸಿದರೆ, ನೋಡಿ ಸಂತೋಷ ಪಡ್ತೀನಿ. ತೆಗಿ—ಅದೇನು ಕೊಟ್ಟಿದಾರೋ ತೋರಿಸು. ”

—ಎಂದು ಬಲವಂತ ಮಾಡಿ ಕೇಳಿದಳು ಲಲಿತಮ್ಮ.

“ ಊರಿಂದ ಊರಿಗೆ ಬರ್ತಾ, ಅದೂ ನಾಲ್ಕು ದಿನ ಇದ್ದು ಹೋಗ ಬೇಕೂಂತ ಬಂದೋಳು, ಇದ್ದದ್ದೆಲ್ಲಾ ಯಾಕೆ ತರಲಿ ಹೇಳು....”

“ತರೋದು ಬೇಡ. ಒಂದೆರಡಾದರೂ ಮೈ ಮೇಲೆ ಇಟ್ಟುಕೊಳ್ಳೋಕೆ ತಂದಿದೀಯೋ ಇಲ್ಲವೋ....”

“ ಅಷ್ಟು ತರದೆ ಬರ್ತೀನೆಯೇ ? ”

“ ಸರಿ ಮತ್ತೆ—ಅದೇನು ತಂದಿದೀಯೋ ಅದನ್ನೇ ತೋರಿಸು. ”

—ಎಂದು ಲಲಿತಮ್ಮ ಗಂಟೇ ಬಿದ್ದಳು.

ಆಗ ನೀಲಾ ಅನಿವಾರ್ಯವಾಗಿ ಲಲಿತಮ್ಮನಿಗೆ ತನ್ನ ಒಡವೆಗಳನ್ನು ತೋರಿಸಲೇಬೇಕಾಯಿತು. ಬನ್ನೂರಿಗೆ ಹೋದಾಗ ಇಂಥ ಪರಿಸ್ಥಿತಿ ಬಂದೇ ಬರುವುದೆಂದು ನಾಗರತ್ನಳಿಗೆ ತಿಳಿದಿತ್ತು. ಸಂದರ್ಭ ಬಂದಾಗ ಲಲಿತಮ್ಮ ನಿಗೆ ತೋರಿಸಿ ‘ ನೀಲಳಿಗೆ ಕಡಿಮೆ ದರ್ಜೆ ಸಂಬಂಧ ಮಾಡಿಲ್ಲ ’ ಎಂದು ಪರ್ಯಾಯವಾಗಿ ಹೇಳಲು ಅದು ಅನುಕೂಲವಾಗುವಂತೆ, ಹತ್ತಾರು ಆಭರಣಗಳನ್ನೂ, ಎಂಥಾವರ ಬಾಯಲ್ಲೂ ನೀರೂರಿಸುವಂತೆ ಮಾಡುವ ಅಮೂಲ್ಯವಾದ ಮುತ್ತಿನ ಮೂಗುತಿಯನ್ನೂ ನೀಲಳೊಂದಿಗೆ ಕಳಿಸಿದ್ದಳು.

ಅದನ್ನು ಲಲಿತಮ್ಮನಿಗೆ ತೋರಿಸಿ, ಅವಳ ಮುಂದೆ ತನ್ನ ಹಿರಿಮೆಯನ್ನು ಮೆರೆಯಬೇಕೆಂಬ ಚಪಲ ಎಷ್ಟೇ ಇದ್ದರೂ— ‘ ಹೊತ್ತು ಬರಲಿ, ನಾನೇಕೆ

ಮೇಲೆ ಬಿದ್ದು ತೋರಿಸಲಿಕ್ಕೆ ಹೋಗಲಿ' ಎಂಬ ಬಿಂಕದಿಂದಿದ್ದ ನೀಲಾ—

"ನೀನು ನೋಡೋಕೆ ನಾನ್ಯಾಕೆ ಬೇಡಾನ್ನಲಿ ಲಲಿತಕ್ಕ. ತಂದು ತೋರಸ್ತೀನಿ ತಡಿ."

—ಎಂದು ಹೇಳಿ ಮಹಡಿಯ ಮೇಲಿನ ಕೋಣೆಗೆ ಹೋಗಿ ಮಂಚದಡಿಯಲ್ಲಿರಿಸಿದ ತನ್ನ ಸಣ್ಣ ಕೈ ಪೆಟ್ಟಿಗೆಯಲ್ಲಿದ್ದ ಒಡವೆಗಳೆಲ್ಲವನ್ನೂ ತಂದು ಲಲಿತಮ್ಮನಿಗೆ ತೋರಿಸಿದಳು.

ಒಂದೊಂದಾಗಿ ಲಲಿತಮ್ಮನೂ ನೀಲಾ ತೋರಿಸಿದ ಒಡವೆಗಳನ್ನೆಲ್ಲಾ ನೋಡಿದಳು. ಅವು ಯಾವೂ ಅತಿಶಯದ ಒಡವೆಗಳಾಗದಿದ್ದರೂ, ವಾಡಿಕೆಯಂತೆ—

"ತುಂಬಾ ಚೆನ್ನಾಗಿದೆ"

—ಎಂದು ಹೊಗಳುತ್ತಿದ್ದವಳು, ಎಲ್ಲಕ್ಕೂ ಕೊನೆಯದಾಗಿ ನೀಲಾ ತೋರಿಸಿದ ಮುತ್ತಿನ ಮೂಗುತಿಯನ್ನು ಕಂಡು ಚಕಿತಳಾಗಿ, ಹತ್ತಾರು ಬಾರಿ ಅದನ್ನು ತಿರುಗಿಸಿ-ಮುರುಗಿಸಿ, ಕೈಯಲ್ಲಿ ತೂಕ ಮಾಡಿ ನೋಡಿ, ಹೊರಗಿನ ಬೆಳಕಿನಲ್ಲಿ ಸೂಕ್ಷ್ಮವಾಗಿ ಪರೀಕ್ಷೆಮಾಡಿ—

"ಇದು ನಿನ್ನ ಯಜಮಾನರು ನಿನಗೆ ಮಾಡಿಸಿ ಕೊಟ್ಟ ಮೂಗುತೀನಾ ನೀಲಾ?"

—ಎಂದು ಕೇಳಿದಳು.

"ಹೂಂ. ಚೆನ್ನಾಗಿದೆಯೇ ಲಲಿತಕ್ಕ?....

"ದಿವ್ಯವಾಗಿದೆ. ಇದನ್ನು ನಿನಗೇಂತಲೇ ನಿನ್ನ ಯಜಮಾನರು ಹೊಸದಾಗಿ ಮಾಡಿಸಿಕೊಟ್ಟರೇ?"

"ಊಹೂ....ಅವರ ಮನೇಲೇ ಇತ್ತಂತೆ, ಮೊದಲ ರಾತ್ರಿ ತಂದು ಕೈಯಾರ ನನ್ನ ಮೂಗಿಗಿಟ್ಟರು."

"ಈ ಮೂಗುತೀನ ಅವರು ಎಲ್ಲಿ ಯಾವಾಗ ಮಾಡಿಸಿದರೂಂತ ಹೇಳಿದರೆ?"

"ಉಹೂ, ಅದೆಲ್ಲಾ ನಾನು ಕೇಳಲೂ ಇಲ್ಲ. ಅವರು ಹೇಳಲೂ ಇಲ್ಲ. ಅದ್ಯಾಕೆ ಲಲಿತಕ್ಕ ಇದೆಲ್ಲಾ ಕೇಳ್ತೀಯ?"

"ನೀನೇನೂ ತಿಳುಕೊಳ್ಳದೇ ಹೋದರೆ ಹೇಳ್ತೀನಿ...."

"ಹಾಗೆಲ್ಲಾರ ಉಂಟೆ— ಅದೇನು ಹೇಳು?"

ಈ ಮೂಗುತೀನ ನೋಡಿದ್ರೆ ನನಗ್ಯಾಕೋ ಅನುಮಾನ ಆಗ್ತಿದೆ...."

—ಆ ಮಾತನ್ನು ಹೇಳುವುದೋ ಬಿಡುವುದೋ ಎಂದು ಸಂಕೋಚ ಪಡುತ್ತಾ ಹೇಳಿದಳು ಲಲಿತಮ್ಮ.

" ಯಾಕೆ ? "

—ಲಲಿತಮ್ಮನ ಮಾತು ಕೇಳಿ ನೀಲಾ ಬೆಚ್ಚಿ ಬಿದ್ದು ಕೇಳಿದಳು.

" ಇಂಥದೇ ಮೂಗುತೀನ ನ್ನಾನು ಇನ್ನೊಂದು ಕಡೆ ನೋಡಿದ್ದೆ "

" ಎಲ್ಲಿ ? "

" ಶೃಂಗೇರೀಲಿ, ಶಾರದಾಮ್ಮನೋರ ಮೂಗಿನಲ್ಲಿ! ನನ್ನ ಯಜಮಾನ ರಿಗೆ ಶಾರದಾಮ್ಮನೋರು ಅಂದ್ರೆ ಭಾಳ ಭಕ್ತಿಯಿತ್ತು. ಪ್ರತಿವರ್ಷ ನವರಾತ್ರಿ ಹಬ್ಬಕ್ಕೆ ಅಲ್ಲಿಗೆ ಹೋಗ್ತಾ ಇದ್ದರು. ಒಂದೆರಡು ಸಲ ನನ್ನನ್ನೂ ಕರಕೊಂಡು ಹೋಗಿದ್ರು. ಒಂದು ಸಲ ನಾನು ಅಮ್ಮನೋರ ಮೂಗಿನಲ್ಲಿದ್ದ ಮೂಗುತೀನ ನೋಡಿ ಭಾಳ ಚೆನ್ನಾಗಿದೆ ಅಂದಾಗ ಯಜಮಾನರು ಹೇಳ್ತಾಗಿದ್ದೇನು, ನಮ್ಮ ದೇಶವೆಲ್ಲಾ ಜಾಲಾಡಿದರೂ, ಇಂಥ ಇನ್ನೊಂದು ಮೂಗುತಿ ಇಲ್ಲ. ಈ ಮೂಗುತೀನ, ಸಾಕ್ಷಾತ್ ಶಂಕರಾಚಾರ್ಯರೇ, ಅಮ್ಮನವರನ್ನ ಪ್ರತಿಷ್ಠಿಸುವ ಕಾಲದಲ್ಲಿ ಇಟ್ಟಿದ್ದು. ಅಂಥಾದ್ದರಲ್ಲಿ ನೀತಿ ಕಥೆ ಇಂಥ ಮೂಗುತಿ ಕಂಡೀತಾ? ಪಟ್ಟಣದ ರಂಗನಾಯಕಮ್ಮನೋರ ಮೂಗಿ ನಲ್ಲಿರೋ ಅಲಮೇಲಮ್ಮನವರ ಮೂಗುತಿಯು ಹೀಗಿತ್ತು ಗಾತ್ರದಲ್ಲಿ ದೊಡ್ಡದು. ಆದರೆ ಅದು ಒಂಟಿ ಮುತ್ತಿನ ಮೂಗುತಿ. ಇಂಥ, ಇಷ್ಟು ಗಾತ್ರದ ಮೂರು ಮುತ್ತಿನ ಮೂಗುತಿ ಜಗತ್ತಿನಲ್ಲೇ ಇಲ್ಲ." ಎಂದು ಹೇಳಿದ್ದರು. ಅವರು ಹೇಳಿದ್ದು ಕೇಳಿ ನಾನೂ ನಾಲ್ಕು ನಾಲ್ಕು ಸಲ ನೋಡಿದ್ದೆ ಆ ಮೂಗುತೀನ. ಅದು ಥೇಟ್ ಇದೇ ಮೂಗುತಿ...."

"ಇರಬಹುದು. ಆದ್ರೆ ಶಾರದಾಮ್ಮನೋರ ಮೂಗುತಿಗೂ ನನ್ನ ಯಜಮಾನರು ನನಗಿಟ್ಟ ಮೂಗುತಿಗೂ ಏನು ಸಂಬಂಧ...."

"ನೀನು ಕೇಳಿಲ್ಲಾಂತ ಕಾಣುತ್ತೆ...."

"ಏನು ?"

"ಅಮ್ಮನೋರ ಗುಡಿ ಲೂಟಿಯಾದ ಕಥೇನ."

"ಹೌದೇ ? !"

—ಚಕಿತಳಾಗಿ ಕೇಳಿದಳು ನೀಲಾ.

"ಹೂ. ನಿನ್ನ ಕಿವೀಗೆ ಅದು ಬಿದ್ದೇ ಇಲ್ವೇ? ಅದ್ಯಾವೋನೋ ಹಾಳಾದೋನು ಒಬ್ಬ ಮರಾಟೆ ಸರದಾರನಂತೆ—ಅವನ ವಂಶ ನಿರ್ವಂಶ ವಾಗಿ ಹೋಗ, ಅವನ ಹೆಸರು ಹೇಳಿದೋರಿಗೆ ಮಾರಿ ಬಡಿಯ—ಅವನು, ಸಾವಿರಾರು ಜನದ ಸೈನ್ಯ ತಗೊಂಡು ಬಂದು, ಶೃಂಗೇರಿಗೆ ನುಗ್ಗಿ, ತಾಯಿ ಮಗಳು ಅಂತ ನೋಡದೆ ಆ ಬಡ್ಡೀ ಮಗ, ಅಮ್ಮನೋರ ದೇವ ಸ್ಥಾನಕ್ಕೂ ನುಗ್ಗಿ, ಅಲ್ಲಿದ್ದದ್ದನ್ನೆಲ್ಲಾ ದೋಚಿಕೊಂಡು ಹೋದನಂತೆ. ಅಮ್ಮನೋರು ಉಟ್ಟ ನೀರಾಜಿ ಸೀರೇನೂ ಕಿತ್ತುಕೊಂಡು ಹೋದ ಆ ಚಂಡಾಲ. ಅಮ್ಮನೋರ ಮೂಗಿನಲ್ಲಿದ್ದ ಮೂಗುತೀನೂ ಕದ್ದುಕೊಂಡು ಹೋದನಂತೆ. ಇವತ್ತಿನವರೆಗೂ ಅದರ ಪತ್ತೆ ಇಲ್ಲ. ಗೊತ್ತಿರಬಹುದು— ಹಿಂದುಗಳ ಗುಡಿ ಕಂಡರೆ ಕೆಡವು, ಜನ ಕಂಡರೆ ಜಾತಿ ಕೆಡಿಸು ಅನ್ನೋ ಟೀಪೂಸುಲ್ತಾನರೂ, ಅಮ್ಮನೋರು ಅಂದ್ರೆ ಗಡಗಡ ನಡುಗ್ತಾ ಇದ್ದರು.. ಈ ಲೂಟಿ ಆದಮೇಲೆ ಶೃಂಗೇರಿ ಸ್ವಾಮಿಗಳಿಗೆ ಬೇಜಾರಾಗಿ, ಆ ಊರೇ ಬಿಟ್ಟುಹೋಗಬೇಕೂಂತ ಇದ್ದಾಗ, ಸುಲ್ತಾನನೇ ಅವರ ಕಾಲಿಗೆ ಬಿದ್ದು ಬೇಡಿಕೊಂಡು, ಅವರನ್ನು ಅಲ್ಲಿ ಉಳಿಸಿಕೊಂಡ. ಅಂಥ ಬೆಂಕಿಯಂಥ ಸ್ಥಳ ಅಮ್ಮನವರ ಸ್ಥಾನ. ಅಲ್ಲೀ ಸ್ವತ್ತು ಮುಟ್ಟಿದವರು ನಿರ್ವಂಶವಾಗಿ ಹೋಗ್ತಾರೆ—ನೀಲಾ. ಈ ಮೂಗುತೀನ ನೋಡಿದ್ರೆ ನನಗ್ಯಾಕೋ ಅನುಮಾನವಾಗ್ತಾ ಇದೆ."

—ಎಂದು ತನ್ನ ಭೀತಿಯ ಕಾರಣವನ್ನು ವಿವರಿಸಿ ಹೇಳಿದಳು ಲಲಿತಮ್ಮ.

ಲಲಿತಮ್ಮ ಹೇಳಿದುದನ್ನು ಕೇಳಿ, ಮೂಗುತಿಯನ್ನು ಕೈಯಲ್ಲಿ ತೆಗೆದು ಕೊಂಡಿದ್ದ ನೀಲಳಿಗೂ ಮೈ ನಡುಗಿದಂತಾಗಿ—

"ಅದೆಲ್ಲಾ ಇರಬಹುದು ಲಲಿತಕ್ಕ, ಅದೇ ಇದೂಂತ ಹ್ಯಾಗೆ ಹೇಳ್ತೀಯ."

—ಎಂದು ಕೇಳಿದಳು.

ನೀಲಾ ಆ ಪ್ರಶ್ನೆ ಕೇಳಿದಾಗ ಲಲಿತಮ್ಮನಿಗೆ ತಟಕ್ಕನೆ ಬೇರೇನೊ ನೆನಪಾಗಿ.

"ಇಲ್ಲಿ ಬಾ"

—ಎಂದು ನೀಲಳನ್ನು ತನ್ನ ಪೂಜಾಗೃಹಕ್ಕೆ ಕರೆದೊಯ್ದು, ಅಲ್ಲಿದ್ದ ಆಳೆತ್ತರದ ಶೃಂಗೇರಿಯ ಶಾರದಾಂಬೆಯ ತೈಲ ಚಿತ್ರವನ್ನು ತೋರಿಸಿ—

"ಅದು ನೋಡು, ನಿನ್ನ ಕೈಲಿರೋ ಮೂಗುತಿಗೂ, ಅಮ್ಮನೋರ ಮೂಗುತಿಗೂ ಏನಾದರೂ ವ್ಯತ್ಯಾಸ ಇದೆಯೇನೋ ?"

—ಎಂದು ಹೇಳಿದಳು.

ಆ ಮಾತನ್ನು ಕೇಳಿ ನೀಲಳೂ ತನ್ನ ಕೈಯಲ್ಲಿದ್ದ ಮೂಗುತಿಯನ್ನು, ತೈಲ ಚಿತ್ರದಲ್ಲಿನ ಅಮ್ಮನವರ ಮೂಗಿನಲ್ಲಿದ್ದ ಮೂಗುತಿಯೊಂದಿಗೆ ಹೋಲಿಸಿ ನೋಡಿದಳು.

ಎರಡೂ ಒಂದೇ ಎಂದು ಅವಳಿಗೂ ತೋರಿತು.

ಆದರೂ ತನ್ನಲ್ಲಿದ್ದುದು ಕಳವಿನ ಮಾಲು ಎಂದು ಅವಳು ಒಪ್ಪಿಕೊಳ್ಳಲು ಸಿದ್ಧಳಿರಲಿಲ್ಲ.

"ಎರಡೂ ಒಂದೇ ಥರಾ ಇದೆ-ನಿಜ ಲಲಿತಕ್ಕ. ಆದ್ರೆ ನನ್ನ ಯಜಮಾನರು ದೇವಸ್ಥಾನ ಲೂಟಿ ಮಾಡೋರಲ್ಲ."

—ಎಂದಳು ಮಾಧವರಾಯನ ಬೆನ್ನು ಕಟ್ಟಿ ವಾದಿಸುತ್ತಾ.

"ಇರಬಹುದು. ಆದರೆ ಅವರಿಗೇ ಯಾರಾದರೂ ಕದ್ದ ಮಾಲನ್ನು ಮಾರಿರಬಹುದು. ಹೇಗಾದ್ರು ಆಗಲಿ, ಇದು ಎಲ್ಲೀದು ಏನು ಅಂತ ವಿಚಾರಿಸಿ ತಿಳಿದುಕೋ ನೀಲಾ, ಏನೋ ಸಿಕ್ಕಿದ್ದು ಸಿಕ್ಕಿತು ಅಂದರೆ, ಇದು ಸೆರಗಿನಲ್ಲಿ ಕೆಂಡ ಕಟ್ಟಿಕೊಂಡಂತೆ."

—ಎಂದಳು ಲಲಿತಮ್ಮ.

ಆ ಮಾತನ್ನು ಕೇಳಿ ನೀಲಾ—

"ಆಯ್ತು, ವಿಚಾರಿಸ್ತೀನಿ"

—ಎಂದು ಹೇಳಿದಳು.

ಆ ಮಾತು ಮುಗಿದ ಬಳಿಕ ಇಬ್ಬರೂ ಚಿಂತಾಗ್ರಸ್ತರಾಗಿ ಪೂಜಾಗೃಹದಿಂದ ಹಜಾರಕ್ಕೆ ಬಂದರು. ಅವರು ಹಜಾರಕ್ಕೆ ಬರುವ ವೇಳೆಗೆ ಶೇಷಣ್ಣನೊಂದಿಗೆ ಹೊರಗೆ ಅಡ್ಡಾಡಲು ಹೋಗಿದ್ದ ಮಾಧವರಾಯ ಹಿಂದಿರುಗಿ ಬಂದು ಹಜಾರದಲ್ಲಿ ಕುಳಿತಿದ್ದ.

ಅವನನ್ನು ಆಕಸ್ಮಿಕವಾಗಿ ಕಂಡ ನೀಲಳಿಗೆ ತಟಕ್ಕನೆ ಕೆಂಡ ತುಳಿದಂತಾಗಿ, ಮುಖ ಬಿಳುಚಿಕೊಂಡಿತು.

ಅವರನ್ನು ನೋಡಿದ ಮಾಧವರಾಯ, ನೀಲಳ ಕೈಯಲ್ಲಿದ್ದ ಮೂಗುತಿ ಯನ್ನು ನೋಡಿ—

" ನಿನ್ನ ಒಡವೆಗಳನ್ನೆಲ್ಲಾ ಲಲಿತಮ್ಮನೋರಿಗೆ ತೋರಿಸ್ತಾ ಇದ್ದೆಯೊ ನೀಲಾ ! ಅದೇನದು ನಿನ್ನ ಕೈಯಲ್ಲಿರೋದು ? ಕೊಡು ನೋಡೋಣ."

—ಎಂದು ನಗುತ್ತಾ ಎದ್ದು ಬಂದು, ನೀಲಳ ಕೈಯಲ್ಲಿದ್ದ ಮೂಗುತಿ ಯನ್ನು ತೆಗೆದುಕೊಂಡು—

" ಇದೇನೇ ....."

—ಎಂದು ತಾತ್ಸಾರವಾಗಿ ಹೇಳಿದವನು, ತಟಕ್ಕನೆ ಏನೋ ಅನು ಮಾನ ಬಂದು, ಮೂಗುತಿಯನ್ನು ಹತ್ತಿರ ಹಿಡಿದು ಪರೀಕ್ಷೆ ಮಾಡಿ ನೋಡಿ—

" ಈ ಮೂಗುತಿ ಎಲ್ಲಿತ್ತು ನೀಲಾ ? "

—ಎಂದು ಕರ್ಕಶವಾಗಿ ಕೇಳಿದ.

" ನೀ....ನೀ....ವು....ನನಗೆ....ಕೊ....ಕೊ....ಟ್ಟಿ....ದ್ದೆ....ೞ"

" ಯಾವಾಗ ? "

" ಮೊದಲ ದಿನ ಚಂದ್ರಯ್ಯನವರ ಕೈಲಿ ಕಳಿಸಲಿಲ್ಲವೇ ? ಅದೇ ಇದು........"

—ನೀಲಾ ತಡವರಿಸುತ್ತಾ, ತೊದಲುತ್ತಾ ಉತ್ತರ ಕೊಟ್ಟಳು.

" ಇದು ಶೃಂಗೇರಿಯ ಅಮ್ಮನವರ ಮೂಗುತಿ ಇದ್ದಹಾಗೆ ಇದೆ ಯಲ್ಲವೇ ? "

—ಅದುವರೆಗೆ ಸುಮ್ಮನಿದ್ದ ಲಲಿತಮ್ಮ ಕೇಳಿದಳು.

ಲಲಿತಮ್ಮನ ಮಾತು ಕೇಳುತ್ತಿದ್ದ ಹಾಗೇ ಮಾಧವರಾಯನಿಗೆ ಸಿಡಿಲು ಬಡಿದಂತಾಗಿ, ಅವಾಕ್ಕಾಗಿ ನಿಂತ. ಒಂದು ಕ್ಷಣ ಹಾಗೇ ನಿಂತವನು, ತಟಕ್ಕನೆ ಕೆರಳಿದ ಕಾಳಿಂಗ ಸರ್ಪದ ಹಾಗೆ ನಿಂತು—

" ಹಾಗೆಂತಾ ಯಾರು ಹೇಳಿದವರು ? "

—ಎಂದು ಅಬ್ಬರಿಸಿ ಕೇಳಿದ.

ಮುಂಗಾರಿನ ಸಿಡಿಲಿನ ಅಬ್ಬರದಂತೆ ಕೇಳಿದ ಆ ಪ್ರಶ್ನೆಯನ್ನು ಕೇಳು ವಾಗ ಇದ್ದಕ್ಕಿದ್ದ ಹಾಗೆ ರೋಷಭೀಷಣವಾದ ಮುಖವನ್ನು ನೋಡಿ, ನಿರ್ಭೀತರಾಗಿ ಕಾಡಿನಲ್ಲಿ ಅಲೆಯುತ್ತಿರುವಾಗ ಸನಿಹದಲ್ಲೇ ಹುಲಿಯ

ಅಬ್ಬರವನ್ನು ಕೇಳಿದ ಭಯಗ್ರಸ್ತರಂತೆ, ನೀಲಾ ಲಲಿತಮ್ಮ ಇಬ್ಬರೂ ಗಡ ಗಡ ನಡುಗಿದರು.

"ಲ....ಲ....ಲ....ಲಿ....ತ....ಕ್ಕ...."

—ಮಾಧವರಾಯನ ಪ್ರಶ್ನೆಗೆ ನೀಲಾ ವಾತಾಘಾತದ ಅರಳಿಯ ಚಿಗುರಿನಂತೆ ಕಂಪಿಸುತ್ತಾ ಉತ್ತರ ಕೊಟ್ಟಳು.

ನೀಲಾ ಕೊಟ್ಟ ಉತ್ತರವನ್ನು ಕೇಳಿ ಮಾಧವರಾಯ, ಸರಕ್ಕನೆ ಲಲಿತಮ್ಮನತ್ತ ತಿರುಗಿ ನೋಡಿದ.

ಲಲಿತಮ್ಮನ ಕಣ್ಣುಗಳೂ ಸರ್ಪದೃಷ್ಟಿ ಮುಗ್ಧ ಮಂಡೂಕದಂತೆ ಮಾಧವರಾಯನನ್ನೇ ನೋಡುತ್ತಿದ್ದುವು.

ಎರಡು ಕ್ಷಣ ಕಾಲ ಲಲಿತಮ್ಮನ ಕಣ್ಣು ನೋಟದೊಂದಿಗೆ ಸೆಣಸುವಂತೆ ನೋಡಿದ್ದ ಮಾಧವರಾಯ, ತಟಕ್ಕನೆ ತನ್ನ ಉದ್ರೇಕವನ್ನು ತಡೆದುಕೊಂಡು, ಬಹು ಶುಷ್ಕವಾಗಿ ನಕ್ಕು—

"ಹೊ....ಹೊ....ಇದನ್ನು ನೋಡಿದವರು ಹಾಗೇ ಹೇಳುತ್ತಾರೆ. ಆದರೆ ಇದು ಅಸಲಿಯಲ್ಲ, ನಕಲಿ. ಅಮ್ಮನವರ ಮೂಗುತಿಯನ್ನು ನೋಡಿದಂದಿನಿಂದಲೂ ಅಂಥದೇ ಮೂಗುತಿ ಮಾಡಿಸಬೇಕೆಂದು ನನಗೆ ಅಪೇಕ್ಷೆ ಇತ್ತು. ಅದಕ್ಕೋಸ್ಕರವೇ ಒಬ್ಬ ಅಕ್ಕಸಾಲಿಯನ್ನು ಕರೆದುಕೊಂಡು ಹೋಗಿ ಅಮ್ಮನವರ ಮೂಗುತಿಯ ತದ್ವತ್ ಪ್ರತಿ ಮಾಡಿಕೊಂಡು ಬಂದು ನನ್ನ ಹತ್ತಿರ ಇಟ್ಟುಕೊಂಡಿದ್ದೆ. ಎಲ್ಲೋ ಮರೆತು, ಆ ನಕಲಿಯನ್ನೇ ನಿನಗೆ ಕಳಿಸಿಬಿಟ್ಟೆ ಎಂದು ಕಾಣುತ್ತದೆ. ಇದು ನನ್ನ ಹತ್ತಿರವೇ ಇರಲಿ ನೀಲಾ...."

ಎಂದು ಹೇಳಿ, ಮೂಗುತಿಯನ್ನು ತನ್ನ ಕಿಸೆಗೆ ಸೇರಿಸಿ, ಲಲಿತಮ್ಮನತ್ತ ಒಮ್ಮೆ ದುರುಗುಟ್ಟಿ ನೋಡಿ, ಮನೆಯೇ ನಡುಗುವಂತೆ ಹೆಜ್ಜೆ ಹಾಕುತ್ತಾ, ಹಜಾರವನ್ನು ದಾಟಿ ಮಹಡಿಯನ್ನು ಹತ್ತಿ ಹೋದ.

ಆ ಹೆಜ್ಜೆಯ ಸದ್ದನ್ನು ಕೇಳಿ ಆ ಹೆಂಗಸರಿಬ್ಬರೂ ಗಡಗಡ ನಡುಗಿದರು.

ಆ ರೀತಿ ಹೆಜ್ಜೆಯ ಸದ್ದು ಮಾಡಿದ ಮಾಧವರಾಯನ ಮೈಯೂ ಗಡಗಡ ನಡುಗುತ್ತಿತ್ತು.

